# ನವಕರ್ನಾಟಕ ಪ್ರಕಾಶನದ ಇತ್ತೀಚಿನ ಕೃತಿಗಳು



₹ 225



₹ 90



₹ 100



₹ 60



₹ 450



₹ 50



₹ 225



₹ 50



₹ 50



₹ 180



₹ 120



₹ 75

ಪುಸ್ತಕಗಳ ಬೆಲೆಗಳ ಮೇಲೆ ಶೇಕಡ 10ರ ಸೋಡಿ. 3 ವರ್ಷದ 'ಹೊಸತು' ಚಂದಾದಾರರಿಗೆ 20% ವಿಶೇಷ ರಿಯಾಯಿತಿ. ಅಂಚೆ ವೆಚ್ಚ ಪ್ರತ್ಯೇಕ (3 ಪುಸ್ತಕಗಳವರೆಗೆ ₹ 30, 4 ರಿಂದ 6 ಪುಸ್ತಕಗಳಿಗೆ ₹ 40; 6ಕ್ಕಿಂತ ಹೆಚ್ಚು ₹ 50). ಹಣವನ್ನು ಎಂ. ಓ./ಡಿ. ಡಿ. ಮಾಡಿ ಕೆಳಕಂಡ ವಿಳಾಸಕ್ಕೆ ಕಳುಹಿಸಿ




## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – 560 001

ದೂರವಾಣಿ : 30578022, 22203580 ಫ್ಯಾಕ್ಸ್ : 30578023

e-mail : navakarnataka@gmail.com URL :www.navakarnataka.com

ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



**ಚಿತ್ರಗಳು :** ಉಮೇಶ್ ಹಿರೇಮಠ, ವಿ. ಗೋಪಾಲ್, ಪ್ರತೀಕ್ ಸಿನ್ಹಾ,
ಕಮಲಂ ಅರಸು, ಶ್ರೀಹರಿ, ರವಿ ಹೆಗ್ಗಡಿ, ಗೋಪಿ, ಐ. ಬಿ. ರಾಠೋಡ್

**ಮುಖಚಿತ್ರ :** ಮಲಾಲಾ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ

## ಈ ತಿಂಗಳು

ಪ್ರಸ್ತುತ ಲೇಖಕ ಈಚೆಗೆ ಮಹಾರಾಷ್ಟ್ರದ ಮುಂಬೈ ಮತ್ತು ಲೋನಾವ್ಲಾಗಳಿಗೆ ಭೇಟಿ ನೀಡಿದಾಗ ಒಂದು ವಿಶೇಷ ಬೆಳವಣಿಗೆಯನ್ನು ಗಮನಿಸಿದ. ಮೊದಲ ಭೇಟಿ ೧೯೬೨ರ ಅಕ್ಟೋಬರ್‌ನಲ್ಲಿ, ಅಂದರೆ ಐವತ್ತು ವರ್ಷಗಳ ಹಿಂದೆ. ಆಗ ಲೋನಾವ್ಲಾದಲ್ಲಿ ಕಂಡುಬರುತ್ತಿದ್ದ ಅಂಶಗಳಲ್ಲಿ ಕೆಲವು ಇವು : ಊರಿನ ರಸ್ತೆಗಳಲ್ಲಿ ಮತ್ತು ರೈಲ್ವೆ ನಿಲ್ದಾಣದಲ್ಲಿ ಹತ್ತಾರು ಮಹಿಳೆಯರು ''ಕರವಂದ'' ಎಂಬ ಹಣ್ಣನ್ನು ಮುತ್ತುಗದ ಎಲೆಗಳಲ್ಲಿ ಸುತ್ತಿ ತಂದು ಮಾರುತ್ತಿದ್ದರು. ಹತ್ತು ಪೈಸೆಗೆ ಹದಿನೈದು-ಇಪ್ಪತ್ತು ಹಣ್ಣುಗಳು. ಅವನ್ನು ಬೆಟ್ಟಗಳಿಂದ ಕಿತ್ತು ತರುತ್ತಿದ್ದರು. ಈ ಮಹಿಳೆಯರು ಬೆಟ್ಟಗುಡ್ಡಗಳಲ್ಲಿ ವಾಸಿಸುತ್ತಿದ್ದ ಬುಡಕಟ್ಟು ಜನಾಂಗಗಳವರು. ಭಿವಂಡಿ ಮತ್ತು ಠಾಣೆ ಜಿಲ್ಲೆಗಳಲ್ಲಿ ಇವರು ದೊಡ್ಡ ಸಂಖ್ಯೆಯಲ್ಲಿದ್ದರು. ಅವರ ಉಡುಪು ತೀರಾ ಸಾಧಾರಣ. ಫ್ಯಾಶನ್‌ಗಾಗಿ ಕಡಿಮೆ ಬಟ್ಟೆ ತೊಡುವವರು ನಮ್ಮಲ್ಲಿ ಕಳೆದೆರಡು ದಶಕಗಳಲ್ಲಿ ಅಪಾರವಾಗಿ ಹೆಚ್ಚಾಗಿದ್ದಾರೆ. ಅಥವಾ, ಹೆಚ್ಚಾಗಿಲ್ಲದಿದ್ದರೂ ವೃತ್ತಪತ್ರಿಕೆಗಳ ಪುರವಣಿಗಳು ಅಂತಹ ಭಾವನೆ ಮೂಡಿಸುತ್ತವೆ. ಕರವಂದ ಮಾರುತ್ತಿದ್ದ ಬುಡಕಟ್ಟು ಮಹಿಳೆಯರು ಫ್ಯಾಶನ್‌ಗಾಗಿ ಏನನ್ನೂ ಮಾಡಿದವರಲ್ಲ. ಕಂಕುಳಲ್ಲಿ ಮಗು, ತಲೆಯ ಮೇಲೆ ಬುಟ್ಟಿ, ಒಂದು ಕೈಯಲ್ಲಿ ಕಾಗದದ ಚೂರುಗಳು. ನಾವೆಷ್ಟೋ ಮಂದಿ ಅವರಿಂದ ಹಣ್ಣು ಕೊಳ್ಳದೆ, ನೇರವಾಗಿ ಬೆಟ್ಟಕ್ಕೇ ಹೋಗಿ ಹಣ್ಣು ಕಿತ್ತು ತಿನ್ನುತ್ತಿದ್ದುದುಂಟು. ಈಗ ಐವತ್ತು ವರ್ಷಗಳ ನಂತರ ಬೆಟ್ಟಕ್ಕೆ ಹೋಗಬೇಕಾದರೆ ಗಿಜಿಗಿಜಿ ಜನರ ನಡುವೆ ಹಾಯ್ದುಹೋಗಬೇಕು, ಬೆಟ್ಟಕ್ಕೆ ಹೋದರೆ ಅಲ್ಲಿ ಹಣ್ಣಿಲ್ಲ. ಬುಡಕಟ್ಟು ಜನಾಂಗದ ಮಹಿಳೆಯರೂ ರೈಲ್ವೆ ನಿಲ್ದಾಣಗಳಲ್ಲಿ ಹಿಂದಿನಂತೆ ಕಾಣುವುದಿಲ್ಲ. ಲಕ್ಷಣವಾಗಿ ಬಟ್ಟೆ ತೊಟ್ಟು ಈಗ ಅವರು ಚಿಕ್ಕಿ ಮಾರುತ್ತಾರೆ, ಚಿಪ್ಸ್ ಮಾರುತ್ತಾರೆ, ''ಮಿನರಲ್ ವಾಟರ್'' ಮಾರುತ್ತಾರೆ ! ಅದರಲ್ಲಿ ಯಾವ ಮಿನರಲ್ ಇದೆಯೋ ಅವರಿಗೂ ತಿಳಿಯದು, ಅದನ್ನು ಕೊಂಡು ಕುಡಿಯುವುವವರಿಗೂ ತಿಳಿಯದು. ಬಹುಶಃ ಅದು ಸನಿಹದ ತುಂಗರ್ಲಿ ಅಣೆಕಟ್ಟಿನಿಂದ ತಂದು ತುಂಬಿದ ನೀರೇ ಇರಬೇಕು. ಊರಿನಲ್ಲಿ ಮತ್ತು ಊರ ಹೊರಗೆ ಎಲ್ಲೂ ಓಡಾಡಲು ಮೊದಲಿನಂತೆ ಈಗ ಜಾಗ ಉಳಿದಿಲ್ಲ; ಎಲ್ಲಿ ನೋಡಿದರೂ ಮನೆಗಳು, ರಿಸಾರ್ಟ್‌ಗಳು, ಹೊಟೇಲುಗಳು ಮತ್ತು ಮುಂಬೈನ ಭಾರಿ ಶ್ರೀಮಂತರ ಬಂಗಲೆಗಳು. ಇದನ್ನು ಬಿಟ್ಟರೆ ಬೇರೆಯಂತೆ ಬದಲಾವಣೆಗಳು, ಬೆಂಗಳೂರು ಸೇರಿದಂತೆ ಬೇರೆ ಊರುಗಳಲ್ಲಿ ನಡೆದಿರುವಂತೆಯೇ ಇವೆ. ಅವುಗಳ ಪೈಕಿ ಕೆಲವು ಸ್ವಾಗತಾರ್ಹ, ಇನ್ನು ಕೆಲವು ಸ್ವಾಗತಾರ್ಹವಲ್ಲದಿದ್ದರೂ ಅನಿವಾರ್ಯವಾಗಿ ಅವನ್ನು ಒಪ್ಪಿಕೊಂಡಿದ್ದೇವೆ. ಬೆಂಗಳೂರಿನ ಎತ್ತಲಾಗದ ಕಸ ಇದ್ದಂತೆ ! ಅತ್ಯಂತ ಸ್ವಾಗತಾರ್ಹವಾದ್ದು ಬುಡಕಟ್ಟು ಜನಾಂಗಗಳ ಮಹಿಳೆಯರಲ್ಲಿ ಉಂಟಾಗಿರುವ ಬದಲಾವಣೆ. ಹಾಗೆಂದರೆ ಕೆಲವರಿಗೆ ಅಸಮಾಧಾನ ಇರುತ್ತದೇನೊ, ಏಕೆಂದರೆ ಅವರ ಪ್ರಕಾರ ಬುಡಕಟ್ಟಿನವರು ಹಿಂದೆಯಂತೆ ಉಳಿದಿದ್ದರೆ ಮಾತ್ರ ಅವರ ಸಂಸ್ಕೃತಿಯು ಅಧ್ಯಯನಯೋಗ್ಯವಾಗುತ್ತದೆ. ಪ್ರಸ್ತುತ ಲೇಖಕ ಉಳಿದುಕೊಂಡಿದ್ದ ಜಾಗದಲ್ಲಿ ಬುಡಕಟ್ಟು ಮಹಿಳೆಯರು ಆರೇಳು ಜನ ಕೆಲಸಕ್ಕೆ ಬರುತ್ತಿದ್ದರು : ಆಸ್ಪತ್ರೆಯಲ್ಲಿ, ಪುಸ್ತಕ ಭಂಡಾರದಲ್ಲಿ ಮತ್ತು ಭೋಜನಶಾಲೆಯಲ್ಲಿ. ಅವರಲ್ಲಿ ಇಬ್ಬರ ಮಕ್ಕಳು ಸ್ಥಳೀಯ ಇಂಜಿನಿಯರಿಂಗ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದಾರೆ. ಪ್ರಯಾಣಿಕರಿಗೆ ಕರವಂದ ಹಣ್ಣು ಇಲ್ಲವಾದರೇನಂತೆ, ಈ ಕುಟುಂಬಗಳು ತಮ್ಮದೇ ರೀತಿಯಲ್ಲಿ ನೆಮ್ಮದಿ ಕಂಡುಕೊಂಡಿವೆ. ಲೋನಾವ್ಲಾದಲ್ಲಿ ಹಿಂದೆ ಇರಲು ಸಾಧ್ಯವಿಲ್ಲದಿದ್ದ ಒಂದು ಸಂಗತಿ ಇಂದು ಕಣ್ಣಿಗೆ ರಾಚುವಂತಿದೆ : ಹಿಂದೆ ಡಾ॥ ಅಂಬೇಡ್ಕರ್ ಅವರ ಮುದ್ರಿತ ಪೋಸ್ಟರುಗಳು ಆಗಾಗ್ಗೆ ಗೋಡೆಗಳ ಮೇಲೆ ಕಾಣಿಸಿಕೊಳ್ಳುತ್ತಿದ್ದುವು. ರೈಲ್ವೆ ನೌಕರರಲ್ಲಿ ದಲಿತರು ಅವನ್ನು ಹೆಚ್ಚಾಗಿ ಹಚ್ಚುತ್ತಿದ್ದರು. ಈಗ ಪೋಸ್ಟರುಗಳಿಲ್ಲ, ದೊಡ್ಡ ದೊಡ್ಡ ಫ್ಲೆಕ್ಸಿ ಜಾಹಿರಾತು ಫಲಕಗಳಿವೆ. ಅವುಗಳಲ್ಲಿ ಒಂದು ಜಾಹಿರಾತು ಊರಿನ ನಾಲ್ಕಾರು ಜಾಗಗಳಲ್ಲಿ ಪ್ರದರ್ಶಿತಗೊಂಡಿತ್ತು; ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯ ಹೆಸರಿನಲ್ಲಿ ಅದು ರಾರಾಜಿಸುತ್ತಿತ್ತು. ಕಂಸಗಳಲ್ಲಿ 'ಅಠಾವಲೆ' ಎಂದಿತ್ತು. ಅಂದರೆ, ಪಕ್ಷ ಛಿದ್ರಗೊಂಡಿದೆ.

(೬ನೇ ಪುಟಕ್ಕೆ)




ಸಂಪುಟ-೧೪ ಸಂಚಿಕೆ-೫ ಡಿಸೆಂಬರ್ ೨೦೧೨

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@gmail.com
hosathu@gmail.com
hosathu.nkp@gmail.com
URL : www.navakarnataka.com
http : //navakarnataka.blogspot.in
http : //hosathumonthly.blogspot.in

# ರಾಜ್ಯಗಳು ಹಲವು, ಗುರಿ ಒಂದೇ : ಮೇರಾ ಭಾರತ್ ಮಹಾನ್




ಈಚೆಗೆ ೧೬-೧೧-೨೦೧೨ರಂದು ಬೆಂಗಳೂರಿನಲ್ಲಿ ದಕ್ಷಿಣ ಭಾರತದ ಐದು ರಾಜ್ಯಗಳ ‘೨೫ನೇ ದಕ್ಷಿಣ ಪ್ರಾಂತೀಯ ಪರಿಷತ್’ ಸಭೆ ನಡೆಯಿತು. ಕೇಂದ್ರದ ಗೃಹಸಚಿವ ಸುಶೀಲ್ ಕುಮಾರ ಶಿಂಧೆ ಸಭೆಯ ಅಧ್ಯಕ್ಷತೆ ವಹಿಸಿದ್ದರು. ಕರ್ನಾಟಕ, ಆಂಧ್ರಪ್ರದೇಶ, ಪಾಂಡಿಚೇರಿಯ ಮುಖ್ಯಮಂತ್ರಿಗಳು ಹಾಗೂ ತಮಿಳುನಾಡು, ಕೇರಳ ಸರಕಾರದ ಪ್ರತಿನಿಧಿಗಳು ಈ ಸಭೆಯಲ್ಲಿ ಭಾಗವಹಿಸಿದ್ದರು. ಕಾವೇರಿ, ಕೃಷ್ಣಾ ವಿವಾದದ ಸಂದರ್ಭದಲ್ಲಿ ಪರಸ್ಪರ ಆರೋಪ, ಪ್ರತ್ಯಾರೋಪ ಮಾಡುತ್ತಿದ್ದ ಈ ದಕ್ಷಿಣ ರಾಜ್ಯಗಳ ಮುಖ್ಯಸ್ಥರು ಕೇಂದ್ರದ ಮಧ್ಯಸ್ಥಿಕೆಯಲ್ಲಿ ಸೇರಿ ದಕ್ಷಿಣ ರಾಜ್ಯಗಳ ಅಭಿವೃದ್ಧಿಯ ಕುರಿತು ಪರಸ್ಪರ ಅಭಿಪ್ರಾಯ ವಿನಿಮಯ ಮಾಡಿಕೊಂಡು ಕಾರ್ಯರೂಪಗೊಳಿಸುವುದು ಸ್ವಾಗತಾರ್ಹವೇ ಸರಿ. ಆದರೆ ಬೆಂಗಳೂರಿನಲ್ಲಿ ಸೇರಿ ಇವರೆಲ್ಲ ದಕ್ಷಿಣ ಭಾರತದ ರಾಜ್ಯಗಳ ಅಭಿವೃದ್ಧಿಗೆ ಕೈಗೊಂಡ ತೀರ್ಮಾನಗಳನ್ನು ನೋಡಿದರೆ ಇವರಾರೂ ಈ ರಾಜ್ಯಗಳ ಜನತೆಯ ಹಿತಾಸಕ್ತಿ ಬಯಸುವ ನಾಯಕರಲ್ಲ ಎಂಬುದು ಸ್ಪಷ್ಟವಾಗುತ್ತದೆ. ಈ ಸಭೆಯಲ್ಲಿ ಕೈಗೊಂಡ ತೀರ್ಮಾನಗಳ ಎರಡು ವಿಷಯಗಳನ್ನೇ ಗಮನಿಸಿದರೆ ಇವರ ಉದ್ದೇಶ ಅರ್ಥವಾಗುತ್ತದೆ. ಬಂಡವಾಳ ಹೂಡಲು ಬರುವ ಬಂಡವಾಳಗಾರರಿಗೆ ದಕ್ಷಿಣ ರಾಜ್ಯಗಳಲ್ಲಿ ಏಕರೂಪ ತೆರಿಗೆ ರಿಯಾಯಿತಿ ನೀತಿಯನ್ನು ರೂಪಿಸುವುದು; ಬಂಡವಾಳ ಆಕರ್ಷಣೆಗೆ ಪರಸ್ಪರ ಪೈಪೋಟಿಯನ್ನು ತಪ್ಪಿಸುವುದು. ಇದು ಆದ್ಯತೆಯ ಮೇಲೆ ಸರ್ವಾನುಮತದಿಂದ ತೆಗೆದುಕೊಂಡ ನಿರ್ಣಯ. ಹಿಂದೆ ಕರ್ನಾಟಕದಲ್ಲಿ ಎಸ್. ಎಂ. ಕೃಷ್ಣ, ಆಂಧ್ರದಲ್ಲಿ ಚಂದ್ರಬಾಬು ನಾಯ್ಡು ಮುಖ್ಯಮಂತ್ರಿಗಳಾಗಿದ್ದ ಸಂದರ್ಭದಲ್ಲಿ ಅಂದಿನ ಅಮೆರಿಕದ ಅಧ್ಯಕ್ಷರು ಭಾರತಕ್ಕೆ ಭೇಟಿ ನೀಡಿದ್ದರು. ಆಗ ಅಮೆರಿಕ ಅಧ್ಯಕ್ಷರನ್ನು ದಕ್ಷಿಣ ರಾಜ್ಯಗಳ ಪೈಕಿ ಆಂಧ್ರಕ್ಕೆ ಕರೆತರಬೇಕೋ ಕರ್ನಾಟಕಕ್ಕೆ ತರಬೇಕೋ ಎಂಬ ಕುರಿತು ಇಬ್ಬರೂ ಮುಖ್ಯಮಂತ್ರಿಗಳಲ್ಲಿ ಪೈಪೋಟಿ ನಡೆದಿತ್ತು. ಅಮೆರಿಕದ ಅಧ್ಯಕ್ಷ ಮಹಾಶಯರನ್ನು ಆಮಂತ್ರಿಸಿ ಅತಿಥಿ ಸತ್ಕಾರದ ಸುಖವನ್ನು ಅನುಭವಿಸಲು ಸ್ಪರ್ಧೆಯೇ ಏರ್ಪಟ್ಟಿತ್ತು. ಇದು ನಮ್ಮ ಗುಲಾಮಗಿರಿಯ ಸಂಸ್ಕೃತಿಯನ್ನು ತೋರಿಸುತ್ತದೆ. ಇಂದು ದಕ್ಷಿಣ ಭಾರತದ ಐದೂ ರಾಜ್ಯಗಳ ಮುಖ್ಯಸ್ಥರು ಬಂಡವಾಳಗಾರರನ್ನು ಕರೆತರಲು ತೆರಿಗೆ ರಿಯಾಯ್ತಿಗಳನ್ನು ಒಮ್ಮತದಿಂದ ಘೋಷಿಸಲು ತೀರ್ಮಾನಿಸಿದ್ದಾರೆ. ನಮ್ಮ ದೇಶದ ಪ್ರಧಾನಿ ಈಗಾಗಲೇ ಪ್ರತಿ ವರ್ಷ ನಾಲ್ಕರಿಂದ ಐದು ಲಕ್ಷ ಕೋಟಿ ರೂಪಾಯಿಯಷ್ಟು ತೆರಿಗೆ ವಿನಾಯಿತಿಯನ್ನು ಕಾರ್ಪೊರೇಟ್ ಹೌಸ್‌ಗಳಿಗೆ ನೀಡಿ ತಮ್ಮ ಪ್ರಜಾ ಪ್ರೀತಿಯನ್ನು ಸಾಬೀತು ಪಡಿಸಿದ್ದಾರೆ. ಈಗ ನಮ್ಮ ಮುಖ್ಯಮಂತ್ರಿಗಳೂ ಅಂಥ ಘನಕಾರ್ಯಕ್ಕೆ ಮುಂದಾಗಿದ್ದಾರೆ. ಈ ಸಭೆಯ ಇನ್ನೊಂದು ಮಹತ್ವದ ತೀರ್ಮಾನವೆಂದರೆ ನಕ್ಸಲ್ ಸಮಸ್ಯೆ ಪರಿಹರಿಸಲು ಐದೂ ರಾಜ್ಯಗಳು ಗುಪ್ತದಳದ ಮಾಹಿತಿ ವಿನಿಮಯಕ್ಕೆ ಒಪ್ಪಿಕೊಂಡಿದ್ದು. ಇಲ್ಲಿ ನಕ್ಸಲರು ಎತ್ತಿರುವ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ಯಾವುದೇ ಚರ್ಚೆಯಿಲ್ಲ. ಪ್ರಶ್ನೆ ಎತ್ತಿದವರ ಮೇಲೆ ಪ್ರಹಾರ ನಡೆಸಲು ಪರಸ್ಪರ ಸಹಕಾರಕ್ಕಾಗಿ ಒಪ್ಪಂದಗಳು ನಡೆಯುತ್ತಿವೆ. ನಕ್ಸಲರು ಎತ್ತಿದ ಪ್ರಶ್ನೆಗಳು ಜನತೆಯ, ಆದಿವಾಸಿ, ಗುಡ್ಡಗಾಡು ಜನರ ವಿಷಯಗಳು. ಕರ್ನಾಟಕದ ಪಶ್ಚಿಮ ಘಟ್ಟದ ಕುದುರೆಮುಖ ಅರಣ್ಯಪ್ರದೇಶದಲ್ಲಿ ನಕ್ಸಲ್ ಚಟುವಟಿಕೆ ತೀವ್ರವಾದಾಗ ಅಂದಿನ ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ೬೦ ಕೋಟಿ ರೂಪಾಯಿಗಳ ಪ್ಯಾಕೇಜ್‌ಅನ್ನು ಆದಿವಾಸಿಗಳ ಸಲುವಾಗಿ ನೀಡಿದರು. ಆ ದುಡ್ಡು ಯಾವ ಘನಕಾರ್ಯಕ್ಕೆ ಪ್ರಯೋಜನವಾಯಿತು ಎಂಬ ಮಾಹಿತಿ ಇವತ್ತಿಗೂ ಸಿಕ್ಕಿಲ್ಲ. ನಕ್ಸಲರು ಎತ್ತಿದ ಪ್ರಶ್ನೆಗಳು ಮೂಲಭೂತ ಪ್ರಶ್ನೆಗಳಾಗಿದ್ದರೆ, ಸಾಮಾನ್ಯ ಜನ ಎತ್ತಿರುವ ಇತರ ಪ್ರಶ್ನೆಗಳಿಗೂ ಈ ಸರಕಾರಗಳು ಉತ್ತರ ನೀಡುತ್ತಿಲ್ಲ.

ಕರ್ನಾಟಕ ತನ್ನ ಗಡಿ ರಾಜ್ಯಗಳ ನಡುವೆ ಹಲವಾರು ಸಮಸ್ಯೆಗಳ ಕುರಿತು ಮಾತುಕತೆ ನಡೆಸಬೇಕಿದೆ. ಮುಖ್ಯವಾಗಿ ಜನರ ಆರೋಗ್ಯ ಸಮಸ್ಯೆಯನ್ನೇ ತೆಗೆದುಕೊಂಡರೆ ಬೆಂಗಳೂರಿಗೆ ತಮಿಳುನಾಡು ಗಡಿ ಜಿಲ್ಲೆಗಳಿಂದ ಪ್ರತಿದಿನ ಸಾವಿರಾರು ಜನ ಆರೋಗ್ಯ ಸಮಸ್ಯೆ ಹೊತ್ತು ಬರುತ್ತಾರೆ. ಅದೇರೀತಿ ಹೈದರಾಬಾದ್ ಕರ್ನಾಟಕ ಪ್ರದೇಶದ ಬೀದರ, ಗುಲಬರ್ಗಾ, ಯಾದಗೀರ, ರಾಯಚೂರು ಜಿಲ್ಲೆಗಳ ಜನ ಗಂಭೀರ ಖಾಯಿಲೆಗಳಾದಾಗ ಹೈದರಾಬಾದ್‌ಗೆ ಹೋಗುತ್ತಾರೆ. ಅದೇರೀತಿ ಕಾಸರಗೋಡು ಸುತ್ತಮುತ್ತಲ ಜನ ಮಂಗಳೂರು, ಮಣಿಪಾಲ್‌ಗೆ ಬರುತ್ತಾರೆ. ವಿಜಾಪೂರ, ಬಾಗಲಕೋಟೆ ಜನ ಮೀರಜ್‌ಗೆ ಹೋಗುತ್ತಾರೆ. ಆಂಧ್ರಪ್ರದೇಶದ ಅನಂತಪುರ, ಕರ್ನೂಲ್ ಜಿಲ್ಲೆಗಳ ಗಡಿಯ ಜನರು ಬಳ್ಳಾರಿಗೆ ಬರುತ್ತಾರೆ. ಹೀಗೆ ಗಡಿಪ್ರದೇಶದ ಜನತೆ ತಮ್ಮ ಅನಾರೋಗ್ಯ ಚಿಕಿತ್ಸೆಗಾಗಿ ಪರ ರಾಜ್ಯಗಳ ಸಮೀಪದ ಪ್ರಮುಖ ನಗರಗಳಿಗೆ ಆರೋಗ್ಯ ಪಡೆಯಲು ಪರದಾಡುತ್ತಾರೆ. ಅಲ್ಲಿನ ಬಡಜನರಂತೂ ಗಡಿ ದಾಟುವ ಸಾಮರ್ಥ್ಯ ಇಲ್ಲದೆ ಸಾವಿಗೆ ಶರಣಾಗುತ್ತಾರೆ. ಬೆಂಗಳೂರಿನಲ್ಲಿ ಈ ಐದೂ ರಾಜ್ಯಗಳ ಸರಕಾರದ ಪ್ರತಿನಿಧಿಗಳು ಕೇಂದ್ರದ ಗೃಹಮಂತ್ರಿ ಅಧ್ಯಕ್ಷತೆಯಲ್ಲಿ ಬಂಡವಾಳ ಹೂಡಿಕೆದಾರರಿಗೆ ವಿನಾಯಿತಿಗಳನ್ನು ಹೇಗೆ ನೀಡಬೇಕು ಎಂಬ ಗಂಭೀರ ಚಿಂತನೆಯಲ್ಲಿದ್ದಾಗ, ಅದೇ ದಿನ ಕೇಂದ್ರ ಗ್ರಾಮೀಣಾಭಿವೃದ್ಧಿ ಸಚಿವ ಜೈರಾಮ ರಮೇಶ ನಮ್ಮ ದೇಶದಲ್ಲಿ ಆರೋಗ್ಯ ವ್ಯವಸ್ಥೆ ಕೆಟ್ಟುಹೋಗಿದೆ, ರಾಜ್ಯಗಳು ಆ ಕಡೆಗೆ ಗಮನ ಕೊಡುತ್ತಿಲ್ಲ ಎಂದು ಹೇಳಿದ್ದಾರೆ. ರಾಜ್ಯಗಳು ಆರೋಗ್ಯ ಕ್ಷೇತ್ರದಲ್ಲಿ ಹೆಚ್ಚಿನ ಹೂಡಿಕೆ ಮಾಡುತ್ತಿಲ್ಲ, ದೇಶದ ಆರೋಗ್ಯ ಕ್ಷೇತ್ರದಲ್ಲಿ ಶೇ. ೭೦ರಷ್ಟು ಖಾಸಗಿ ಹೂಡಿಕೆ ಇದೆ ಎಂದು ಹೇಳಿದ್ದಾರೆ. ನಮ್ಮ ದೇಶದ ಆರೋಗ್ಯ ವ್ಯವಸ್ಥೆ ಕೀನ್ಯಾ, ಬಾಂಗ್ಲಾದೇಶಗಳಿಗಿಂತ ಕಳಪೆ ಮಟ್ಟದಲ್ಲಿದೆ ಎಂದೂ ಹೇಳಿದ್ದಾರೆ. ಒಂದು ಕಡೆ ಗೃಹಮಂತ್ರಿ ಅಧ್ಯಕ್ಷತೆಯಲ್ಲಿ

ಖಾಸಗಿ ಬಂಡವಾಳಕ್ಕೆ ಅನುಕೂಲ ಮಾಡಿಕೊಡುವ ಕುರಿತು ಮುಖ್ಯಮಂತ್ರಿಗಳ ಸಭೆ ನಡೆಯುತ್ತದೆ. ಈ ನೆಲದ ಸಂಪನ್ಮೂಲವನ್ನು ಬಹುರಾಷ್ಟ್ರೀಯ ಹಾಗೂ ಗುತ್ತೇದಾರಿ ಬಂಡವಾಳಗಾರರಿಗೆ ರಿಯಾಯಿತಿ ಮೇಲೆ ಹೇಗೆ ಒದಗಿಸಬೇಕೆಂಬ ಚರ್ಚೆ ನಡೆಯುತ್ತದೆ. ಇನ್ನೊಂದೆಡೆ ಗ್ರಾಮೀಣಾಭಿವೃದ್ಧಿ ಮಂತ್ರಿ ಆರೋಗ್ಯ ಕ್ಷೇತ್ರದಲ್ಲಿ ರಾಜ್ಯ ಸರಕಾರಗಳು ಹೆಚ್ಚಿನ ಪಾಲುದಾರಿಕೆ ವಹಿಸಬೇಕೆಂದು ಹೇಳುತ್ತಾರೆ. ಮುಖ್ಯಮಂತ್ರಿಗಳ ಕಿವುಡಿಗೆ ಮದ್ದೇನು ?

ಈ ಐದು ರಾಜ್ಯಗಳ ಮುಖ್ಯಮಂತ್ರಿಗಳು ಕನಿಷ್ಠ ಈ ರಾಜ್ಯಗಳ ಗಡಿಪ್ರದೇಶಗಳ ರಸ್ತೆ ಕುರಿತಾದರೂ ಚರ್ಚಿಸಬೇಕಿತ್ತು. ಹೆದ್ದಾರಿಗಳನ್ನು ಹೊರತುಪಡಿಸಿದರೆ ಇತರ ಭಾಗಗಳಲ್ಲಿ ಪಕ್ಕದ ರಾಜ್ಯಕ್ಕೆ ಸಂಪರ್ಕ ಕಲ್ಪಿಸುವ ರಸ್ತೆಗಳನ್ನು ರಸ್ತೆಗಳೆಂದು ಕರೆಯಲೂ ಸಾಧ್ಯವಿಲ್ಲ. ಈ ಸಭೆಯಲ್ಲಿ ದೇಶದ ವಿವಿಧ ಕೈಗಾರಿಕಾ ಪ್ರದೇಶಗಳಿಗೆ ಸಂಪರ್ಕ ಕಲ್ಪಿಸುವ ಪರ್ಯಾಯ ಪ್ರಾದೇಶಿಕ ಕೈಗಾರಿಕಾ ಅಭಿವೃದ್ಧಿ ಕಾರಿಡಾರ್ (ಪ್ರೈಡ್) ಯೋಜನೆ ಬಗ್ಗೆ ಗಂಭೀರ ಚರ್ಚೆ ನಡೆಯುತ್ತದೆ. ಇವೆಲ್ಲ ಕೈಗಾರಿಕಾ ಅಭಿವೃದ್ಧಿ, ಅದೂ ಬಹುರಾಷ್ಟ್ರೀಯ ಕಂಪನಿಗಳಿಗೆ ಅನುಕೂಲವಾಗುವ ರೀತಿಯಲ್ಲಿ ನಡೆಯುವ ಚರ್ಚೆಗಳು. ಗ್ರಾಮೀಣ ಆರೋಗ್ಯ, ಗಡಿಪ್ರದೇಶದ ರಸ್ತೆಗಳು, ಕುಡಿವ ನೀರಿನ ವ್ಯವಸ್ಥೆ, ಶಿಕ್ಷಣದ ಅಭಿವೃದ್ಧಿ ಈ ಎಲ್ಲ ವಿಷಯಗಳೂ ಈ ದಕ್ಷಿಣ ಭಾರತದ ರಾಜ್ಯಗಳ ಮುಖ್ಯಮಂತ್ರಿಗಳಿಗೆ, ಅಧ್ಯಕ್ಷತೆ ವಹಿಸಿದ ಕೇಂದ್ರ ಮಂತ್ರಿಗೆ ವಿಷಯಗಳೇ ಅಲ್ಲ. ಜನರ ಮೂಲಭೂತ ಸೌಲಭ್ಯಗಳ ಕುರಿತು ಕಾವೇರಿ, ಕೃಷ್ಣಾ ನದಿ ವಿವಾದಗಳಾಚೆಗೂ ಹಲವಾರು ವಿಷಯಗಳಲ್ಲಿ ಪರಸ್ಪರ ಚರ್ಚಿಸಿ ಜನರ ಒಳಿತಿಗೆ ಗಮನಹರಿಸಬೇಕಾದ ಹಲವಾರು ವಿಷಯಗಳಿವೆ. ಆದರೆ ಜನರ ಬೇಕು ಬೇಡಗಳಿಗೆ ಸ್ಪಂದಿಸದೆ ಕೈಗಾರಿಕೋದ್ಯಮಿಗಳ ಹಿತಾಸಕ್ತಿಗೆ ಪೂರಕವಾದ ತೀರ್ಮಾನ ತೆಗೆದುಕೊಳ್ಳಲು ಇಂಥ ಶೃಂಗಸಭೆಗಳನ್ನು ನಡೆಸಲಾಗುತ್ತಿದೆ. ಇದೇ ಸಂದರ್ಭದಲ್ಲಿ ಜನರ ಪ್ರಶ್ನೆಗಳನ್ನು ಮುಂದಿಟ್ಟುಕೊಂಡು ಹೋರಾಡುವವರನ್ನು ಸದೆಬಡೆಯಲು ನೀತಿಗಳನ್ನು ರೂಪಿಸಲಾಗುತ್ತಿದೆ. ಇಲ್ಲಿ ನಕ್ಸಲ್‌ರು ಒಂದು ನೆಪ ಮಾತ್ರ. ಅಂತರರಾಜ್ಯ ಗುಪ್ತಚರ ಮಾಹಿತಿಗಳ ವಿನಿಮಯ, ಅದಕ್ಕೊಂದು ಅಂತರರಾಜ್ಯ ಸಂಸ್ಥೆ ಹೀಗೆಲ್ಲಾ ಸ್ಥಾಪಿಸಿ ಬರುವ ದಿನಗಳಲ್ಲಿ ನಕ್ಸಲರನ್ನೂ ಸೇರಿದಂತೆ ಉಂಟಾಗುವ ಎಲ್ಲ ರೀತಿಯ ಪ್ರತಿರೋಧವನ್ನು ಸದೆಬಡೆಯಲು ಈ ತಯಾರಿ.

ಒಟ್ಟಿನಲ್ಲಿ ಈ ಸಭೆಯಲ್ಲಿ ಇತರ ವಿಷಯಗಳಾದ ವಿದ್ಯುತ್ ಸಮಸ್ಯೆ, ಪ್ರವಾಸೋದ್ಯಮ ಹೀಗೆ ಎಲ್ಲ ವಿಷಯಗಳೂ ಈ ನಾಡಿನ ಜನರಿಗೆ ಸಂಬಂಧಿಸಿದ ರೀತಿಯಲ್ಲಿ ಚರ್ಚಿಸಲಾದ ವಿಷಯಗಳಲ್ಲ. ನಮ್ಮ ಸರಕಾರಗಳು ಯಾವುದೇ ರಾಜ್ಯದ್ದಿರಲಿ, ಯಾವುದೇ ಬೂರ್ಷ್ವಾ ಪಕ್ಷದ್ದಿರಲಿ ಅವರ ಒಟ್ಟು ಉದ್ದೇಶ ಏನೆಂದು ಇದರಿಂದ ಅರ್ಥವಾಗುತ್ತದೆ.

## ಪಾರ್ಲಿಮೆಂಟಿನ ಚಳಿಗಾಲದ ಅಧಿವೇಶನ ಮತ್ತೆ ಮುಗ್ಗರಿಸೀತೇ !

ಪ್ರತಿಸಲ ಪಾರ್ಲಿಯಮೆಂಟ್ ಸಮಾವೇಶ ಪ್ರಾರಂಭವಾಗುವ ಮುನ್ನ ಪ್ರಕ್ಷುಬ್ಧ ವಾತಾವರಣ ದೆಹಲಿಯಲ್ಲಿ. ಕಳೆದ ಮುಂಗಾರು ಅಧಿವೇಶನ ಭಾಜಪದ ಮೊಂಡುವಾದದಿಂದಾಗಿ ಚರ್ಚೆಯೇ ಇಲ್ಲದೆ ಸಂಪೂರ್ಣವಾಗಿ ಕೊಚ್ಚಿಹೋದದ್ದು ಎಲ್ಲರಿಗೂ ಗೊತ್ತು. ಈಗ ಛಳಿಗಾಲದ ಅಧಿವೇಶನವೂ ಕೂಡ ಅದೇ ಹಾದಿ ಹಿಡಿದಲ್ಲಿ ಆಶ್ಚರ್ಯಪಡಬೇಕಾಗಿಲ್ಲ. ಪಾರ್ಲಿಮೆಂಟ್ ಅಧಿವೇಶನಗಳು ವ್ಯರ್ಥಗೊಂಡು, ಸಾರ್ವಜನಿಕರ ಹಣ ಪೋಲಾಗುವುದನ್ನು ಕುರಿತು 'ಹೊಸತು' ಕಳವಳ ವ್ಯಕ್ತಗೊಳಿಸಿತ್ತು. ನಮ್ಮ ದೇಶದ ಪಾರ್ಲಿಮೆಂಟಿನ ಗಲಭೆ, ಗೊಂದಲಗಳು ನಗೆಪಾಟಲಾಗಿವೆ. ಪಾರ್ಲಿಮೆಂಟ್ ಸಮಾವೇಶ ಎಂದರೆ ಗದ್ದಲದ ಗೂಡು ಎಂಬ ಭಾವನೆ ಬರುತ್ತಿದೆ. ಈ ಪರಿಸ್ಥಿತಿಗೆ ಸರಕಾರ ಎಷ್ಟು ಹೊಣೆಯೋ ಅಷ್ಟೇ ಪ್ರತಿಪಕ್ಷಗಳದ್ದೂ ಆಗಿದೆ. ರಾಜಕೀಯ ಅರಾಜಕತೆಯಿಂದಾಗಿ ಜನಸಾಮಾನ್ಯರ ಗೋಳು ಕೇಳುವವರೇ ಇಲ್ಲವಾಗಿದೆ. ಇಂಥದೇ ಪರಿಸ್ಥಿತಿ ಸಾಮಾನ್ಯವಾಗಿ ರಾಜ್ಯಗಳ ಶಾಸನಸಭೆಗಳಲ್ಲೂ ಕಂಡುಬರುತ್ತಿರುವುದರಲ್ಲಿ ಅಚ್ಚರಿ ಏನಿಲ್ಲ. ಚುನಾವಣೆಗಳು ಸಮೀಪಿಸುತ್ತಿದ್ದ ಹಾಗೇ ಈ ಅಬ್ಬರಗಳು ಮುಗಿಲು ಮುಟ್ಟುತ್ತವೆ.

ಸರಕಾರದ ಜನವಿರೋಧಿ ನೀತಿಗಳು ಹೆಚ್ಚುತ್ತಿವೆಯೇ ಹೊರತು ಕಮ್ಮಿಯಾಗುತ್ತಿಲ್ಲ. ಆರ್ಥಿಕ ಬಿಕ್ಕಟ್ಟು, ಬೆಲೆ ಏರಿಕೆ, ಬೆಳೆಯುತ್ತಿರುವ ನಿರುದ್ಯೋಗಗಳಿಗೆ ಪರಿಹಾರ ಕಂಡುಕೊಳ್ಳದ ಸರಕಾರ ವಿದೇಶೀ ಬಂಡವಾಳದ ಮೊರೆ ಹೋಗಿರುವುದು ಒಂದು ವಿಪರ್ಯಾಸ. ಸರಕಾರ ಕಳೆದ ಎರಡು ದಶಕಗಳಿಂದ ಅನುಸರಿಸುತ್ತ ಬಂದಿರುವ, ಜಾಗತೀಕರಣಕ್ಕೆ ಹೊಂದಿಕೊಳ್ಳುವುದಕ್ಕಾಗಿ ನಡೆಸುತ್ತಿರುವ ಕಸರತ್ತಿನ ಪರಿಣಾಮವಾಗಿ ಪರಿಸ್ಥಿತಿ ಇನ್ನಷ್ಟು ಹದಗೆಟ್ಟಿದೆ. ಯುಪಿಎ-೧ ಸರಕಾರ ಕೊನೆಯ ದಿನಗಳಲ್ಲಿ ಅಮೇರಿಕದೊಂದಿಗೆ ನ್ಯೂಕ್ಲಿಯರ್ ಒಪ್ಪಂದ ಮಾಡಿಕೊಂಡಿತು. ದೇಶದ ಸ್ವತಂತ್ರ ವಿದೇಶಾಂಗ ನೀತಿಯನ್ನು ಕೈಬಿಟ್ಟು ಅಮೆರಿಕದ ಹಿತಾಸಕ್ತಿಗಳ ಜೊತೆ ಹೊಂದಾಣಿಕೆ ಮಾಡಿಕೊಂಡಿದೆ. ಈಗ ಅದೇ ಮನಮೋಹನ ಸಿಂಗ್ ನೇತೃತ್ವದಲ್ಲಿರುವ ಕಾಂಗ್ರೆಸ್ ಕೃಪಾಪೋಷಿತ ಯುಪಿಎ-೨ ಸರಕಾರ ವಿದೇಶೀ ಬಂಡವಾಳಕ್ಕೆ ಹೆಬ್ಬಾಗಿಲು ತೆರೆಯುತ್ತಿದೆ. ದೇಶದ ಚಿಲ್ಲರೆ ವ್ಯಾಪಾರ, ಜೀವವಿಮೆ, ಪೆನ್ಶನ್, ಬ್ಯಾಂಕಿಂಗ್ ಕ್ಷೇತ್ರಗಳಲ್ಲಿ ವಿದೇಶೀ ಬಂಡವಾಳಕ್ಕೆ ಮುಕ್ತ ಅವಕಾಶ ಮಾಡಿಕೊಡಲು ಸರಕಾರ ಮುಂದಾಗಿದೆ. ಈ ಪ್ರಸ್ತಾಪವನ್ನು ಪಾರ್ಲಿಯಮೆಂಟಿನ ಮುಂಗಾರು ಅಧಿವೇಶನದಲ್ಲಿ ತರಲು ವಿಫಲಗೊಂಡ ಸರಕಾರ ಅಧಿವೇಶನ ಮುಗಿಯುತ್ತಿದ್ದ ಹಾಗೆ ಸುಗ್ರೀವಾಜ್ಞೆ ಹೊರಡಿಸಿ ತನ್ನ ಉದ್ದೇಶ ಸಾಧಿಸಿಕೊಂಡಿದೆ. ದೇಶಾದ್ಯಂತ ಇದರ ವಿರುದ್ಧವಾಗಿ ಮುಷ್ಕರಗಳು, ಪ್ರತಿಭಟನೆಗಳು ನಡೆದಿವೆ. ಸರಕಾರದ ಯೋಜನೆಗಳು ಬಂಡವಾಳಗಾರರಿಗೆ, ಶ್ರೀಮಂತರಿಗೆ ಅನುಕೂಲವಾಗಿವೆ, ಜನಸಾಮಾನ್ಯರ ಸ್ಥಿತಿ ದಿನೇ ದಿನೇ ಚಿಂತಾಜನಕವಾಗುತ್ತಿದೆ.

ಛಳಿಗಾಲದ ಅಧಿವೇಶನದಲ್ಲಿ ಪ್ರತಿಪಕ್ಷಗಳಿಗೆ ಸರಕಾರವನ್ನು ತರಾಟೆಗೆ ತೆಗೆದುಕೊಳ್ಳಲು ಬೇಕಾದಷ್ಟು ವಿಷಯಗಳಿವೆ. ೨ಜಿ ಹಗರಣದಿಂದ ಪ್ರಾರಂಭವಾದ ಭ್ರಷ್ಟಾಚಾರದ ಜೊತೆಗೆ, ಕಲ್ಲಿದ್ದಲ ಗಣಿಗಾರಿಕೆ ಪ್ರಕರಣ, ದೇಶದ ಸಂವಿಧಾನಬದ್ಧ


ತಿಂಗಳ ಪತ್ರಿಕೆ
ಹೊಸತು
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ







ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಸ್ಥಾಪಿತ ಲೆಕ್ಕಪತ್ರ ನಿಯಂತ್ರಕ ಮತ್ತು ಪರಿಶೋಧಕರೊಂದಿಗೆ ಸರಕಾರದ ಆಕ್ರೋಶ, ಚಿಲ್ಲರೆ ವ್ಯಾಪಾರದಲ್ಲಿ ಅಮೆರಿಕದ ವಾಲ್‌ಮಾರ್ಟ್‌ನಂಥ ಸಂಸ್ಥೆಗಳ ಪ್ರವೇಶಕ್ಕೆ ಅವಕಾಶ, ಇನ್ಶೂರೆನ್ಸ್ ಮತ್ತು ಬ್ಯಾಂಕಿಂಗ್ ವಲಯದಲ್ಲಿ ವಿದೇಶೀ ಬಂಡವಾಳದ ಪ್ರವೇಶ ಮೊದಲಾದುವೆಲ್ಲ ಇವೆ. ಸದನದಲ್ಲಿ ಇವೆಲ್ಲ ಚರ್ಚೆಯಾಗಬೇಕು ಎನ್ನುವುದು ನಿರೀಕ್ಷೆ. ದಾಯಾದಿ ಮತ್ಸರವೋ ಎಂಬಂತೆ ಯುಪಿಎ ಇಂದ ಹೊರಬಂದಿರುವ ತೃಣಮೂಲ ಕಾಂಗ್ರೆಸ್ ಸರಕಾರದ ವಿರುದ್ಧ ಅವಿಶ್ವಾಸನಿರ್ಣಯ ಮಂಡಿಸಲು ಸಿದ್ಧತೆ ನಡೆಸಿದೆ. ಒಡೆದ ಮನೆಯಾಗಿರುವ ಭಾಜಪ ಹಾಗೂ ಅದರ ನೇತೃತ್ವದ ಎನ್‌ಡಿಎ ಕೂಟದಲ್ಲಿ ಯಾವುದಕ್ಕೂ ಒಮ್ಮತವಿಲ್ಲ, ಸಣ್ಣಪುಟ್ಟ ಪಕ್ಷಗಳು ಇತ್ತಲೂ ಇಲ್ಲ ಅತ್ತಲೂ ಇಲ್ಲ ಎನ್ನುವಂತೆ ಅಡ್ಡಗೋಡೆಯ ಮೇಲಿವೆ. ಸರಕಾರವು ಮಾಯಾವತಿ ನೇತೃತ್ವದ ಬಹುಜನ ಸಮಾಜ ಪಕ್ಷ ಮತ್ತು ಮುಲಾಯಮ್ ಸಿಂಗ್ ನೇತೃತ್ವದ ಸಮಾಜವಾದಿ ಪಕ್ಷಗಳನ್ನು ಓಲೈಸುತ್ತಿದೆ. ಪಾರ್ಲಿಮೆಂಟ್ ಅಧಿವೇಶನದ ಪೂರ್ವಭಾವಿಯಾಗಿ ಕಾಂಗ್ರೆಸ್ ಸಮರ ತಂತ್ರ ರೂಪಿಸಲು, ಚುನಾವಣೆಗಳಿಗೆ ಸಿದ್ಧತೆ ನಡೆಸಲು ಈಚೆಗೆ ಚಿಂತನಮಂಥನ ನಡೆಸಿತ್ತು. ವಂಶಪಾರಂಪರ್ಯ ಪದ್ಧತಿ ಮುಂದುವರಿಸಲು ರಾಹುಲ್ ಗಾಂಧಿಗೆ ಪಕ್ಷದಲ್ಲಿ ಹೊಸ ಅಧಿಕಾರ ಪಟ್ಟ ನೀಡಲಾಗಿದೆ. ಅದಲ್ಲದೆ ಒಂದು ತಿಂಗಳ ಹಿಂದೆ ಕೈಗೊಂಡ ಸಂಪುಟದ ಪುನಾರಚನೆಯಲ್ಲಿ ಯುವಕರ ಸಂಖ್ಯೆಯನ್ನು ಹೆಚ್ಚಿಸಲಾಗಿದೆ. ಸರಕಾರದ ಉಳಿವಿಗೆ ಅಗತ್ಯವಾದ ಸಂಖ್ಯಾಬಲ ಕುದುರಿಸಿಕೊಳ್ಳಲು ಸರಕಾರಕ್ಕೆ ಕಷ್ಟವೇನಿಲ್ಲ, ಅದರಿಂದಾಗಿಯೇ ಎಡಪಕ್ಷಗಳು ಸರಕಾರವನ್ನು ಇಕ್ಕಟ್ಟಿಗೆ ಸಿಕ್ಕಿಸಲು ವಿದೇಶೀ ಬಂಡವಾಳದ ಪ್ರವೇಶದ ಬಗ್ಗೆ ಮುಕ್ತವಾದ ಚರ್ಚೆಗೆ ಆಗ್ರಹಿಸಲು ಮುಂದಾಗಿವೆ. ಕಮ್ಯುನಿಸ್ಟ್ ಪಕ್ಷದ ಹಿರಿಯ ಸದಸ್ಯ ಗುರುದಾಸ ದಾಸಗುಪ್ತ ಮತ ಹಾಕುವುದಕ್ಕೆ ಅವಕಾಶವಿಲ್ಲದ ಲೋಕಸಭೆಯ ೧೯೩ನೇ ನಿಯಮದ ಪ್ರಕಾರ ಚರ್ಚೆಗೆ ಒತ್ತಾಯಿಸುವ ನಿರ್ಣಯವನ್ನು ಮಂಡಿಸಲು ಮುಂದಾಗಿದ್ದಾರೆ. ಮತ ನೀಡಿಕೆಗೆ ಅವಕಾಶ ನೀಡುವಂಥ ಚರ್ಚೆಗೆ ಒತ್ತಾಯ ತರುವುದು ವಿಪಕ್ಷಗಳಿಗೆ ಸಾಧ್ಯವಿಲ್ಲ, ಇದಕ್ಕೆ ಸರಕಾರ ಮತ್ತು ಸಭಾಧ್ಯಕ್ಷರ ಸಮ್ಮತಿ ಬೇಕಾಗುತ್ತದೆ ಎಂಬುದಾಗಿ ಅವರು ವಿವರಣೆ ನೀಡಿದ್ದಾರೆ. ಚರ್ಚೆಯಾದಲ್ಲಿ ಚಿಲ್ಲರೆ ವ್ಯಾಪಾರ ಕ್ಷೇತ್ರದಲ್ಲಿ ವಿದೇಶೀ ಬಂಡವಾಳದ ಪ್ರವೇಶದಿಂದಾಗುವ ಹಾನಿಕರ ಪರಿಣಾಮಗಳನ್ನು ತೆರೆದಿಡಲು ಅವಕಾಶವಾಗುತ್ತದೆ. ಲಕ್ಷಾಂತರ ಚಿಲ್ಲರೆ ವ್ಯಾಪಾರಿಗಳು ಕಾಲಕ್ರಮೇಣ ನಿರ್ನಾಮವಾಗುವುದು ಖಚಿತ. ವಾಲ್‌ಮಾರ್ಟ್‌ನಂಥ ತಿಮಿಂಗಿಲಗಳು ಸಣ್ಣವರನ್ನು ನುಂಗಿ ಹಾಕುವುದರಲ್ಲಿ ನಿಸ್ಸೀಮರು. ಅಮೆರಿಕದಲ್ಲಿ ಈ ಬೃಹತ್ ಸಂಸ್ಥೆ ಮೇಲೆ ಬಂದದ್ದೇ ಹಾಗೆ. ಐರೋಪ್ಯ ದೇಶಗಳಲ್ಲೂ ಈ ಸಂಸ್ಥೆಯ ಪ್ರವೇಶದ ಅವಕಾಶಕ್ಕೆ ವಿರೋಧವಿದೆ. ಅಮೆರಿಕದ ಪೆಪ್ಸಿ ಕೋಲ ಪ್ರವೇಶ ಹೇಗೆ ಸ್ಥಳೀಯ ಪಾನೀಯಗಳನ್ನು ಹಿಂದೆ ಸರಿಸಿದೆ, ಕೋಲ್ಗೇಟ್ ಟೂತ್‌ಪೇಸ್ಟ್ ಹರಡಿಕೊಂಡಿರುವ ರೀತಿಯನ್ನು ನಾವು ಕಾಣುತ್ತಿದ್ದೇವೆ. ಅಮೆರಿಕ ಕುರುಕಲು ತಿನಿಸುಗಳ ಮಾರಾಟ ಈಗ ದೊಡ್ಡ ಜಾಲವನ್ನೇ ನಿರ್ಮಿಸಿಕೊಂಡಿದೆ. ದೇಶದ ಪ್ರಮುಖ ನಗರಗಳಲ್ಲಿ ಮ್ಯಾಕ್‌ಡೊನಾಲ್ಡ್, ಕೆಎಫ್‌ಸಿ, ಸಬ್‌ವೇ ಮೊದಲಾದುವು ವ್ಯವಹಾರವನ್ನು ವಿಸ್ತರಿಸಿಕೊಂಡಿವೆ. ಇವನ್ನೆಲ್ಲ ನೋಡಿದಾಗ ಮುಂದೆ ಚಿಲ್ಲರೆ ವ್ಯಾಪಾರ ಕ್ಷೇತ್ರದಲ್ಲಿ ವಿದೇಶೀ ಬಂಡವಾಳದ ಮುಕ್ತ ಪ್ರವೇಶ ತರುವ ಹಾನಿಯನ್ನು ಕಲ್ಪಿಸಿಕೊಳ್ಳಬಹುದಾಗಿದೆ. ನಮ್ಮ ದೊಡ್ಡ ನಗರಗಳಲ್ಲಿ ತಲೆ ಎತ್ತಿರುವ ದೇಸೀ ಬಂಡವಾಳಗಾರರು ಸ್ಥಾಪಿಸಿರುವ ಬಿಗ್ ಬಜಾರ್, ರಿಲಯನ್ಸ್, ಮೋರ್ ಮೊದಲಾದವು ಮತ್ತು ಮಾಲ್‌ಗಳು ಸಾಂಪ್ರದಾಯಿಕ ವ್ಯಾಪಾರಸ್ಥರನ್ನು ನಿಧಾನವಾಗಿ ಮೂಲೆಗೊತ್ತಿರುವುದನ್ನು ನೋಡಿದ್ದೇವೆ. ಇನ್ಶೂರೆನ್ಸ್ ಮತ್ತು ಬ್ಯಾಂಕಿಂಗ್ ವಲಯಗಳು ಸರಕಾರಿ ವಲಯದಲ್ಲಿ ಪ್ರಧಾನವಾಗಿದ್ದುದರಿಂದಲೇ ನಮ್ಮ ದೇಶದಲ್ಲಿ ಪಶ್ಚಿಮದ ಬಂಡವಾಳಶಾಹಿ ದೇಶಗಳು ಅನುಭವಿಸಿದ ಆರ್ಥಿಕ ಕುಸಿತದಿಂದ ತಕ್ಕಮಟ್ಟಿಗೆ ಪಾರಾದುವು. ಯೂರೋಪಿನ ದೇಶಗಳು ಸಾಲದ ಮಡುವಿನಲ್ಲಿ ಮುಳುಗಿ ಎದುರಿಸುತ್ತಿರುವ ಆರ್ಥಿಕ ಬಿಕ್ಕಟ್ಟನ್ನು ನಾವು ನೋಡುತ್ತಿದ್ದೇವೆ. ಮುಕ್ತ ಮಾರುಕಟ್ಟೆ, ಜಾಗತೀಕರಣದ ಪ್ರತಿಪಾದಕ ಪ್ರಬಲ ರಾಷ್ಟ್ರ ಅಮೆರಿಕ ಇನ್ನೂ ಆರ್ಥಿಕ ಕುಸಿತದಿಂದ ಚೇತರಿಸಿಕೊಂಡಿಲ್ಲ, ಅಮೆರಿಕದಲ್ಲಿ ಯಾರೇ ಅಧ್ಯಕ್ಷರಾಗಿ ಬಂದರೂ ಮೂಲ ನೀತಿಗಳಲ್ಲಿ ಸ್ವಲ್ಪವೂ ಬದಲಾವಣೆಯಾಗದು ಎನ್ನುವುದು ಬರಾಕ್ ಒಬಾಮಾರ ನಾಲ್ಕು ವರ್ಷಗಳ ಆಡಳಿತೆಯಿಂದ ಸಾಬೀತಾಗಿದೆ. ಈ ಎಲ್ಲ ಅನುಭವಗಳಿಂದಲೂ ಮನಮೋಹನ ಸಿಂಗ್ ಆಡಳಿತ ಪಾಠ ಕಲಿತಿಲ್ಲ. ಸರಕಾರ ಮೊಂಡುತನವನ್ನು ಕೈಬಿಟ್ಟು ಜನಪರ ನೀತಿಗಳಿಗೆ ಚಾಲನೆ ನೀಡಿ ಮುನ್ನಡೆಯುವುದು ಅಗತ್ಯ. ಮನಮೋಹನ ಸಿಂಗ್ ನೇತೃತ್ವದ ಸರಕಾರದಿಂದ ಅದನ್ನು ನಿರೀಕ್ಷಿಸುವುದು ಸಾಧ್ಯವಿಲ್ಲ ಎನ್ನುವುದು ಸ್ಪಷ್ಟವಾಗಿದೆ. ಆದ್ದರಿಂದ ಅದು ಇದ್ದರೂ ಒಂದೆ, ಇಲ್ಲದೆ ಹೋದರೂ ಒಂದೆ.

---

**ಈ ತಿಂಗಳು (೩ನೇ ಪುಟದಿಂದ)**

ವಿಷಯ ಏನು ಗೊತ್ತೆ? ''ಲೋನಾವ್ಲ ಮಹಾಜನತೆಗೆ ಪಕ್ಷದ ನವರಾತ್ರಿ ಹಾರ್ದಿಕ ಶುಭಾಶಯಗಳು''! ಡಾ|| ಬಾಬಾಸಾಹೇಬ್ ಅಂಬೇಡ್ಕರರ ಚಿತ್ರವಿರುವ ಫಲಕದಲ್ಲಿ ಜನತೆಗೆ ದಸರಾ ಶುಭಾಶಯಗಳು ಎಂಬುದು ಹೊಸ ಬೆಳವಣಿಗೆ, ಅನಿಷ್ಟ ಬೆಳವಣಿಗೆ. ಮುಂದೊಂದು ದಿನ ಶ್ರೀ ಸತ್ಯನಾರಾಯಣನ ಸಾರ್ವಜನಿಕ ವ್ರತದ ಸಮಾರಂಭಕ್ಕೆ ಶ್ರೀಮಾನ್ ಅಠಾವಲೆ ಅವರು ಜನತೆಯನ್ನು ಆಹ್ವಾನಿಸುತ್ತಾರೆ, ಆಗಲೂ ಡಾ|| ಅಂಬೇಡ್ಕರ್ ಚಿತ್ರ ಇರುತ್ತದೆ. ನಿತಿನ್ ಗಡ್ಕರಿ ಪಕ್ಷದೊಡನೆ ಮೈತ್ರಿ ಮಾಡಿಕೊಂಡು ಅಠಾವಲೆ ಶಾಸನಸಭೆಯಲ್ಲಿ ಒಂದು ಸ್ಥಾನ ಗಳಿಸಿದ್ದಾರೆ; ಆದರೆ ಗಡ್ಕರಿ ಪಕ್ಷದ ವಿಕೃತ ''ಸಂಸ್ಕೃತಿ''ಯನ್ನು ದೊಡ್ಡ ಪ್ರಮಾಣದಲ್ಲಿ ತಮ್ಮದಾಗಿಸಿಕೊಂಡಿದ್ದಾರೆ. ಉದ್ಧವ ಠಾಕ್ರೆ ಪ್ರಭಾವ ಅಷ್ಟೊಂದಿದೆ. ಡಾ|| ಅಂಬೇಡ್ಕರ್ ಹಾಲು ಕುಡಿಯಲು ಅಡ್ಡಿಯಿಲ್ಲ!

* * *

ಕಾರು, ಬಂಗಲೊ, ಮುಂತಾದ ದುಬಾರಿ ಸರಕುಗಳ ಮಾರಾಟದ ಬಗ್ಗೆ ಜಾಹಿರಾತು ನೀಡುವವರಿಗೆ ಆ ಸರಕುಗಳ ಪಕ್ಕದಲ್ಲಿ ಒಬ್ಬ ಹುಡುಗಿ ಹಾಗೂ ಉದ್ದಿಮೆಯ ಮಾಲಿಕನನ್ನು ನಿಲ್ಲಿಸಿ ಫೋಟೊ ತೆಗೆದು ಅದನ್ನು ಅಚ್ಚು ಮಾಡುವುದು ರೂಢಿ. ಅವರನ್ನು ನೋಡಿ ಸರಕುಗಳನ್ನು ಕೊಳ್ಳುವ ಮೂರ್ಖರಿರುತ್ತಾರೆಂದು ಜಾಹಿರಾತುದಾರರ ನಂಬಿಕೆ ಇರಬೇಕು; ಅಥವಾ ಹುಡುಗಿ ಮತ್ತು ಮಾಲೀಕನ ಚಿತ್ರ ನೋಡಿ ಜಾಹಿರಾತಿನ ವಿವರಗಳನ್ನು ಜನ ಓದಿಕೊಳ್ಳುತ್ತಾರೆಂಬ ಭರವಸೆ ಇರಬೇಕು. ''ಮಾದರಿ''ಗಳಿಗೆ ಹಣ ದೊರೆಯಬೇಕಾದರೆ ಅಂತಹ ಜಾಹಿರಾತುಗಳೂ ಅಗತ್ಯ. ಇಲ್ಲದಿದ್ದರೆ ಮಾಡೆಲ್‌ಗಳ ಜೀವನ ಹೇಗೆ ಸಾಗಬೇಕು! ವಿಚಿತ್ರವೆಂದರೆ ಇಂದು ಎಲ್ಲದಕ್ಕೂ ಯಾರೋ ಒಬ್ಬಳು ಅಥವಾ ಒಬ್ಬನು ರಾಯಭಾರಿ ಎಂದು ಪ್ರದರ್ಶಿಸಲ್ಪಡುವ ಪದ್ಧತಿ ಅನಿಷ್ಟವೆಂಬಷ್ಟು ವ್ಯಾಪಕವಾಗುತ್ತಿದೆ. ಉದಾಹರಣೆಗೆ, ನರೇಂದ್ರ ಮೋದಿಯ ಗುಜರಾತಿಗೆ ಅಮಿತಾಭ ಬಚ್ಚನ್ ''ಬ್ರ್ಯಾಂಡ್ ಅಂಬಾಸಡರ್'' ಆಗುತ್ತಾನೆ, ರಾಹುಲ ದ್ರಾವಿಡ್ ಮತ್ತೊಂದಕ್ಕೆ ಆಗುತ್ತಾನೆ. ಬಿಹಾರದ ನಿತಿಶ್ ಕುಮಾರ್ ಸಹ ಅಂಬಾಸಡರ್‌ನ ತಲಾಶೆಯಲ್ಲಿದ್ದಾರೆ. ಕರ್ನಾಟಕಕ್ಕೆ ಯಡಿಯೂರಪ್ಪನವರು ಆ ಸ್ಥಾನ ತುಂಬ ಬಲ್ಲರು. ಅಥವಾ, ಜನಾರ್ದನ ರೆಡ್ಡಿಯೂ ಆಗಬಹುದು. ಮಹಾರಾಷ್ಟ್ರಕ್ಕಾದರೆ ನಿತಿನ್ ಗಡ್ಕರಿ, ಹಿಮಾಚಲ ಪ್ರದೇಶಕ್ಕೆ ರಾಬರ್ಟ್ ವಡ್ಡರ, ಇತ್ಯಾದಿ. ಈ ಅಂಬಾಸಡರ್‌ಗಳೆಲ್ಲಾ ಲಕ್ಷಗಟ್ಟಲೆ ಸಾರ್ವಜನಿಕ ಹಣ ಪಡೆಯುತ್ತಾರೆ, ಅದೊಂದು ದುಂದುವೆಚ್ಚ. ಯೋಚನೆ ಮಾಡೋಣ, ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಗೆ ಚಿಕಿತ್ಸೆಗೆಂದು ಹೋಗುವ ರೋಗಿ ಯಾವನೋ ಅಯೋಗ್ಯ ಅಂಬಾಸಡರ್‌ನ ಮೂತಿ ನೋಡಿ ಹೋಗುವುದುಂಟೆ? ರೋಗಿಗೆ ವೈದ್ಯ ಬೇಕು, ಆಸ್ಪತ್ರೆ ಬೇಕು; ರಾಯಭಾರಿಯನ್ನು ಕಟ್ಟಿಕೊಂಡು ಏನಾಗಬೇಕು! ಆದರೆ ಕರ್ನಾಟಕ ಸರ್ಕಾರದ ಆರೋಗ್ಯ ವಿಭಾಗವು ದರ್ಶನ್ ಎಂಬ ನಟನಿಗೆ ಅದೆಷ್ಟೋ ಲಕ್ಷ ರೂಪಾಯಿಗಳನ್ನು ವ್ಯರ್ಥವಾಗಿ ನೀಡಿ ಅವನನ್ನು ಅಂಬಾಸಡರ್ ಎಂದು ನೇಮಿಸಿಕೊಂಡಿದೆ. ಇದು ಮಂಗಾಟವಲ್ಲದೆ ಮತ್ತೇನೂ ಅಲ್ಲ, ಅಂಬಾನಿ ಅಂಬಾಸಡರ್‌ನನ್ನು ನೇಮಿಸಿಕೊಳ್ಳುತ್ತಾನೆ, ಆದ್ದರಿಂದ ಕರ್ನಾಟಕ ರಾಜ್ಯದ ಆರೋಗ್ಯ ಇಲಾಖೆಯೂ ನೇಮಿಸಿಕೊಳ್ಳುತ್ತದೆ! ದರ್ಶನ್ ರಾಯಭಾರಿಯೆಂದು ತಿಳಿದರೆ ಸರ್ಕಾರಿ ಆಸ್ಪತ್ರೆಗೆ ಹೋಗಬೇಕೆಂದಿರುವ ಎಷ್ಟೋ ಮಂದಿ ಭಯಭೀತರಾಗಿ ಓಡಿಹೋದರೂ ಆಶ್ಚರ್ಯವಿಲ್ಲ. ಅಂತಹ ''ಅದ್ಭುತ'' ಹಿನ್ನೆಲೆ ಈ ಆಸಾಮಿಗೆ ಇದೆ. ಅಂಬಾಸಡರ್ ಬೇಕೆಂಬ ಕಲ್ಪನೆಯ ಹಿಂದೆ ಏನೋ ಮೋಸವಿದೆ, ಎಂಥದೋ ಜಡ್ಡು ಮನಸ್ಸಿದೆ; ದರ್ಶನ್‌ನನ್ನು ರಾಯಭಾರಿಯಾಗಿ ಆಯ್ಕೆ ಮಾಡಿಕೊಳ್ಳುವ ಹೇಸಿಗೆಯ ಮನಸ್ಸಿನ ಹಿಂದೆ ಇನ್ನೇನಿದ್ದೀತು? ಮುಂದೆ ಪುನೀತ ರಾಜಕುಮಾರ್ ಕೋಟ್ಯಧಿಪತಿಯ ಆಯ್ಕೆ ಮಾಡುವಾಗ ಈ ಪ್ರಶ್ನೆಯನ್ನು ಕೇಳುತ್ತಾರೆ. ಈಗಲೇ ಉತ್ತರ ಸಿದ್ಧಪಡಿಸಿಕೊಳ್ಳೋಣ. ಉತ್ತರಕ್ಕೆ ಪರದಾಟ ಎನಿಸಿದರೆ ಆರೋಗ್ಯ ಮಂತ್ರಿಯನ್ನು ಕೇಳಿ ಪರಿಹಾರ ಪಡೆಯೋಣ. ಆಸ್ಪತ್ರೆಯ ರಾಯಭಾರಿಗೆ

ಹನ್ನೆರಡು ಲಕ್ಷ, ಅವನು ಹೇಗೆ ರಾಯಭಾರಿಯಾದ ಎಂದು ಹೇಳುವ ನಮಗೆ ಒಂದು ಕೋಟಿ. ಯಾರಿಗುಂಟು ಯಾರಿಗಿಲ್ಲ, ಸಿಕ್ಕಿದ್ದೇ ಸೀರುಂಡೆ. ಆದರೂ ದರ್ಶನನಂಥವನ ದರ್ಶನ ನಮ್ಮ ಸರ್ಕಾರಿ ಆಸ್ಪತ್ರೆಗಳಿಗೆ ಹೋಗುವವರಿಗೆ ಅನವಶ್ಯಕ.

* * *

ದ್ರಾಕ್ಷಿ ತೋಟದಲ್ಲಿ ಗುಳ್ಳೆನರಿಯ ಪರದಾಟ ನೆನಪಿಗೆ ತರುತ್ತದೆ ರಥಯಾತ್ರೆ ಪ್ರವೀಣ ಲಾಲಕೃಷ್ಣ ಅಡ್ವಾನಿಯ ಸ್ಥಿತಿ. ನರಿಗೆ ದ್ರಾಕ್ಷಿ ಎಟುಕಲಿಲ್ಲ, ಅಡ್ವಾನಿಗೆ ಪ್ರಧಾನಿಪಟ್ಟ ನಿಲುಕಲಿಲ್ಲ. ಹತಾಶರಾಗಿ ಅಡ್ವಾನಿ ತಮ್ಮ ಎಂಬತ್ತೈದನೆ ಹುಟ್ಟುಹಬ್ಬದ ಸಂದರ್ಭದಲ್ಲಿ ಪ್ರಧಾನಿ ಪಟ್ಟದ ಆಕಾಂಕ್ಷಿಯಲ್ಲ ನಾನು ಎಂದು ತನ್ನ ದುಃಖ ತೋಡಿಕೊಂಡರು. ಶ್ರೀರಾಮನ ಹೆಸರಿನಲ್ಲಿ ರಥವೇರಿ ದೇಶದ ಉದ್ದಗಲವನ್ನು ಸುತ್ತಿ ಭಾರತೀಯ ಜನತಾ ಪಕ್ಷವನ್ನು ಅಧಿಕಾರಕ್ಕೆ ತಂದ ಅಡ್ವಾನಿ ಉಪಪ್ರಧಾನಿ ಪಟ್ಟಕ್ಕೆ ತೃಪ್ತಿಪಟ್ಟುಕೊಳ್ಳಬೇಕಾಯಿತು. ಪಾಕಿಸ್ತಾನಕ್ಕೆ ಭೇಟಿ ನೀಡಿ ಮಹಮದಾಲಿ ಜಿನ್ನಾರ ಧರ್ಮನಿರಪೇಕ್ಷತೆ ಕೊಂಡಾಡಿ ಪೇಚಿಗೆ ಸಿಕ್ಕಿಕೊಂಡ ಅವರು ತಮ್ಮ ನಾಯಕಸ್ಥಾನವನ್ನೂ ಕಳೆದುಕೊಂಡರು. ಮಾತೃ ಸಂಸ್ಥೆ ಆರೆಸ್ಸೆಸ್‌ನ ಅವಕೃಪೆಗೆ ಗುರಿಯಾದ ಅಡ್ವಾನಿ ಇಂದು ಭಾಜಪದಲ್ಲಿ ಮೂಲೆಗುಂಪಾಗಿದ್ದಾರೆ. ಭಾಜಪದ ಒಳ ಜಗಳದಲ್ಲಿ ಹಿರಿಯನ ಪಟ್ಟವನ್ನೂ ಕಳೆದುಕೊಂಡಿದ್ದಾರೆ. ಲೋಕಸಭೆಯಲ್ಲಿ ವಿರೋಧ ಪಕ್ಷದ ನಾಯಕನ ಸ್ಥಾನ ಕಳೆದುಕೊಂಡಾಗಲೇ ಅವರ ಭವಿಷ್ಯಕ್ಕೆ ಮೋಡ ಕವಿಯಿತು. ಈಗ ಅವರಿಗೆ ದಾರಿಯೇ ಕಾಣದಾಗಿದೆ. ರಾಘವೇಂದ್ರನ ಮೊರೆ ಹೋಗಲಿ!

* * *

ಭಾಜಪದಲ್ಲಿ ಈಗ ಬಂಡಾಯದ ಸರದಿ. ನಮ್ಮ ಪಾರ್ಟಿ ಇತರ ರಾಜಕೀಯ ಪಕ್ಷಗಳಿಗಿಂತ ಭಿನ್ನ, ಶಿಸ್ತಿನ ಸಿಪಾಯಿಗಳು ನಾವು ಎಂದು ಕೊಚ್ಚಿಕೊಳ್ಳುತ್ತಿದ್ದ ಅವರದು ಈಗ ಒಡೆದ ಮನೆ. ನಾಯಕನ ಸ್ಥಾನದಿಂದ ಇಳಿದ ಅಡ್ವಾನಿ ಸ್ಥಾನಕ್ಕೆ ಆರೆಸ್ಸೆಸ್ ಪಟ್ಟ ಕಟ್ಟಿದ್ದು ನಿತಿನ್ ಗಡ್ಕರಿಗೆ. ಈತ ಅಪರಿಚಿತ ವ್ಯಕ್ತಿ. ಭಾಜಪದಿಂದ ದೂರ ಇದ್ದು ಹಲವು ಕಂಪೆನಿಗಳನ್ನು ನಡೆಸಿಕೊಂಡು ಹಣ ಮಾಡುತ್ತಿದ್ದಾತ. ಈಗ ಅದು ಬಹಿರಂಗಗೊಂಡು ಭಾಜಪದ ಅಧ್ಯಕ್ಷಗಿರಿಯ ಎರಡನೇ ಅವಧಿಗೆ ಸಂಚಕಾರ ಬಂದಿದೆ. ಗಡ್ಕರಿ ಪದಚ್ಯುತಿಗೆ ಆಗ್ರಹ ಇದ್ದರೂ ಸದ್ಯಕ್ಕೆ ಆತ ಬಚಾವು. ತಿಪ್ಪೆ ಸಾರಿಸುವ ಕೆಲಸ ನಡೆದಿದೆ ಭಾಜಪದಲ್ಲಿ. ಹಿಂದುತ್ವವಾದಿಗಳಾದ ಭಾಜಪದ ನಾಯಕರುಗಳಿಗೆ ಮುಸಲ್ಮಾನರನ್ನು ಕಂಡರೆ ಅಲರ್ಜಿ. ಈ ಅಲರ್ಜಿಯೇ ಅವರಿಗೆ ಕಂಟಕವಾಗುತ್ತಿದೆ. ಜಸ್ವಂತ್ ಸಿಂಗ್ ಪಾಕಿಸ್ತಾನ ಕುರಿತು ತಮ್ಮ ಪುಸ್ತಕದಲ್ಲಿ ಮಾಡಿದ್ದ ಪ್ರಶಂಸೆಗೆ ಆರೆಸ್ಸೆಸ್‌ನವರು ಅವರನ್ನು ತರಾಟೆಗೆ ತೆಗೆದುಕೊಂಡಿದ್ದನ್ನು ನೆನಪಿಸಿಕೊಳ್ಳಬೇಕು. ಹಿಂದುತ್ವವಾದಿಗಳು ಸ್ವಾಮಿ ವಿವೇಕಾನಂದರನ್ನು ತಮ್ಮವರನ್ನಾಗಿ ಮಾಡಿಕೊಂಡು ಬಿಟ್ಟಿದ್ದಾರೆ. ಅವರಿಗೆ ಹಿಂದುತ್ವದ ಪ್ರತಿಪಾದಕನ ಸ್ಥಾನ ಕಲ್ಪಿಸಿದ್ದಾರೆ. ಅಂಥದ್ದರಲ್ಲಿ ನಿತಿನ್ ಗಡ್ಕರಿ ಭೂಗತ ಜಗತ್ತಿನ ದೊರೆ ದಾವುದ್‌ನನ್ನು ವಿವೇಕಾನಂದರ ಬುದ್ಧಿಮತ್ತೆಯನ್ನು ಒಂದೇ ತಕ್ಕಡಿಯಲ್ಲಿಡುವ ಮೂರ್ಖತನ ಮಾಡಿರುವುದು ನಾಚಿಕೆಗೇಡು. ಇಷ್ಟಾದರೂ ಗಡ್ಕರಿ ಇನ್ನೂ ಅಧಿಕಾರ ಸ್ಥಾನದಲ್ಲಿ ಇರುವುದು ಆಶ್ಚರ್ಯಕರ. ಆರೆಸ್ಸೆಸ್ ಆಶೀರ್ವಾದ ಇರುವವರೆಗೂ ಗಡ್ಕರಿ ಸ್ಥಾನ ಗಟ್ಟಿ. ಆರೆಸ್ಸೆಸ್‌ನೊಳಗೂ ಈಗ ಅಪಸ್ವರ ಎದ್ದಿದೆ. ಗಡ್ಕರಿ ಮೇಲೆ ಬಂದಿರುವ ಆಪಾದನೆಗಳಿಗೆ ಗುಜರಾತ್‌ನಲ್ಲಿ ಅಧಿಕಾರದಲ್ಲಿರುವ ಪ್ರಧಾನಿ ಪಟ್ಟದ ಆಕಾಂಕ್ಷಿಯೇ ಕಾರಣ ಎಂದು ಆರೆಸ್ಸೆಸ್ ನಾಯಕರೊಬ್ಬರು ಗೂಬೆ ಕೂರಿಸಿದ್ದಾರೆ. ಅಂತೂ ಚುನಾವಣೆ ಹತ್ತಿರವಾಗುತ್ತಿದ್ದಂತೆ ಸಂಘಪರಿವಾರ ಒಡೆದ ಮನೆ.

* * *

ಕರ್ನಾಟಕದಲ್ಲಿ ಭಾಜಪ ಸರಕಾರ ಬಂದಮೇಲೆ ಕೇಸರೀಕರಣ ಭರದಿಂದ ಸಾಗಿದೆ. ಸಂಘಪರಿವಾರದ ಪ್ರಕಾಶನ ಸಂಸ್ಥೆ ರಾಷ್ಟ್ರೋತ್ಥಾನ ಪರಿಷತ್ತಿಗಂತೂ ಸುಗ್ಗಿಯೇ ಸುಗ್ಗಿ. ಅದರ ಗೋದಾಮಿನಲ್ಲಿ ಕೊಳೆಯುತ್ತಿದ್ದ ಹಳೆಯ ಪುಸ್ತಕಗಳೆಲ್ಲ ಸರಕಾರೀ ಗ್ರಂಥಾಲಯಗಳನ್ನು ಸೇರಿವೆ. ಯಡಿಯೂರಪ್ಪ ಅಧಿಕಾರದಲ್ಲಿದ್ದಾಗಲೇ ಈ ಪ್ರಕಾಶನ ಸಂಸ್ಥೆಗೆ ಹದಿನೇಳು ಕೋಟಿ ರೂಪಾಯಿಗಳನ್ನು ಕೊಟ್ಟಿದ್ದಾರೆ. ಈಗ ಕುವೆಂಪು ಭಾಷಾ ಭಾರತಿ ಭಾಜಪದ ಪೂರ್ವಾಶ್ರಮ ಜನಸಂಘದ ನಾಯಕರಾಗಿದ್ದ ಪಂಡಿತ ದೀನದಯಾಳ ಉಪಾಧ್ಯಾಯರ ಕೃತಿಗಳನ್ನು ಕನ್ನಡದಲ್ಲಿ ಪ್ರಕಟಿಸಿದೆ. ಕುವೆಂಪುರವರು ಧರ್ಮ ನಿರಪೇಕ್ಷತೆಯಲ್ಲಿ ವಿಶ್ವಾಸವಿಟ್ಟಿದ್ದವರು. ಅವರ ಹೆಸರಿನಲ್ಲಿ ಸ್ಥಾಪನೆಯಾಗಿರುವ ಅನುವಾದ ಪ್ರಾಧಿಕಾರವು ಸಂಘಪರಿವಾರದ ಸಿದ್ಧಾಂತದ ಪ್ರತಿಪಾದಕ ದೀನದಯಾಳ ಉಪಾಧ್ಯಾಯರ ಕೃತಿ ಪ್ರಕಟಿಸಿರುವುದು ವಿಪರ್ಯಾಸ. ಇಷ್ಟಕ್ಕೂ ಅದು ಮಹತ್ವದ, ಉಪಯುಕ್ತವಾದ ಪ್ರಕಟಣೆ ಏನಲ್ಲ, ಹಿಂದುತ್ವದ ಪ್ರಚಾರ ಸಾಮಗ್ರಿ. ಇನ್ನು ಉಳಿದಿರುವ ಅಧಿಕಾರಾವಧಿಯಲ್ಲಿ ಸಂಘಪರಿವಾರದ ಬೊಕ್ಕಸಕ್ಕೆ ಸರಕಾರದಿಂದ ಇನ್ನೆಷ್ಟು ಹಣ ಹರಿಯುವುದೋ! ಈ ಕೇಸರೀಕರಣದ ಭರಾಟೆಯ ಜೊತೆಗೆ ಭ್ರಷ್ಟಾಚಾರದಲ್ಲಿ ಮುಳುಗಿರುವ ಸರಕಾರ ಬೊಕ್ಕಸವನ್ನು ಬರಿದು ಮಾಡಿದೆ. ಚುನಾವಣೆ ಸಮೀಪಿಸುತ್ತಿದ್ದ ಹಾಗೆ ಅವಾಂತರ ಇನ್ನೂ ಹೆಚ್ಚಾಗುವುದು ಖಚಿತ.

* * *

ಕರ್ನಾಟಕದಲ್ಲೀಗ ಹೊಸ ರಾಜಕೀಯ ಪಕ್ಷವೊಂದು ಬಂದಿದೆ. ಕರ್ನಾಟಕ ಜನತಾ ಪಕ್ಷ (ಕೆಜೆಪಿ) ಎಂಬ ನಾಮಾಂಕಿತದಿಂದ ಉದಯವಾಗಿರುವ ಈ ಪಕ್ಷಕ್ಕೆ ಯಡಿಯೂರಪ್ಪನವರದೇ ಪೌರೋಹಿತ್ಯ, ಸದ್ಯಕ್ಕೆ ಶಿಷ್ಯ ಧನಂಜಯ ಕುಮಾರ್ ಹೊಸ ಪಕ್ಷದ ಅಧ್ಯಕ್ಷ.

> ಡಾ|| ಎಂ. ಡಿ. ಒಕ್ಕುಂದ ಅವರ ಪಿಎಚ್.ಡಿ. ಮಹಾಪ್ರಬಂಧ ''ಕನ್ನಡ ಕಾವ್ಯದಲ್ಲಿ ಧಾರ್ಮಿಕ ಹಿಂಸೆ ಹಾಗೂ ಸೌಹಾರ್ದತೆಯ ಸ್ವರೂಪ'' ೨೦೧೧ನೇ ಸಾಲಿನ ಕೋಡಗುಂಟಿ ಪ್ರಶಸ್ತಿಯನ್ನು ಪಡೆದಿದೆ. ಅದು ಮಸ್ಕಿಯ ಬಂಡಾರ ಪ್ರಕಾಶನ ನೀಡುವ ಪ್ರಶಸ್ತಿ. ಮಾನ್ಯ ಒಕ್ಕುಂದ ಅವರಿಗೆ ಹಾರ್ದಿಕ ಅಭಿನಂದನೆಗಳು.
>
> **— ಸಂಪಾದಕ**

ಭಾಜಪದಿಂದ ಹೊರಬಂದಮೇಲೆ ಯಡಿಯೂರಪ್ಪ ನಾಯಕತ್ವ ವಹಿಸಿಕೊಳ್ಳುತ್ತಾರೆ. ಇದು ಈಗಿನ ವ್ಯವಸ್ಥೆ. ಸದಾನಂದ ಗೌಡ, ಈಶ್ವರಪ್ಪ ಕೈಕೊಟ್ಟ ಹಾಗೆ ಧನಂಜಯ ಕುಮಾರ್ ಕೈಕೊಡುವುದಿಲ್ಲ ಎಂಬ ನಂಬಿಕೆ ಯಡಿಯೂರಪ್ಪನವರಿಗೆ, ಇರಲಿ ಮುಂದೆ ನೋಡೋಣ. ಭಾಜಪ ತ್ಯಜಿಸಲು ಯಡಿಯೂರಪ್ಪ ಯಾವ ಮುಹೂರ್ತಕ್ಕೆ ಕಾಯುತ್ತಿದ್ದಾರೋ, ಯಾವ ಜ್ಯೋತಿಷ್ಯ ಲಗ್ನ ಕಟ್ಟಿಕೊಟ್ಟಿದ್ದಾನೊ! ಎಲ್ಲವೂ ರಹಸ್ಯ. ಅವರು ಮಾತ್ರ ಈಗ ದೇವತಾದರ್ಶನಕ್ಕೆ ಹೊರಟಿದ್ದಾರೆ. ಅನಂತ ಕುಮಾರ್, ಈಶ್ವರಪ್ಪ, ಮೊದಲಾದವರ ಮೇಲೆ ಕತ್ತಿ ಮಸೆದಿದ್ದಾರೆ. ಕೇಂದ್ರ ಭಾಜಪ ನಾಯಕರ ವಿರುದ್ಧ ಕಿಡಿಕಾರಿದ್ದಾರೆ. ಭಾಜಪದಲ್ಲೇ ಉಳಿಸಿಕೊಳ್ಳಲು ನಾಯಕ ಅರುಣ್ ಜೇಟ್ಲಿ ನಡೆಸಿದ ಪ್ರಯತ್ನಕ್ಕೆ ಯಡಿಯೂರಪ್ಪ ತಣ್ಣೀರೆರಚಿದ್ದಾರೆ. ಹೊಸ ಪಕ್ಷಕ್ಕೆ ಯಾರ್‍ಯಾರು ಸೇರುತ್ತಾರೋ! ಅಡ್ಡಗೋಡೆಯ ಮೇಲಿರುವವರೇ ಹೆಚ್ಚು ಮಂದಿ. ಎಲ್ಲ ಗೊತ್ತಾಗುವುದು ಮುಂದಿನ ತಿಂಗಳ ಎರಡನೇ ವಾರದಲ್ಲಿ, ಮುಂದಿನ ಚುನಾವಣೆಯಲ್ಲಿ ತ್ರಿಕೋಣ ಸ್ಪರ್ಧೆ ಹೋಗಿ ಚತುಷ್ಕೋಣ ಸ್ಪರ್ಧೆ ಖಚಿತ.

* * *

ಆರ್ಥಿಕ ಹಿಂಜರಿತ, ಸಾಲದ ಹೊರೆ, ಹೆಚ್ಚುತ್ತಿರುವ ನಿರುದ್ಯೋಗ ಮುಂತಾದ ಸಮಸ್ಯೆಗಳನ್ನು ಎದುರಿಸುತ್ತಿರುವ ಯೂರೋಪಿನ ರಾಷ್ಟ್ರಗಳಲ್ಲಿ ಈಗ ಪ್ರತಿಭಟನೆ ಭುಗಿಲೆದ್ದಿದೆ. ಪರಿಸ್ಥಿತಿಯನ್ನು ನಿಭಾಯಿಸಲು ಅಲ್ಲಿನ ಸರಕಾರಗಳು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ (ಐಎಂಎಫ್) ಸೂಚಿಸಿರುವ ಪರಿಹಾರ ಮಾರ್ಗ ಅನುಸರಿಸಿ ಕೈಗೊಂಡಿರುವ ಕಠಿಣಕ್ರಮಗಳಿಗೆ ಕಾರ್ಮಿಕರು ಪ್ರತಿಭಟಿಸುತ್ತಿದ್ದಾರೆ. ಪರಿಸ್ಥಿತಿ ಗಂಭೀರವಾಗಿದೆ. ನಿರುದ್ಯೋಗದ ಪ್ರಮಾಣ ಶೇ. ೧೦.೫ರಿಂದ ೧೧.೩ಕ್ಕೆ ಏರಿದೆ. ೨೦೧೩ರ ಹೊತ್ತಿಗೆ ಯೂರೋಪಿಯನ್ ಯೂನಿಯನ್ನಿನಲ್ಲಿ ೨೬ ಮಿಲಿಯಕ್ಕೂ ಹೆಚ್ಚು ಕಾರ್ಮಿಕರು ಕೆಲಸ ಕಳೆದುಕೊಳ್ಳಲಿದ್ದಾರೆ. ಆರ್ಥಿಕ ಕುಸಿತ ಮೊದಲು ಕಂಡುಬಂದದ್ದು ಗ್ರೀಸ್‌ನಲ್ಲಿ. ದಿವಾಳಿಯ ಅಂಚಿನಲ್ಲಿರುವ ಈ ದೇಶದಲ್ಲಿ ನಿರುದ್ಯೋಗದ ಪ್ರಮಾಣ ಶೇ. ೨೩.೬ ಆಗಿದೆ. ಪ್ರತಿದಿನ ಒಂದು ಸಾವಿರ ಮಂದಿ ಗ್ರೀಕರು ಕೆಲಸ ಕಳೆದುಕೊಳ್ಳುತ್ತಿದ್ದಾರೆ. ಇದರ ಹಿಂದೆಯೇ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಬಿಕ್ಕಟ್ಟನ್ನು ಎದುರಿಸಿದ ಸ್ಪೇನ್‌ನಲ್ಲಿ ನಿರುದ್ಯೋಗ ಮುಗಿಲು ಮುಟ್ಟಿದೆ. ಶೇ. ೫೫ರಷ್ಟು ಯುವಕರು ಕೆಲಸವಿಲ್ಲದೆ ಅಲೆಯಬೇಕಾಗಿ ಬಂದಿದೆ. ಯೂರೋಪಿನ ದೇಶಗಳ ಸಾಲದ ಹೊರೆ ೪.೬ ಟ್ರಿಲಿಯನ್ ಯೂರೋಗಳನ್ನು ತಲುಪಿದೆ. ಬ್ಯಾಂಕಿಂಗ್ ಕ್ಷೇತ್ರ ಈ ದೇಶಗಳಲ್ಲಿ ತತ್ತರಿಸುತ್ತಿದೆ. ಯೂರೋಪಿನ ೨೩ ದೇಶಗಳ ೪೦ ಟ್ರೇಡ್ ಯೂನಿಯನ್ ಸಂಘಟನೆಗಳು ಮುಷ್ಕರ, ಪ್ರತಿಭಟನೆಗಳಲ್ಲಿ ನಿರತವಾಗಿವೆ. ಯೂರೋಪಿನ ದೇಶಗಳಲ್ಲಿ ಭುಗಿಲೆದ್ದಿರುವ ಜನಾಂದೋಲನವನ್ನು ಕುರಿತು ಲಂಡನ್ನಿನ ಗಾರ್ಡಿಯನ್ ಪತ್ರಿಕೆ ವಿವರವಾಗಿ ವರದಿ ಮಾಡಿದೆ. ಸ್ಪೇನ್, ಪೋರ್ಚುಗಲ್, ಗ್ರೀಸ್, ಇಟಲಿ, ಫ್ರಾನ್ಸ್, ಜರ್ಮನಿ ಮೊದಲಾದ ದೇಶಗಳ ಪ್ರಮುಖ ನಗರಗಳಲ್ಲಿ ನಿರಂತರವಾಗಿ ಪ್ರತಿಭಟನೆಗಳು ಜರುಗುತ್ತಿವೆ.




## ನವೆಂಬರ್ ತಿಂಗಳ ಸಂಚಿಕೆ

'ಹೊಸತು' (ನವೆಂಬರ್, ೨೦೧೨) ನೋಡುತ್ತಿದ್ದ ಹಾಗೆ ನನಗೆ ಆನಂದವಾಯಿತು. ಯಾಕೆಂದರೆ ಅದು ನನ್ನ ಒಬ್ಬ ನೆಚ್ಚಿನ ನಟನ ಚಿತ್ರವನ್ನು ಹೊಂದಿರುವುದು. ಎ. ಕೆ. ಹಂಗಲ್ ಖಂಡಿತವಾಗಿಯೂ ಒಬ್ಬ ಮೇರು ಕಲಾಕಾರರಾಗಿದ್ದರು. ಅವರ ಸಹಜ ನಟನೆಗೆ ನನ್ನ ಸಲಾಮ್.

ಈ ತಿಂಗಳು ನೊಬೆಲ್ ಬಹುಮಾನ ಹೇಗೆ ತನ್ನ ಗೌರವವನ್ನು ಹಾಳುಮಾಡಿಕೊಂಡಿದೆ ಎನ್ನುವ ವಿಚಾರ ಸರಿಯಾದುದು. ನೊಬೆಲ್ ಸಮಿತಿಯು ಹಿಂದೆ ಮಹಾತ್ಮಾ ಗಾಂಧಿಯವರನ್ನು ಕಡೆಗಣಿಸಿದ್ದು ಅಕ್ಷಮ್ಯ ಅಪರಾಧ.

ಸದಾಶಿವ ಆಯೋಗದ ವಿವರಗಳನ್ನು ಲೇಖಕರಾದ ಶ್ರೀ ಮರಡ್ಡಿಯವರು ಬಹಳ ವಿವರವಾಗಿ ಬರೆದಿದ್ದಾರೆ. ಸರಕಾರ ಬಿಗಿ ನಿಲುವನ್ನು ತಾಳಿ ಮಾನ್ಯ ಸದಾಶಿವ ಆಯೋಗದ ವರದಿಯನ್ನು ಒಪ್ಪಿಕೊಂಡು ಜಾರಿಗೆ ತರಬೇಕು.

ರಾಣೇಬೆನ್ನೂರು **ಎ. ಸಿ. ಹಿರೇ ಒಡೆಯರ**

೨೦೧೨ರಲ್ಲಿ ಅತ್ಯಂತ ವಿಶಿಷ್ಟವೆನ್ನಬಹುದಾದ ಮುಖಪುಟವನ್ನು ಹೊತ್ತು ತಂದದ್ದು ನವೆಂಬರ್ ಸಂಚಿಕೆ.

ಒಬ್ಬ ಕಲಾವಿದನಿಗೆ 'ಭಾಷೆ' ಗಡಿಯಾಗದು, ಭಾವ ಮುಖ್ಯ ಎನ್ನುವುದನ್ನು ಪ್ರೇಕ್ಷಕರಿಗೆ ಮುಟ್ಟಿಸಿದ ಸಮರ್ಥ ನಟ ಎ. ಕೆ. ಹಂಗಲ್. ಭಾರತೀಯ ಚಿತ್ರಪರಂಪರೆಯಲ್ಲಿ ಮರೆಯಲಾರದ ಛಾಪನ್ನು ಮೂಡಿಸಿದವರು. ಎಸ್. ಸುರೇಂದ್ರ ಮೇರುನಟರ ಪರಿಚಯವನ್ನು ಅತ್ಯಂತ ಉತ್ತಮರೀತಿಯಲ್ಲಿ ಮಾಡಿಕೊಟ್ಟಿದ್ದಾರೆ!

ಅಂತೆಯೇ ಕನ್ನಡ ಪತ್ರಿಕೋದ್ಯಮದಲ್ಲಿ ಅದರಲ್ಲೂ ಸಿನಿಮಾ ರಂಗದಲ್ಲಿ ಕೈಯಾಡಿಸಿ ಸಮರ್ಥರೆನಿಸಿಕೊಂಡ ವಿ. ಎನ್. ಸುಬ್ಬರಾವ್ ಅವರ ಬಗ್ಗೆ ಸಿ. ಆರ್. ಕೃಷ್ಣರಾವ್ ಲೇಖನ ಕೂಡ ಗಮನಾರ್ಹವಾಗಿತ್ತು.

'ಅಜ್ಜನ ಕೋಟು' ಧರಣೇಂದ್ರ ಕುರಕುರಿ ಅವರದ್ದಷ್ಟೇ ಅಲ್ಲ, ನನ್ನ ಅನುಭವವೂ ಹೌದು! ನಮ್ಮಪ್ಪನ ನಿಧನದ ನಂತರ ಮನೆಯ ಹಳೆಯ ಪೆಟ್ಟಿಗೆಯಲ್ಲಿದ್ದ ನಮ್ಮಪ್ಪನ ಕೋಟನ್ನು ಒಗೆಯಲಾರದೆ, ಕೊನೆಗೆ ಜಿರಳೆಗಳು ಅದನ್ನು ತಿನ್ನುತ್ತಾ ಬಂದಾಗ ವಿಧಿಯಿಲ್ಲದೆ ಅದನ್ನು ಹೊರಗೆಸೆಯಬೇಕಾಗಿ ಬಂದದ್ದು ನೆನಪಿಗೆ ಬಂತು!

ಮೂರನೆಯ ರಕ್ಷಾಪುಟದ ಶಿವಾನಂದ ಬಂಟನೂರ ಅವರ ಕಲಾಕೃತಿಗಳ ಪರಿಚಯವನ್ನು ಕೆ. ವಿ. ಸುಬ್ರಹ್ಮಣ್ಯಂ ಚೆನ್ನಾಗಿ ಮಾಡಿಕೊಟ್ಟಿದ್ದಾರೆ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

ನವೆಂಬರ್ ತಿಂಗಳಿನ 'ಹೊಸತು' ಹೊಸ ಹೊಸ ಅವಿಷ್ಕಾರಗಳಿಗೆ ಅವಕಾಶ ನೀಡುವ ರೀತಿಯಲ್ಲಿ ಮೂಡಿಬಂದಿರುವುದು ತುಂಬ ಸಂತೋಷದ ಸಂಗತಿಯಾಗಿದೆ. ಅದರಲ್ಲಿಯ 'ಎ. ಜೆ. ಸದಾಶಿವ ಆಯೋಗ ವರದಿ ಜಾರಿಯಾಗಬೇಕು' ಎನ್ನುವ ಲೇಖನ ವರದಿಯಲ್ಲಿರುವ ವಾಸ್ತವಿಕತೆಯನ್ನು ಚೆನ್ನಾಗಿ ಬಿಂಬಿಸಿದೆ.

ಈಗಾಗಲೇ ಈ ವರದಿಯ ವಿರುದ್ಧ - ಪರವಾದ ಅನೇಕ ಅಭಿಪ್ರಾಯಗಳು ವ್ಯಕ್ತವಾಗಿವೆ. ಪರಿಶಿಷ್ಟ ಜಾತಿಯಲ್ಲಿ ಸುಮಾರು ೧೦೧ ಜಾತಿಗಳನ್ನು ಸೇರಿಸಿ ಎಸ್.ಸಿ. ಪಟ್ಟಿಯನ್ನು ರಚಿಸಲಾಗಿದೆ. ಆದರೆ ಮೊದಲು ಪರಿಶಿಷ್ಟ ವರ್ಗದಲ್ಲಿದ್ದ ಕೆಲವು ಜಾತಿಗಳನ್ನು ಪರಿಶಿಷ್ಟ ಜಾತಿಗೆ ಸೇರಿಸಿ ವರದಿಯನ್ನು ತಯಾರಿಸಿದ್ದರಿಂದ ಆರಂಭದಲ್ಲಿದ್ದ ಅಸ್ಪೃಶ್ಯ ಜಾತಿಗಳು ಕೆಲವು ಸೌಲಭ್ಯಗಳಿಂದ ವಂಚಿತರಾಗಬೇಕಾಗಿಬಂದುದು ಸತ್ಯ ಸಂಗತಿ. ಆದರೆ ಈ ಪಟ್ಟಿಯನ್ನು ತಯಾರಿಸುವಾಗ ಆರ್ಥಿಕ ಮಾನದಂಡ ಒಂದನ್ನೇ ಪರಿಗಣಿಸಿದ್ದರೆ ಚೆನ್ನಾಗಿತ್ತು. ಎಸ್.ಸಿ.ಯವರಲ್ಲಿಯೂ ಕೆಲವು ಜನ ಆರ್ಥಿಕವಾಗಿ ಮುಂದುವರಿದವರಿದ್ದಾರೆ. ಅವರಿಗೆ ಮೀಸಲಾತಿ ಅಗತ್ಯವೇ, ಎಂಬುದನ್ನು ಆಲೋಚಿಸಬೇಕು. ಅಸ್ಪೃಶ್ಯರಲ್ಲಿಯೇ ಆರ್ಥಿಕವಾಗಿ ಮುಂದುವರೆದವರು ಅಸ್ಪೃಶ್ಯರನ್ನು ವಂಚಿಸುತ್ತಿದ್ದಾರೆ. ಆದ್ದರಿಂದ ಆರ್ಥಿಕವಾಗಿ ಹಿಂದುಳಿದ ಜನರಿಗೆ ಸೌಲಭ್ಯಗಳನ್ನು ಒದಗಿಸಿಕೊಡುವಂತಹ ಉದಾರತೆ ತೋರಬೇಕಾಗಿದೆ.




ಒಳಮೀಸಲಾತಿಯ ಕೂಗು ಕೇಳಿಬಂದದ್ದರಿಂದ ಜನಸಂಖ್ಯೆಗನುಗುಣವಾದ ಮೀಸಲಾತಿ ಹಂಚಿಕೆ ವೈಜ್ಞಾನಿಕವಾದುದು. ಈ ಕಾರಣದಿಂದ ಸದಾಶಿವ ವರದಿಯು ಜಾರಿಗೆ ಬರಬೇಕಾದುದು ಅವಶ್ಯಕವಾಗಿದೆ. ಇದೇ ಮಾದರಿಯಲ್ಲಿಯೇ ಹಿಂದುಳಿದ ವರ್ಗಗಳ ಆಯೋಗವು ಸಹ ಈ ಮಾನದಂಡವನ್ನು ಅನುಸರಿಸಿ ಮೀಸಲಾತಿಯನ್ನು ಮಾಡಿದರೆ ಅನುಕೂಲ. ಇತ್ತೀಚಿನ ದಿನಮಾನಗಳಲ್ಲಿ ಪುರೋಹಿತರಿಂದ ಹಿಡಿದು ಎಲ್ಲಮುಂದುವರಿದ ಜಾತಿಗಳು ಎಸ್.ಸಿ./ಎಸ್.ಟಿ./ಓ.ಬಿ.ಸಿ. ವರ್ಗಕ್ಕೆ ಸೇರ್ಪಡೆಯಾಗಲು ಹವಣಿಸುತ್ತಿವೆ. ಈ ಸೇರ್ಪಡೆ ಕೇವಲ ಸೌಲಭ್ಯಗಳನ್ನು ಪಡೆಯಲಿಕ್ಕಾಗಿಯೇ ಹೊರತು ಮಾನಸಿಕವಾಗಿ ಆಯಾ ವರ್ಗಗಳಲ್ಲಿ ಸೇರುವುದಕ್ಕೆ ಅಲ್ಲ ಎಂಬುದು ಕಟು ವಾಸ್ತವದ ಸಂಗತಿಯಾಗಿದೆ.

ಗದಗ **ಡಾ|| ಎನ್. ಎಂ. ಅಂಬಲಿಯವರ**

ನವೆಂಬರ್ ೨೦೧೨ರ 'ಹೊಸತು' ಇದರಲ್ಲಿ ಭಾಗೀರತಿ ಸಿನಿಮಾ ವಿಶ್ಲೇಷಣೆಯಿದೆ. ಆದರೆ ಡಾ|| ರಂಗಾರೆಡ್ಡಿ ಅವರು ಪಂಪನೆತ್ತರಕ್ಕೆ ಬರಗೂರರನ್ನು ಏರಿಸುವುದಾಗಲೀ, ಅವರ ಭಾಗೀರಥಿ ಸಿನಿಮಾವನ್ನು ಆಳೆದುತೂಗಿ ಏರಿಸುವಾಗ ಅವರನ್ನು ಬರ್ಟೋಲ್ಟ್ ಬ್ರೆಕ್ಟ್‌ನ ವೈಚಾರಿಕ ನಿಲುವಿಗೆ ತೂಗಿಸುವುದಾಗಲೀ, ಚೋಮನದುಡಿಯ ಕಲಾತ್ಮಕತೆಗೆ ಹೋಲಿಸುವುದಾಗಲೀ ಎಷ್ಟು ಸರಿ! ಜನಪದೀಯ ಸಮಾಜದಲ್ಲಿ ಎಲ್ಲವೂ ಸ್ವೀಕಾರಾರ್ಹವಲ್ಲ. ಸಾವಿರ ವರ್ಷಗಳ ನಂಬಿಕೆಗೆ ನಾಲಿಗೆಯಾದ ವರ್ಣತತ್ವದ ಮಾದರಿಯನ್ನು ಪ್ರಸ್ತುತಪಡಿಸುವಲ್ಲಿ ಸಿನಿಮಾ ಸಫಲವಾಗಿಲ್ಲ. ಸಿನಿಮಾದಲ್ಲಿ ಕತೆ ಕೇಳುವ ಒಬ್ಬ ಚಿಕ್ಕ ಹುಡುಗ ಭಾಗೀರಥಿಗಾದ ಅನ್ಯಾಯಕ್ಕೆ ಪ್ರತಿಭಟನಾರ್ಥವಾಗಿ ಕೆರೆಯ ನೀರಿಗೆ ಕಲ್ಲು ಹೊಡೆದ, ಎಂಬುದಷ್ಟೇ ಪರಿವರ್ತನೆಯೆ? ಇಂಥಾ ಪ್ರತಿಭಟನೆ ಜನಪದ ಕಥೆಯ ಹೂರಣದಲ್ಲಿ ಸಹ ಇದೆ.

ಬೆಂಗಳೂರು **ಡಾ|| ರಾಜೇಗೌಡ ಹೊಸಹಳ್ಳಿ**

ನವೆಂಬರ್ ೨೦೧೨ರ 'ಹೊಸತು' ಪೋಸ್ಕೊ ಮತ್ತೆ ಸದ್ದು ಮಾಡಿರುವ ಸುದ್ದಿ ಜಾಗೃತಗೊಳ್ಳುವಂತೆ ಮಾಡಿದೆ. ಅಲ್ಲಿನ ಅನ್ನದಾತರು ಅರಿಯಬೇಕಾದ ವಿಷಯ.

ವಿ. ಎನ್. ಸುಬ್ಬರಾವ್, ಡಾ|| ಬುದ್ದಣ್ಣ ಹಿಂಗಮಿರೆ, ನಟ ಎ. ಕೆ. ಹಂಗಲ್‌ರ ಅಗಲಿಕೆ ತುಂಬ ಬಾಧಿಸಿದವು. ರಾಷ್ಟ್ರಕ್ಕೆ, ನಾಡಿಗೆ ಅವರ ಸೇವೆ ಅನುಪಮವಾಗಿದೆ. ವೈಜ್ಞಾನಿಕತೆಗೆ ಹೆಚ್ಚು ಒತ್ತುಕೊಡುವ ಲೇಖನಗಳು ಖುಷಿ ಕೊಡುತ್ತಿವೆ. ಧನ್ಯವಾದಗಳು.

ಭಾಗ್ಯನಗರ, ಕೊಪ್ಪಳ **ಅಕ್ಬರ್ ಸಿ. ಕಾಲಿಮಿರ್ಚಿ**

ಸಂಚಿಕೆ ಕೈಹಿಡಿಯುತ್ತಲೇ ಕಾಣಿಸಿದುದು ಮೊದಲ ಪುಟದಲ್ಲಿನ ಅಗ್ರಗಣ್ಯ ರಂಗಕಲಾಪರಿಣತ ಎ. ಕೆ. ಹಂಗಲ್‌ರವರ ಭಾವಚಿತ್ರ! ಅರೆ, ಎ.ಕೆ.ಯವರು ಇಲ್ಲೇಕೆ ಎಂದು ಎನ್ನೊಳಗೇ ಪ್ರಶ್ನಿಸಿಕೊಂಡು ಒಳಪುಟ ಇಣುಕಿದಾಗ ಇನ್ನಷ್ಟು ವಿವರಗಳು ಮುಂತಾದುವನ್ನು ಅರಗಿಸಿಕೊಳ್ಳಲು ಹರಸಾಹಸ ಪಡಬೇಕಾಯಿತು.

ಆಗ ಮಧ್ಯೆ ತಡೆಹಿಡಿದು ರಂಗಭೂಮಿಗೆ ಆಯಾಮ ನೀಡಿದ ಹಿರಿಯ ರಂಗ ಕಲಾವಿದೆ ಆರ್. ನಾಗರತ್ನಮ್ಮ ಎಂಬ ಶ್ರದ್ಧಾಂಜಲಿ ಬರಹ. ಮಹಿಳಾ ರಂಗಭೂಮಿ ಎಂಬ ಅಖಾಡ ಸ್ಥಾಪಿಸಿ ಪುರುಷ ಪಾತ್ರದಲ್ಲಿ ಪೌರುಷದ ಅಟ್ಟಹಾಸ ನೀಡಿ ಹೆಸರಾಂತ ಮಹಿಳಾಸಾಧಕಿ ಇನ್ನಿಲ್ಲ ಎಂಬುದೂ ನುಂಗಲಾರದ ತುತ್ತೇ ಹೌದು. ನಮ್ಮನ್ನಗಲಿದ ವಿನಯಶೀಲ ನಟ ಎ. ಕೆ. ಹಂಗಲ್ ಲೇಖನ ಎಸ್. ಸುರೇಂದ್ರರಿಂದ ನಿರೂಪಿಸಿ ಸಿದ್ಧವೇ ಆಗಿತ್ತಲ್ಲಾ– ಒತ್ತಿನಲ್ಲೇ ಧಾರವಾಡಕ್ಕೂ ಬಂದಿದ್ದರೆಂಬುದನ್ನು ಡಾ|| ಸಿದ್ದನಗೌಡ ಪಾಟೀಲರು ನೆನಪಿರಿಸಿಕೊಂಡು ಇವರಿಬ್ಬರಿಂದ ಈ ಜನಪ್ರೇಮೀ ಸಿನಿಮಾ ನಾಯಕನ ಒಟ್ಟು ಗುಣಗಳು ಮನದಟ್ಟು ಮಾಡಿಸಿಕೊಂಡವು. ಸಹ ಸಂಪಾದಕ ಸಿ. ಆರ್. ಕೃಷ್ಣರಾವ್ ಅವರಿಂದ ಪತ್ರಕರ್ತ ಸುಬ್ಬರಾವ್ ಅವರಿಗೆ ನೀಡಿದ ನುಡಿನಮನದ ನುಡಿಕಟ್ಟುಗಳು ಮನಮುಟ್ಟುವಂತಿದ್ದವು.

ಸುಮಂಗಲಾ ಎಸ್. ಮುಮ್ಮಿಗಟ್ಟಿಯವರ 'ಕಾಗದದ ಕಥೆ' ಎಂಬ ಅರಿವಳಿಕಾ ವಿಧಾನ ಸಮಾಧಾನಕರವಾಗಿ ಮೂಡಿಬಂದಿದೆ. ಡಾ|| ವಿಜಯಕುಮಾರ್ ಎಂ. ಬೋರಟ್ಟಿಯವರ – ನರಸಯ್ಯನ ಸನ್ಯಾಸತ್ವ ಹಾಗೂ ಡಾ|| ಪಂಚಾಕ್ಷರೀ ಹಿರೇಮಠ ಅವರಿಂದ ಅನುವಾದಗೊಂಡ ಗುಮಾಸ್ತ ಮತ್ತು ರಾವಣ ಎಂಬೀ ಎರಡು ಲೇಖನಗಳು ಆಸಕ್ತಿಯಿಂದ ಓದಿಸಿಕೊಂಡು ಸಮಾಜದೊಳಗೇ ನೆಲೆಸಿ ನಿಂತು ಆಗಾಗ ರಿಲೇ ಮಾಡುತ್ತಲೇ ಇರುವ ಎರಡು ಭಿನ್ನ ನಡವಳಿಕೆಗಳ ದರ್ಶನಕ್ಕೆಡೆ ನೀಡಿದವು. ಅಭಿನಂದನೆಗಳು.

ಕಾಸರಗೋಡು **ಕೇರಿಕ್ಕಾಡು ವನಮಾಲ ಕೇಶವ ಭಟ್ಟ**

ಜೂನ್ ೨೬

ವಿಶ್ವ ಮಾದಕ ವಸ್ತು ವ್ಯಸನ ವಿರೋಧಿ ದಿನ

# ಮಾದಕ ಮದ್ದುಗಳ ಮೃತ್ಯುಕೂಪ



ವಿಶ್ವದಾದ್ಯಂತ ಇಂದು ಗಂಭೀರ ಚರ್ಚೆಗೊಳಗಾಗುತ್ತಿರುವ ವಿಷಯಗಳಲ್ಲಿ ಮಾದಕ ವಸ್ತುಗಳ ಚಟ ಮುಖ್ಯವಾದದ್ದು. ಪ್ರಪಂಚದ ಎಲ್ಲ ದೇಶಗಳಲ್ಲಿಯೂ ಈ ಚಟ ವ್ಯಾಪಿಸಿ ಕೊಂಡಿದೆ. ಕಳೆದ ಐವತ್ತು ವರ್ಷಗಳಿಂದಲೂ ಸಮಸ್ಯೆಯ ಬಾಹುಳ್ಯತೆ ಏರುಗತಿಯಲ್ಲಿಯೇ ಮುಂದುವರಿದಿದೆ. ಚಿನ್ನಕ್ಕಿಂತ ಹೆಚ್ಚು ಬೆಲೆಬಾಳುವ ಮಾದಕ ವಸ್ತುಗಳು, ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ವರ್ಷಂಪ್ರತಿ ೧೦೦ ಬಿಲಿಯನ್ ಡಾಲರಿನಷ್ಟು ವ್ಯಾಪಾರವಾಗುತ್ತಿವೆ. ಈ ವ್ಯಾಪಾರಕ್ಕೆ ತನ್ನದೇ ಆದ ವ್ಯವಸ್ಥಿತ ಜಾಲವೂ ರೂಪುಗೊಂಡಿದೆ. ಎಳೆಯ ವಯಸ್ಸಿನವರಿಗೆ ಚಟ ಅಂಟಿಸಿ ಅವರನ್ನು ಗಾಳಕ್ಕೆ ಸಿಲುಕಿಸಿಕೊಳ್ಳುವ ಹುನ್ನಾರವೂ ನಡೆದಿದೆ. ಈ ವಿಷವೃತ್ತದ ಹಿಂದೆ ಅಪರಾಧಿಗಳ, ಕಳ್ಳ ಸಾಗಾಣಿಕೆದಾರರ, ಭಯೋತ್ಪಾದಕರ, ಉಗ್ರಗಾಮಿಗಳ, ಮತ್ತು ಸಮಾಜಬಾಹಿರ ಶಕ್ತಿಗಳ ಕೈವಾಡವೂ ಸೇರಿದೆ.

ಜಗತ್ತಿನ ಯುವಜನತೆ ''ಡ್ರಗ್ ಕಲ್ಚರ್''ಗೆ ಸೆರೆಯಾಗುತ್ತಿದ್ದಾರೆ. ೧೨ರಿಂದ ೨೦ ವರ್ಷದ ಮುಗ್ಧ ಮಕ್ಕಳೇ ಹೆಚ್ಚಾಗಿ ಮದ್ದಿನ ಬಲೆಗೆ ಬೀಳುತ್ತಿರುವ ದುರಂತ ಸಂಭವಿಸುತ್ತಿದೆ. ವಿಶ್ವದಲ್ಲಿ ೫೦ ಮಿಲಿಯನ್ ಹಾಗೂ ಭಾರತದಲ್ಲಿ ೫ ಮಿಲಿಯನ್ ಜನರು ಮದ್ದಿನ ವ್ಯಸನಿಗಳಾಗಿದ್ದಾರೆ. ಭಾರತವು ಮದ್ದುಗಳ ಕಳ್ಳಸಾಗಾಣಿಕೆ ಮಾರ್ಗಗಳ ಸಮೀಪವೇ ಆಯಕಟ್ಟಿನ ಜಾಗದಲ್ಲಿದೆ. ಹೀಗಾಗಿ ಭಾರತದ ಯುವಜನತೆ ಮದ್ದಿನ ಪಾಶಕ್ಕೆ ಗ್ರಾಸವಾಗುವ ಸಾಧ್ಯತೆಗಳು ಹೆಚ್ಚಾಗಿವೆ. ಭಾರತದಲ್ಲಿ ಅಂದಾಜು ಪ್ರತಿ ೩೦ ಜನ ಮದ್ಯವ್ಯಸನಿಗೆ ಒಬ್ಬ ಮದ್ದಿನ ವ್ಯಸನಿ ಇರುತ್ತಾನೆ ಎಂಬುದು ಸಮೀಕ್ಷೆಗಳಿಂದ ಸಾಬೀತಾಗಿದೆ.

ಮನುಷ್ಯನ ಆರೋಗ್ಯಕ್ಕೆ ಮಾರಕವಾಗುವ ೨೦ ವಸ್ತುಗಳನ್ನು ವಿಶ್ವ ಆರೋಗ್ಯ ಸಂಸ್ಥೆ ಗುರುತಿಸಿದೆ. ಇವುಗಳಲ್ಲಿ ತಂಬಾಕು, ಮದ್ಯ ಹಾಗೂ ಮಾದಕ ಮದ್ದು ಅತಿಮುಖ್ಯವಾದುವುಗಳಾಗಿವೆ. ಮಾದಕ ಮದ್ದುಗಳಿಂದ ವ್ಯಸನಿಗಳಿಗೆ, ಅವರ ಕುಟುಂಬಕ್ಕೆ, ಸಮಾಜಕ್ಕೆ, ದೇಶಕ್ಕೆ, ಆಗುತ್ತಿರುವ ಹಾನಿ ಅಪಾರ. ಆದುದರಿಂದ ವಿಶ್ವ ಆರೋಗ್ಯ ಸಂಸ್ಥೆ ಮಾದಕ ವಸ್ತು ವ್ಯಸನದ ನಿವಾರಣೆಗೆ ಆದ್ಯತೆ ನೀಡಿ ಶ್ರಮಿಸುತ್ತಿದೆ. ಈ ನಿಟ್ಟಿನಲ್ಲಿ ಪ್ರತಿವರ್ಷ ಜೂನ್ ೨೬ರಂದು 'ವಿಶ್ವ ಮಾದಕ ವಸ್ತು ವ್ಯಸನ ವಿರೋಧಿ ದಿನ'ವನ್ನಾಗಿ ಪ್ರಪಂಚದಾದ್ಯಂತ ಆಚರಿಸಲಾಗುತ್ತದೆ. ಈ ವರ್ಷದ (೨೦೧೨) ಘೋಷಣ ವಾಕ್ಯ ''ವಿಶ್ವದ ಆರೋಗ್ಯ ಪ್ರಾರಂಭವಾಗುವುದು ಮದ್ದು ರಹಿತ ಸಮಾಜದಿಂದ'' (ಗ್ಲೋಬಲ್ ಹೆಲ್ತ್ ಸ್ಟಾರ್ಟ್ಸ್ ವಿಥ್ ಡ್ರಗ್ ಫ್ರೀ ಸೊಸೈಟಿ) ಎಂದಿದೆ.

**ಮಾದಕ ವಸ್ತು ಎಂದರೇನು ?**

ಮನುಷ್ಯನ ದೈಹಿಕ ಹಾಗೂ ಮಾನಸಿಕ ಸಹಜ ವರ್ತನೆಗಳಲ್ಲಿ ಬದಲಾವಣೆ ಉಂಟು ಮಾಡುವ ಸಾಮರ್ಥ್ಯ ಹೊಂದಿರುವ, ಆಹಾರವೂ ಅಲ್ಲದ, ಔಷಧಿಯೂ ಅಲ್ಲದ, ಪದಾರ್ಥಗಳನ್ನು ಮಾದಕ ವಸ್ತು ಎನ್ನುತ್ತಾರೆ. ಹಿಂದೆ ಪ್ರಕೃತಿದತ್ತ ಪದಾರ್ಥಗಳಿಂದ ಮಾದಕ ವಸ್ತು ಗಳನ್ನು ಪಡೆಯಲಾಗುತ್ತಿತ್ತು. ಈಗ ಮನುಷ್ಯನ ಅನುಭವ ಮತ್ತು ವರ್ತನೆಗಳಲ್ಲಿ ವೈಪರೀತ್ಯ ಹುಟ್ಟಿಸುವ ಅದ್ಭುತ ಪ್ರಭಾವಶಾಲಿ ರಾಸಾಯನಿಕಗಳು ಪ್ರಯೋಗಶಾಲೆಯಲ್ಲಿಯೂ ಸೃಷ್ಟಿಯಾಗುತ್ತಿವೆ.

ಮದ್ದು ಚಟವಿರುವವರಲ್ಲಿ ನಿರಾಸಕ್ತಿ , ಅವಧಾನ ದೋಷ, ನೆನಪಿನ ಶಕ್ತಿ ಕುಂದುವುದು, ಗೊಂದಲ, ಭ್ರಾಂತಿ, ಅಸ್ತವ್ಯಸ್ತ ಚಲನೆ, ಅತೀ-ಭೀತಿ, ಮುಂತಾದ ತೊಂದರೆಗಳ ಜೊತೆಗೆ ಹೃದಯ, ಮೂತ್ರಪಿಂಡ, ಮೂಳೆಗಳು ರೋಗಗಳ ತಾಣವಾಗುತ್ತವೆ. ಆರೋಗ್ಯ ಕುಸಿತಗೊಳ್ಳುತ್ತದೆ. ವ್ಯಕ್ತಿತ್ವ ಅಧೋಗತಿಗೆ ಇಳಿಯುತ್ತದೆ. ಸಾವು, ನೋವಿನ ಸಮಸ್ಯೆ ಹೆಚ್ಚಾಗುತ್ತದೆ. ಇದರಿಂದ ಕುಟುಂಬ ಮತ್ತು ಸಮಾಜಕ್ಕೆ ಪೆಟ್ಟು ಬೀಳುತ್ತದೆ. ಹೆಚ್ಚು ಮದ್ದು ಸೇವನೆಯಿಂದ ಸಾವು, ಅಪಘಾತ, ಅಪರಾಧ, ಆತ್ಮಹತ್ಯೆ ಪ್ರಕರಣಗಳು ಸಾಮಾನ್ಯವಾಗುತ್ತವೆ.

ಮದ್ದು ವ್ಯಸನಿ ಆಹಾರ, ಸ್ನಾನ, ಸ್ವಚ್ಛತೆಯನ್ನು ಅಲಕ್ಷಿಸುವುದರಿಂದ ಅನೇಕ ಕಾಯಿಲೆಗಳಿಗೆ ಸೆರೆಯಾಗುತ್ತಾನೆ, ಇಂಜೆಕ್ಷನ್ ಮೂಲಕ ಮದ್ದು ತೆಗೆದುಕೊಳ್ಳುವವರು ಎಚ್.ಐ.ವಿ. ಹಾಗೂ ಹೆಪಟೈಟಿಸ್ ಸೋಂಕುಗಳಿಗೆ ಸೆರೆಯಾಗುತ್ತಾರೆ. ಮದ್ದು ವ್ಯಸನಿ ಹಾಗೂ ಆತನ ಕುಟುಂಬ, ಆರ್ಥಿಕವಾಗಿ ಸಾಮಾಜಿಕವಾಗಿ ಜರ್ಜರಿತಗೊಳ್ಳುತ್ತದೆ. ಸಾಮಾಜಿಕ ಸ್ಥಾನಮಾನ ಕಳೆದುಕೊಳ್ಳುತ್ತದೆ.

**ಡಾ|| ಡಿ. ಕೆ. ಮಹಾಬಲರಾಜು**

ವೈದ್ಯಕೀಯ ಕಾರಣಗಳಿಗಲ್ಲದೆ, ಸಾಮಾಜಿಕ ನಿರ್ಬಂಧನೆಗೆ ವಿರೋಧವಾಗಿ, ಮನಸ್ಸಿನ ಸ್ಥಿತಿಯನ್ನು ಬದಲಿಸಿಕೊಳ್ಳಲು ವ್ಯಕ್ತಿ ತಾನೇ ಸ್ವಯಂ ಮಾದಕ ವಸ್ತುಗಳನ್ನು ಸೇವಿಸುತ್ತಿರುವಿಕೆಯನ್ನು ಮಾದಕ ವಸ್ತುಗಳ ದುರ್ಬಳಕೆ, ದುರ್ವ್ಯಸನ (ಅಡಿಕ್ಷನ್) ಎನ್ನುತ್ತಾರೆ.

ಮದ್ದುಗಳನ್ನು, ಅವು ಮನಸ್ಸಿನ ಮೇಲೆ ಬೀರುವ ಪ್ರಭಾವಕ್ಕೆ ಅನುಗುಣವಾಗಿ ವರ್ಗೀಕರಿಸಲಾಗಿದೆ. ಅವೆಂದರೆ :

೧. ಮಾಂದ್ಯಜನಕ : ಬಾರ್ಬಿಟುರೇಟ್ಸ್, ಮದ್ಯಸಾರ
೨. ನಿದ್ರಾಜನಕ : ಅಫೀಮು, ಹೆರಾಯಿನ್, ಮಾರ್ಫಿನ್
೩. ಉತ್ತೇಜಕ : ಆಂಪಿಟಮಿನ್ಸ್, ಕೊಕೇನ್, ಕೆಫೀನ್
೪. ಭ್ರಮಾಜನಕ : ಎಲ್.ಎಸ್.ಡಿ., ಪಿಸಿಪಿ, ಮ್ಯಾರಿಹ್ವಾನ, ಭಂಗ್, ಚರಸ್, ಗಾಂಜಾ

ಮದ್ದುಗಳು ಮೆದುಳನ್ನು ಪ್ರವೇಶಿಸಿ ಅಲ್ಲಿನ ರಾಸಾಯನಿಕ ಕ್ರಿಯೆಗಳನ್ನು ಬದಲಿಸಿ ತಮ್ಮ ಹೆಸರಿಗೆ ಅನುಗುಣವಾಗಿ ಪ್ರಭಾವ ಬೀರುತ್ತವೆ. ಭ್ರಮಾಜನಕಗಳು ಮೆದುಳಿನ ಕಾರ್ಯನಿರ್ವಹಣಾ ಹಿಡಿತ (ಗಿಯರ್)ವನ್ನೇ ಅಸ್ತವ್ಯಸ್ತಗೊಳಿಸುತ್ತವೆ. ಇದರ ಪ್ರಭಾವಕ್ಕೆ ಒಳಗಾದ ವ್ಯಕ್ತಿಯ ಚೇತನ, ಭಾವನೆ, ಆಲೋಚನೆ, ಸಂವೇದನೆ, ಅನುಭವ, ನಡೆ ನುಡಿ, ಅಂತರೀಕ್ಷಣೆ, ಪ್ರತ್ಯಕ್ಷಣಗಳೆಲ್ಲಾ ಅವಾಸ್ತವಿಕವಾಗುತ್ತವೆ. ಆತ ಚಿತ್ರವಿಚಿತ್ರ ಸಂವೇದನೆ ಪಡೆಯುತ್ತಾ ಭ್ರಮಾಲೋಕದಲ್ಲಿ ಕನಸು ಕಾಣುತ್ತಾನೆ. ಏನೂ ಇಲ್ಲದಿದ್ದರೂ, ಆನೆ ಗಾತ್ರದ ಇರುವೆಗಳು, ಇರುವೆ ಗಾತ್ರದ ಆನೆಗಳು ತನ್ನ ಕಡೆ ಧಾವಿಸಿ ಬರುತ್ತಿರುವಂತೆ ಕಾಣುತ್ತಾನೆ. ಲಿಲಿಪುಟ್ ಜನರ ನಡುವೆ ತಾನೊಬ್ಬ ಮಹಾಕಾಯದ ಮನುಷ್ಯನಾಗಿದ್ದೇನೆ ನಾನು ಎಂದು ಭಾವಿಸುತ್ತಾರೆ. ಇಲ್ಲದ್ದನ್ನು ನೋಡುತ್ತಾನೆ, ಕೇಳುತ್ತಾನೆ, ಸ್ಪರ್ಶಿಸುತ್ತಾನೆ. ಶಬ್ದವನ್ನು ಸ್ಪರ್ಶಿಸುತ್ತಾನೆ. ಚಿತ್ರವನ್ನು ಕೇಳುತ್ತಾನೆ. ತಾನು ಯಾರು ಎಂಬುದರ ಬಗ್ಗೆಯೂ ಆತನಿಗೆ ಗೊಂದಲ ಉಂಟಾಗುತ್ತದೆ. ಗಂಟೆಗಳು ಯುಗವಾಗಿ ಕಾಣುತ್ತವೆ.

**ಮಾದಕ ವಸ್ತುಗಳ ದುರ್ವ್ಯಸನ ಹೇಗೆ ?**

ಯಾವುದೇ ವ್ಯಕ್ತಿ ತಾನು ಮಾದಕ ವಸ್ತುಗಳ ದುರ್ವ್ಯಸನಿ (ಅಡಿಕ್ಟ್) ಆಗಬೇಕೆಂಬ ಇಚ್ಛೆಯಿಂದ ಮದ್ದಿನ ಸೇವನೆ ಆರಂಭಿಸುವುದಿಲ್ಲ. ಸುಖಾನುಭವ ಪಡೆವ ವಾಂಛೆ (ಭ್ರಮೆ)ಯಿಂದ ಮದ್ದಿನ ಸೇವನೆ ಪ್ರಾರಂಭಿಸುತ್ತಾನೆ. ಅಪಾಯಕಾರಿ ಎಂದು ಗೊತ್ತಿದ್ದರೂ, ಮನಸ್ಸು ಮಾಡಿದಾಗ ತಕ್ಷಣ ಇದನ್ನು ಬಿಡಬಲ್ಲೆ ಎಂಬ ಆತ್ಮವಿಶ್ವಾಸ ಮೂಡಿಸಿ ಕೊಂಡಿರುತ್ತಾನೆ. ಆದರೆ ವಾಸ್ತವದಲ್ಲಿ ಇದು ಹಾಗಾಗುವುದೇ ಇಲ್ಲ. ಮದ್ದಿನ ಲೋಕಕ್ಕೆ ಹೋಗಲು ಮಾತ್ರ ರಹದಾರಿ ಇದೆ. ಅಲ್ಲಿಂದ ತಪ್ಪಿಸಿಕೊಂಡು ಹೊರಬರುವ ಹಾದಿ ಇರುವುದಿಲ್ಲ. ಇದೊಂದು ಚಕ್ರವ್ಯೂಹ. ಮದ್ದಿನ ಚಟಕ್ಕೆ ಸಿಕ್ಕ ಮನುಷ್ಯ ಬೋನಿನಲ್ಲಿ ಬಿದ್ದ ಇಲಿಯಂತೆ ಸಾಯುವ ತನಕ ವಿಲಿವಿಲಿ ಒದ್ದಾಡಬೇಕಾಗುತ್ತದೆ.

ಮೊದಮೊದಲಿಗೆ, ಮದ್ದಿನ ಬಳಕೆ ಆಹ್ಲಾದಕರವಾಗಿರುತ್ತದೆ. ಮದ್ದಿನ ಪ್ರಭಾವ ಇಳಿದಾಗ ಹಿತಾನುಭವವೂ ಇಳಿಯುತ್ತದೆ. ಅವನ ದೇಹಕ್ಕೆ ಮಾದಕ ವಸ್ತು ಎಷ್ಟು ಅವಶ್ಯಕವಾಗಿರುತ್ತದೆಂದರೆ ಅದಿಲ್ಲದಿದ್ದಾಗ ತೀರಾ ಅಹಿತಕರ ಅನುಭವವಾಗುತ್ತದೆ. ದೈಹಿಕ ಹಾಗೂ ಮಾನಸಿಕ ಕಲಾಪಗಳೆಲ್ಲಾ ಮರಗಟ್ಟುತ್ತವೆ. ಸಹಿಸಲಸಾಧ್ಯವಾದ ಅನಾಸಕ್ತಿ, ನಿರಾಸೆ, ಚಡಪಡಿಕೆಗಳು ಪುಟಿದೇಳುತ್ತವೆ. ಅವನನ್ನು ನಿದ್ರಾಹೀನತೆ, ಖಿನ್ನತೆ, ಕೈಕಾಲು ನಡುಕ, ಉಗ್ರವರ್ತನೆ, ಹಿಂಸಾಭಾವ ಕಾಡುತ್ತವೆ. ಮದ್ದಿಲ್ಲದೆ ಬದುಕುವುದನ್ನು ಯೋಚಿಸುವುದೂ ಕಷ್ಟವಾಗುತ್ತದೆ. ದೇಹ ಮನಸ್ಸು ಎರಡೂ ಮದ್ದಿಗಾಗಿ ಹಪಹಪಿಸುತ್ತವೆ. ಆತ ಮತ್ತೆ ಮದ್ದಿಗೆ ಶರಣಾಗುತ್ತಾನೆ. ಹೀಗೆ ದಿನೇ ದಿನೇ ವ್ಯಕ್ತಿ ಮದ್ದಿಗೆ ಸಹನಶಕ್ತಿ, ಅವಲಂಬನೆ ಬೆಳೆಸಿಕೊಳ್ಳುತ್ತಾನೆ.

ದಿನೇ ದಿನೇ ಮದ್ದಿನ ಅವಶ್ಯಕತೆಯ ಪ್ರಮಾಣ ಹೆಚ್ಚುತ್ತದೆ. ಪದೇ ಪದೇ ಹೆಚ್ಚು ಸೇವಿಸಬೇಕೆನಿಸುತ್ತದೆ. ಮನಸ್ಸನ್ನು ಪರಿವರ್ತಿಸುವ ಎಲ್ಲಾ ಮದ್ದುಗಳು ಚಟ ಹಿಡಿಸುತ್ತವೆ. ಹಂತ ಹಂತವಾಗಿ ಚಾಳಿಗ ಮದ್ದಿನ ದಾಸಾನುದಾಸನಾಗುತ್ತಾನೆ. ಮದ್ದಿನ ಹೊರತು ಅವನಿಗೆ ಬೇರೆ ಪ್ರಪಂಚವೇ ಇರುವುದಿಲ್ಲ. ಮದ್ದನ್ನು ಪಡೆಯಲು ವ್ಯಸನಿ ಕಳ್ಳತನ, ದರೋಡೆ, ಖೂನಿ, ಮತ್ತಿತರ ಹೇಯಕೃತ್ಯಗಳನ್ನು ಮಾಡಲೂ ಹೇಸುವುದಿಲ್ಲ.

ಮದ್ದಿನ ಚಾಳಿಯಿಂದ ಪರಿಸ್ಥಿತಿ ಬಿಗಡಾಯಿಸುತ್ತಾ ಹೋಗುತ್ತದೆ. ಮಾದಕ ವ್ಯಸನಿ ದೈಹಿಕವಾಗಿ, ಕೌಟುಂಬಿಕವಾಗಿ, ಸಾಮಾಜಿಕವಾಗಿ ಅಧೋಗತಿ ತಲುಪಿ, ಎಲ್ಲವನ್ನೂ, ಎಲ್ಲರನ್ನೂ ಬಿಟ್ಟು ಮದ್ದಿನ ಲೋಕದ ಸೆರೆಯಾಳಾಗುತ್ತಾನೆ. ಮದ್ದಿನ ಪ್ರಭಾವಕ್ಕೆ ಒಳಗಾದ ಮೆದುಳು ಶಾಶ್ವತವಾಗಿ ಅಧಃಪತನಗೊಳ್ಳುತ್ತದೆ. ಹೀಗಾಗಿ ಮದ್ದಿನ ಸೇವನೆಯನ್ನು ಸಂಪೂರ್ಣವಾಗಿ ನಿಲ್ಲಿಸಿದರೂ, ವ್ಯಸನಿಯು ಸಂಪೂರ್ಣವಾಗಿ ಹಿಂದಿನಂತಾಗುವುದೇ ಇಲ್ಲ. ಈ ರೀತಿ ಮದ್ದಿನ ವ್ಯಸನಿಯು ತನಗೆ ಮಾತ್ರವಲ್ಲದೆ ಕುಟುಂಬ, ಸಮಾಜ, ದೇಶ ಹಾಗೂ ರಾಷ್ಟ್ರಕ್ಕೆ ಕಂಟಕಕಾರಿಯಾಗುತ್ತಾನೆ.

ಮಾದಕ ಮದ್ದುಗಳು ಸಿಗದಿದ್ದಾಗ, ಇಲ್ಲವೇ ಅವಕ್ಕೆ ಹಣ ಹಾಕಲು ಶಕ್ತಿ ಇರದಿದ್ದರೆ ಕೆಲವು ವ್ಯಸನಿಗಳು, ಪೆಟ್ರೋಲ್, ಈಥರ್, ಕ್ಲೋರೊಫಾರಂ, ನೈಟ್ರಿಕ್ ಆಕ್ಸೈಡ್, ಪೈಂಟ್ ಥಿನ್ನರ್, ವೈಟ್‌ನರ್, ಶುಚಿಗೊಳಿಸಲು ಬಳಸುವ ದ್ರವ ಮುಂತಾದವುಗಳನ್ನು ಆಘ್ರಾಣಿಸುತ್ತಾರೆ, ಇಲ್ಲವೆ ಸೇವಿಸುತ್ತಾರೆ.

ಕಾಫಿ, ಟೀ, ಕೋಲಾ, ತಂಬಾಕು, ಮದ್ಯ ಇವೆಲ್ಲಾ ಒಂದು ರೀತಿಯಲ್ಲಿ ಮಾದಕ ವಸ್ತುಗಳೇ. ಇವುಗಳ ಬಳಕೆ ಸಮಾಜದಲ್ಲಿ ಎಷ್ಟು ಸಾಮಾನ್ಯವಾಗಿದೆಯೆಂದರೆ, ಅವುಗಳ ಬಳಕೆ ಒಂದು ದುರ್ವ್ಯಸನ ಎಂದು ಒಪ್ಪಲು ಸಮಾಜ ತಯಾರಿಲ್ಲ. ಇವು ಅಭ್ಯಾಸವಷ್ಟೆ, ಚಟಗಳಲ್ಲ. ಉತ್ತರ ಭಾರತದಲ್ಲಿ ಹೋಳಿ ಹುಣ್ಣಿಮೆ ದಿನ ಭಂಗ್ ಸೇವಿಸುವುದು, ಕೆಲ ಧಾರ್ಮಿಕ ಸಮಾರಂಭಗಳಲ್ಲಿ ಜನ ಗಾಂಜಾ ಸೇದುವುದು, ಕೆಲ ಬೈರಾಗಿಗಳು, ಫಕೀರರು ಗಾಂಜಾ ಸೇದುವುದು, ಕೂಡ ದುರ್ವ್ಯಸನವೆಂದು ಪರಿಗಣಿಸಲಾಗಿಲ್ಲ. ಏಕೆಂದರೆ ಇಲ್ಲಿ ಸ್ಥಳ, ಸನ್ನಿವೇಶ, ಪ್ರಮಾಣದ ಬಗ್ಗೆ ನಿರ್ಬಂಧಗಳಿವೆ ಮತ್ತು ಇಲ್ಲಿ ಪದೇ ಪದೇ ಮದ್ದಿನ ಬಳಕೆ ಮುಂದುವರಿಯುವುದಿಲ್ಲ. ಈ ರೀತಿಯ ಸೇವನೆಯ ಹಿಂದೆ ಉದ್ದೇಶವಿರುತ್ತದೆ. ಹೀಗಾಗಿ ಇದನ್ನು ಸಮಾಜ ಮನ್ನಿಸಿದೆ.



**ಮದ್ದು ವ್ಯಸನಿಗಳ ಲಕ್ಷಣಗಳು**

ಮದ್ದು ವ್ಯಸನಿಗಳನ್ನು ಗುರುತಿಸುವುದು ಸುಲಭ. ಅವರಲ್ಲಿರುವ ಕೆಲ ಲಕ್ಷಣಗಳೆಂದರೆ :

ಮಾತು ತೊದಲುವುದು, ಬೆವರು ಸುರಿಯುವುದು, ಕಣ್ಣು ಕೆಂಪಾಗುವುದು, ದೇಹದಿಂದ ದುರ್ನಾತ, ನಿಲವು ಮತ್ತು ನಡೆದಾಟದಲ್ಲಿ ಅಸ್ಥಿರತೆ ಮತ್ತು ತೂರಾಟ, ನಿದ್ದೆಯ ಜೋಮು, ಆಲಸಿತನ ಮೂಗಿನ ಹೊಳ್ಳೆ ಕೆಂಪಾಗಿರುವುದು. ತುಟಿಗಳನ್ನು ಹಸಿಯಾಗಿಸಲು ನಾಲಿಗೆಯಿಂದ ಪದೇ ಪದೇ ಸವರಿಕೊಳ್ಳುವುದು. ಕೆಲಸಕ್ಕೆ ಪದೇ ಪದೇ ಗೈರು ಹಾಜರಾಗುವುದು, ಸ್ನಾನ, ಬಟ್ಟೆ ಇವುಗಳ ಬಗ್ಗೆ ಅಲಕ್ಷ್ಯ, ಕಕ್ಕಸ್ಸಿನಲ್ಲಿ ಗಂಟೆಗಟ್ಟಲೆ ಕೂರುವುದು, ಹಸಿವಿಲ್ಲದಿರುವುದು. ತೂಕದಲ್ಲಿ ವಿಪರೀತ ಇಳಿಕೆ, ಯಾವುದರಲ್ಲೂ ಆಸಕ್ತಿ ಇಲ್ಲದಿರುವುದು, ಓದಿನಲ್ಲಿ, ಬುದ್ಧಿವಂತಿಕೆಯಲ್ಲಿ ಹಿಂದೆ ಬೀಳುವುದು, ಮೈ, ಕೈ, ಕಾಲು ನಡುಗುವುದು, ಭಾವನೆಗಳಲ್ಲಿ

ತಕ್ಷಣದ ಬದಲಾವಣೆ, ಮುಖಚಹರೆ ಮರೆಮಾಚಲು ಕಪ್ಪು ಕನ್ನಡಕ ಧರಿಸುವುದು, ಇತ್ಯಾದಿ.

ಇಂಜೆಕ್ಷನ್ ಮೂಲಕ ಮದ್ದು ತೆಗೆದುಕೊಳ್ಳುವವರಲ್ಲಿ, ಸೂಜಿ ಚುಚ್ಚಿದ ಗುರುತು, ರಕ್ತದ ಕಲೆ, ಬಟ್ಟೆಗಳಿಗೆ ರಕ್ತ ಅಂಟಿರುವುದು, ಜೇಬಿನಲ್ಲಿ ಔಷಧಿ ಸಿರಿಂಜ್ ಇರುವುದು ಸಾಮಾನ್ಯ. ಚಾಳಿಗರು ಸೂಜಿ ಕಲೆಗಳನ್ನು ಮುಚ್ಚಿಕೊಳ್ಳಲು ಯಾವಾಗಲೂ ಉದ್ದ ತೋಳಿನ ಅಂಗಿ ಧರಿಸುತ್ತಾರೆ.

**ಮದ್ದು ವ್ಯಸನಿಗಳಾಗುವುದಕ್ಕೆ ಕಾರಣಗಳು**

ಯಾರಾದರೂ, ಯಾವಾಗಲಾದರೂ ಮದ್ದು ವ್ಯಸನಿಗಳಾಗಬಹುದು. ಆದಾಗ್ಯೂ ಹರೆಯಕ್ಕೆ ಕಾಲಿಡುತ್ತಿರುವ ಕೊಳೆಗೇರಿ ಮಕ್ಕಳು ಮದ್ದಿಗೆ ಸೆರೆಯಾಗುವುದು ಅಧಿಕ. ಸ್ನೇಹಿತರ ಒತ್ತಾಸೆ, ಕಂಪನಿ, ಪ್ರಲೋಭನೆ, ವಾಸಿಸುವ ಪರಿಸರದ ಪ್ರಭಾವ, ಮದ್ದುಗಳು ಸುಲಭವಾಗಿ ಸಿಗುವುದು, ಬಾಲಾಪರಾಧ ಗುಣ, ಆಧುನೀಕರಣ, ಆಧುನಿಕ ಜೀವನಶೈಲಿಯ ಅನುಕರಣೆ ಪ್ರಾಯೋಗಿಕವಾಗಿ ಮೋಜಿಗಾಗಿ ಮದ್ದನ್ನು ಪ್ರಾರಂಭಿಸುವುದು. ಕೀಳರಿಮೆ, ಅಂತರ್ಮುಖಿತ್ವದಿಂದ ಹೊರಬರುವ ಯತ್ನ, ಮಾನಸಿಕ ಚಿಂತೆ, ಸಾಹಸ ಪ್ರವೃತ್ತಿ, ಸುಖ ಪಡೆವ ಉದ್ದೇಶ, ಟಿ.ವಿ. ಸಿನಿಮಾಗಳ ಪ್ರಭಾವ, ಮನೆಯಿಂದ ಹೊರಗೆ ಹೆಚ್ಚಾಗಿ ಇರುವ ಕೆಲಸ, ನಗರಗಳಿಗೆ ವಲಸೆ ಬಂದಿರುವುದು, ತಾತ್ಸಾರಕ್ಕೊಳಗಾಗಿರುವೆ ಎಂಬ ಭಾವನೆ, ಕುಟುಂಬ ಕಲಹ, ಒಂಟಿಯಾಗಿರುವುದು, ಅಪರಾಧಿಪ್ರಜ್ಞೆ ಕಾಡುವುದು, ಮದ್ದಿನ ದಂಧೆಗೆ ಇಳಿದಿರುವುದು, ತಂದೆ-ತಾಯಿ ಇಲ್ಲದಿರುವುದು, ಪೋಷಕರ ಅಲಕ್ಷ್ಯ, ದುರ್ನಡತೆ, ಹಿಂಸಾ ಪ್ರವೃತ್ತಿ, ಕೆಲಸವಿಲ್ಲದಿರುವುದು, ಅತೀವ ಬಡತನ, ದುರ್ಬಲ ವ್ಯಕ್ತಿತ್ವ, ಅತೀ ಶ್ರೀಮಂತಿಕೆ, ಸಮಾಜ ವಿರೋಧಿ ಗುಣ, ದೀರ್ಘಕಾಲ ಗುಣವಾಗದ ಕಾಯಿಲೆ-ನೋವು, ಮುಂತಾದ ಹತ್ತು ಹಲವು ಕಾರಣಗಳು ವ್ಯಕ್ತಿಯನ್ನು ಮದ್ದುಗಳ ಕೂಪಕ್ಕೆ ತಳ್ಳುತ್ತವೆ. ಇತ್ತೀಚೆಗೆ, ವಿಶ್ವವಿದ್ಯಾಲಯಗಳಲ್ಲಿ ಮಾದಕ ಮದ್ದಿನ ಸಂಸ್ಕೃತಿ ತಲೆದೋರುತ್ತಿದೆ. ಕಲ್ಕತ್ತಾ, ಚೆನ್ನೈ, ದೆಹಲಿ ಮುಂತಾದ ಬೃಹತ್ ನಗರಗಳಲ್ಲಿ ಮದ್ದಿನ ಚಟ ಪಿಡುಗಿನೋಪಾದಿಯಲ್ಲಿ ಹೆಚ್ಚುತ್ತಿದೆ. ಬೀದಿಮಕ್ಕಳು, ಶಾಲಾ ಕಾಲೇಜು ವಿದ್ಯಾರ್ಥಿಗಳು, ಲೈಂಗಿಕ ಕಾರ್ಯಕರ್ತರು, ಚಾಲಕರು ಹೆಚ್ಚಾಗಿ ಮದ್ದಿನ ವ್ಯಸನಿಗಳಾಗುತ್ತಿದ್ದಾರೆ.

**ಮದ್ದು ವ್ಯಸನದ ಅಪಾಯಗಳು**

ಮಾದಕ ಮದ್ದುಗಳಿಂದ ಅನೇಕ ದೈಹಿಕ, ಮಾನಸಿಕ, ಸಾಮಾಜಿಕ, ಅಪಾಯಗಳು ಉಂಟಾಗುತ್ತವೆ. ಮದ್ದು ವ್ಯಸನ ಸಮಸ್ಯೆಯು ಯಾವುದೇ ದೇಶದ ಆರ್ಥಿಕ, ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆಯನ್ನೇ ಹಾಳುಗೆಡವುವಷ್ಟು ಶಕ್ತಿಯುಳ್ಳದ್ದಾಗಿದೆ.

ಮದ್ದು ಚಟವಿರುವವರಲ್ಲಿ ನಿರಾಸಕ್ತಿ, ಅವಧಾನ ದೋಷ, ನೆನಪಿನ ಶಕ್ತಿ ಕುಂದುವುದು, ಗೊಂದಲ, ಭ್ರಾಂತಿ, ಅಸ್ತವ್ಯಸ್ತ ಚಲನೆ, ಅತೀ-ಭೀತಿ, ಮುಂತಾದ ತೊಂದರೆಗಳ ಜೊತೆಗೆ ಹೃದಯ, ಮೂತ್ರಪಿಂಡ, ಮೂಳೆಗಳು ರೋಗಗಳ ತಾಣವಾಗುತ್ತವೆ. ಆರೋಗ್ಯ ಕುಸಿತಗೊಳ್ಳುತ್ತದೆ. ವ್ಯಕ್ತಿತ್ವ ಅಧೋಗತಿಗೆ ಇಳಿಯುತ್ತದೆ. ಸಾವು, ನೋವಿನ ಸಮಸ್ಯೆ ಹೆಚ್ಚಾಗುತ್ತದೆ. ಇದರಿಂದ ಕುಟುಂಬ ಮತ್ತು ಸಮಾಜಕ್ಕೆ ಪೆಟ್ಟು ಬೀಳುತ್ತದೆ. ಹೆಚ್ಚು ಮದ್ದು ಸೇವನೆಯಿಂದ ಸಾವು, ಅಪಘಾತ, ಅಪರಾಧ, ಆತ್ಮಹತ್ಯೆ ಪ್ರಕರಣಗಳು ಸಾಮಾನ್ಯವಾಗುತ್ತವೆ.

ಮದ್ದುವ್ಯಸನಿ ಆಹಾರ, ಸ್ನಾನ, ಸ್ವಚ್ಛತೆಯನ್ನು ಅಲಕ್ಷಿಸುವುದರಿಂದ ಅನೇಕ ಕಾಯಿಲೆಗಳಿಗೆ ಸೆರೆಯಾಗುತ್ತಾನೆ, ಇಂಜೆಕ್ಷನ್ ಮೂಲಕ ಮದ್ದು ತೆಗೆದುಕೊಳ್ಳುವವರು ಎಚ್.ಐ.ವಿ. ಹಾಗೂ ಹೆಪಟೈಟಿಸ್ ಸೋಂಕುಗಳಿಗೆ ಸೆರೆಯಾಗುತ್ತಾರೆ. ಮದ್ದು ವ್ಯಸನಿ ಹಾಗೂ ಆತನ ಕುಟುಂಬ, ಆರ್ಥಿಕವಾಗಿ ಸಾಮಾಜಿಕವಾಗಿ ಜರ್ಜರಿತಗೊಳ್ಳುತ್ತದೆ. ಸಾಮಾಜಿಕ ಸ್ಥಾನಮಾನ ಕಳೆದುಕೊಳ್ಳುತ್ತದೆ.

**ಸಮಸ್ಯೆಯ ನಿವಾರಣೆ**

ಸಮಾಜಕ್ಕೆ ಕಂಟಕವಾಗಿರುವ ಮದ್ದುಗಳ ದುರ್ಬಳಕೆ ಸಮಸ್ಯೆಯು ಇಡೀ ವಿಶ್ವದಿಂದಲೇ ನಿವಾರಣೆಯಾಗಬೇಕು. ಈ ನಿಟ್ಟಿನಲ್ಲಿ ನಾವು ಸಾಧಿಸಬೇಕಾದದ್ದು ಬಹಳ ಇದೆ. ಭಾರತವಂತೂ ಈ ಬಗ್ಗೆ ಹೆಚ್ಚು ಜವಾಬ್ದಾರಿಯನ್ನು ಹೊರಬೇಕಾಗುತ್ತದೆ. ಮದ್ದಿನ ವಿಷಜಾಲದಿಂದ ಮುಕ್ತರಾಗಲು ಮಾದಕ ವ್ಯಸನಿಗೆ ವೈದ್ಯಕೀಯ, ಮಾನಸಿಕ ಮತ್ತು ಸಾಮಾಜಿಕ ನೆರವು ಅತ್ಯಗತ್ಯ.

**ವ್ಯಸನ ನಿವಾರಣ ಕೇಂದ್ರ**

ಮಾದಕ ವಸ್ತು ವ್ಯಸನವನ್ನು ಬಿಡಿಸಲು ಚಿಕಿತ್ಸಾ ವಿಧಾನಗಳಿವೆ. ದೇಶದಾದ್ಯಂತ ೨೦೦ಕ್ಕೂ ಹೆಚ್ಚು ವ್ಯಸನ ನಿವಾರಣಾ ಕೇಂದ್ರಗಳಿವೆ. ಇಲ್ಲಿ ವ್ಯಸನಿಯನ್ನು ಸೇರಿಸಿಕೊಂಡು ಆತನ ದೇಹದಲ್ಲಿ ಮದ್ದಿನಿಂದ ಉಂಟಾಗಿರುವ ತೊಂದರೆಗಳನ್ನು ಸರಿಪಡಿಸುತ್ತಾರೆ. ದೇಹದಲ್ಲಿ ಮಲೆತ ಮದ್ದನ್ನು ಹೊರಹಾಕುವ ಚಿಕಿತ್ಸೆ ನೀಡುತ್ತಾರೆ. ಮದ್ದು ನಿಲ್ಲಿಸಿದಾಗ ಉಂಟಾಗುವ ಚಡಪಡಿಕೆಯನ್ನು ಚಿಕಿತ್ಸೆಯಿಂದ ಸರಿಪಡಿಸುತ್ತಾರೆ.

ಮದ್ದು ವ್ಯಸನಕ್ಕೆ ಕಾರಣವಾಗುವ ಸಾಮಾಜಿಕ, ಕೌಟುಂಬಿಕ ಹಾಗೂ ಇತರೆ ಕಾರಣಗಳನ್ನು ಅಧ್ಯಯನ ಮಾಡಿ, ಇದಕ್ಕೆ ಕುಟುಂಬದವರ ಸಮಕ್ಷಮದಲ್ಲಿ ಆಪ್ತ ಸಮಾಲೋಚನೆ ಮಾಡಿ, ಪರಿಹಾರದ ಹಾದಿ ಕಂಡುಕೊಳ್ಳಲು ಮಾರ್ಗದರ್ಶನ ಮಾಡುತ್ತಾರೆ. ಜೊತೆಗೆ ಮಾದಕ ವಸ್ತುವಿಗೆ ಸಂಬಂಧಿಸಿದ ವೈದ್ಯಕೀಯ, ಮಾನಸಿಕ, ಸಾಮಾಜಿಕ ಹಾಗೂ ಕಾನೂನು



ಸಂಬಂಧಿ ವಿಷಯಗಳ ಬಗ್ಗೆ ಮಾಹಿತಿ ನೀಡಲಾಗುತ್ತದೆ.

ವ್ಯಸನ ನಿವಾರಣೆಯಾಗುತ್ತಿದ್ದಂತೆ, ಭಾರೀ ವ್ಯಸನಿಗೆ ಸಮಾಜದಲ್ಲಿ, ಉದ್ಯೋಗದಲ್ಲಿ ಆಸಕ್ತಿ ಮೂಡಿಸುತ್ತಾರೆ. ವ್ಯಕ್ತಿಯ ನೈತಿಕ ಮೌಲ್ಯಗಳನ್ನು ಬಲಪಡಿಸುತ್ತಾರೆ. ಆತ ಮತ್ತೆ ಮದ್ದಿಗೆ ಸೆರೆಯಾಗದಂತೆ ಪ್ರತಿಬಂಧನ ಕ್ರಮಗಳನ್ನು ತಿಳಿಸುತ್ತಾರೆ. ಆತನನ್ನು ಮುಖ್ಯ ವಾಹಿನಿಗೆ ಎಳೆಯಲಾಗುತ್ತದೆ. ಮಾದಕ ವಸ್ತುಗಳ ಸಮಸ್ಯೆಯ ನಿವಾರಣೆಗೆ ಶಕ್ತಿಯುಕ್ತ ಕಾನೂನುಗಳೂ ಇವೆ. ಆದರೆ ಈ ಕಾನೂನುಗಳಿಂದ ಸಮಸ್ಯೆಗಳೆಲ್ಲ ನಿರೀಕ್ಷಿಸಿರುವ ಪ್ರಮಾಣದಲ್ಲಿ ನಿವಾರಣೆಯಾಗುವುದು ಕಷ್ಟಸಾಧ್ಯ.

ಜನತೆಯಲ್ಲಿ ಮದ್ದು ವ್ಯಸನ ಪ್ರತಿಬಂಧನೆ ಬಗ್ಗೆ ಅರಿವು ಮೂಡಿಸುವುದು, ಮದ್ದು ವ್ಯಸನವನ್ನು ನಿವಾರಿಸುವ ದಿಶೆಯಲ್ಲಿ ಪ್ರಭಾವಶಾಲಿ ಅಸ್ತ್ರ. ಈ ಶಿಕ್ಷಣ ಶಾಲಾಮಕ್ಕಳಿಗೆ ಪ್ರಾಥಮಿಕ ಶಾಲೆಯಿಂದಲೇ ಆರಂಭವಾಗಬೇಕು. ತಂದೆ ತಾಯಿ, ಪೋಷಕರು, ಶಿಕ್ಷಕರು ಮಕ್ಕಳಿಗೆ ಮದ್ದಿನ ಚಟ ಬೆಳೆಸಿಕೊಳ್ಳದಂತೆ ಸೂಕ್ತವಾದ ತಿಳಿವಳಿಕೆ ಹಾಗೂ ವಾತಾವರಣಗಳನ್ನು ಮೂಡಿಸುವುದು ಅತ್ಯಗತ್ಯ.

ಮಾದಕ ಮದ್ದು ಬೆಳೆಯುವುದನ್ನು, ಉತ್ಪಾದಿಸುವುದನ್ನು ಮಾರಾಟ ಮಾಡುವುದನ್ನು ನಿಷೇಧಿಸುವತ್ತ ಸರಕಾರ ಗಂಭೀರವಾಗಿ ಚಿಂತಿಸುವುದು ಸೂಕ್ತ. ಮಾದಕ ಮದ್ದುಗಳ ಸಮಸ್ಯೆಯ ನಿವಾರಣೆಯಲ್ಲಿ, ಸ್ವಯಂ ಸೇವಾ ಸಂಸ್ಥೆಗಳ, ಧಾರ್ಮಿಕ ಸಂಸ್ಥೆಗಳ, ಮಾಧ್ಯಮಗಳ ಹಾಗೂ ಸಮಾಜ ಮತ್ತು ಕುಟುಂಬಗಳ ಬದ್ಧತೆ, ಸಮರ್ಪಣೆ, ಶ್ರಮ, ಸಲಹೆ, ಪ್ರೋತ್ಸಾಹ ಅತ್ಯಗತ್ಯ.

**ಡಾ|| ಡಿ. ಕೆ. ಮಹಾಬಲರಾಜು**
ಪ್ರಾಧ್ಯಾಪಕರು, ಜೆ.ಜೆ.ಎಂ. ಮೆಡಿಕಲ್ ಕಾಲೇಜು
'ನಯನ', ನಂ. ೩೬೮೦/೨೨, ಹೌಸಿಂಗ್ ಬೋರ್ಡ್ ಮೆಡಿಕಲ್ ಕಾಲೇಜು
ಬಾಯ್ಸ್ ಹಾಸ್ಟೆಲ್ ರಸ್ತೆ, ಎಂ.ಸಿ.ಸಿ. 'ಬಿ' ಬ್ಲಾಕ್, ದಾವಣಗೆರೆ - ೫೭೭ ೦೦೪



# ಭವದ ಬೆಳಕಿಂಡಿ

ಬಾಗಿಲಿಗೆ ಬಂದ ನಿನ್ನ
ಹೊರಗೆ ನಿಲ್ಲಿಸಿದರೇ... ಕನಕ !
'ಒಳಗೆ ಹೊಕ್ಕ ಮೇಲೆ ಹೊರಗ ಮರೆತವರು'
ಅವರೇನು ಬಲ್ಲರು – ನಿನ್ನ ಒಳ ಹೊರಗ

೧

ಒಳಗಾಗುವುದು, ಒಳಗೊಳ್ಳುವುದು
ಅಂತರಂಗದ ಮಾತು – ಅವಧಾರಣೆ ಮುದ್ರೆ
ಈ ಭೂ ಭದ್ರೆಯ ಗರ್ಭಕ್ಕೆ ಸಲ್ಲುವ
ಎಲ್ಲಾ ಬೀಜ ಟಿಸಿಲೊಡೆದು ಮೂಡಬಹುದೇ
ಮೊಳಕೆ : ಮಣ್ಣ ಪದರಿನ ಹಳಹಳಿಕೆ !

ಬಿತ್ತಿದ ಬೀಜಗಳೆಷ್ಟೋ, ಮೊಳಕೆಯೊಡೆದು
ಸಸಿ ಗಿಡವಾಗಿ ಬೆಳೆದು ಹೆಮ್ಮರ ಹೂ –
ಬಿಟ್ಟು – ಪರಾಗಸ್ಪರ್ಶಕ್ಕೆ ಕಾದಲ್ಲವೇ;
ಕುಡಿಯೊಡೆದು ಕಸುಗಾಯಿ ಹೀಚಾಗಿ, ದೋರಗಾಯಾಗಿ
ನಂತರ ಹಣ್ಣು !

ಹಣ್ಣೆಂದರೆ ಫಲಿತ; ಘಮಲು ಪಕ್ವತೆಯ
ಪುಳಕ, ನಾಳೆಯ ಹೊತ್ತ ಮತ್ತೊಂದು ಮಡಿಲ
ಬೀಜದ ಸುತ್ತ ಹೂರಣ – ಮಾಗಿದ ಫಲ

ಫಲವಂತಿಕೆಯ ಹೊರಗೆ ಬಿಟ್ಟು ಸಿಪ್ಪೆಯ
ಸ್ವೀಕರಿಸಿದವರಿಗೆ ಗೊತ್ತೇ ಕಳಿತ ಫಲ !
ಕಲಿತದ್ದೇನು ಸಹಸ್ರಮಾನದ ಘಳಿಗೆ ಬಟ್ಟಲಲಿ
ಮಿಂದು, ಬೆಳಕ ನೋಡದ ಬಟ್ಟೆಯುಟ್ಟು – ಮರೆತು ಮಡಿ !

೨.

ದಾಸನ ಮನೆಯ ದಾಸಾನುದಾಸ ಎಂದೆ ನೀ
ಕೃಷ್ಣನ ಮನೆಯ ಬಾಗಿಲಿಗೆ ಬಂದು ನಿಂದೇ
ವೈಕುಂಠ ಕಂಡವನಂತೆ — 'ಇಷ್ಟು ದಿನ ಈ
ವೈಕುಂಠ ಎಷ್ಟು ದೂರವೋ ಎನ್ನುತಲಿದ್ದೆ'
ಎಂದರಿವಿನಲಿ ಕೊಂಡಾಡಿದೆ ಕನಕ

ಬಲ್ಲರೇ ಆ ಬಲ್ಲಿದರು, ವೈಕುಂಠ ದ್ವಾರ
ಪಾಲಕರು ಅಗುಳಿಯಿಕ್ಕಿ ಆ ರಂಗ —
ನಾಥನ ಬಂಧಿಸಿದಂತೆ ಭಾವಿಸಿದವರು — ಮೂರು
ಜನ್ಮದಲ್ಲಿ ರಾಕ್ಷಸರಾಗಿ ಹರಿಯಿಂದಲೇ ವಧಿಸಿ –
–ಕೊಂಡಲ್ಲದೇ ಕೈವಲ್ಯವಿಲ್ಲದ — ಆ ಜಯ ವಿಜಯರು !

ಹಿರಣ್ಯ ಗರ್ಭದ ಈ ಗಂಧವತಿ ಪೃಥ್ವಿ ಹೆತ್ತ ಸಾಸಿರ
ಸಾಸಿರ ಸಂತತಿಯಲ್ಲೂ ಕೆಲವು ಜೊಳ್ಳು, ಹಲವು ಹುಳುಕು,
ಕೆಲವು : ಕಣ್ಣಿಲ್ಲದ, ಕನಸಿಲ್ಲದ, ಕಸುವಿಲ್ಲದ – ಕಸವರ !
ಹೊಂಬಣ್ಣವೇ ಹಿರಣ್ಯವೆನ್ನಲಾದೀತೇ ಕನಕ !?

೩.

ಎಂದೂ ಮುಗ್ಗಾಗದ ಮಲಯಜ ಮಮತೆಯ
ರಾಗಿ ಧಾನ್ಯವ ಬಹು ಪ್ರಿಯ ವ್ರೀಹಿಯೊಂದಿಗೆ ತುಲನೆ :
ಮೂಡಿಸಿದ್ದು ನಿಜದ ಧಾರಣೆ, ಭವ ತಾರಿಣಿಯ
ಮೋಹನ ತರಂಗಿಣಿ ನುಡಿಸಿದ್ದು – ಮನುಕುಲದರಿವು.

ತನ್ನೊಳಗೆ ತಾನು ನೀಗದೇ ಹೊಗಲಾಗದು ಸಗ್ಗದ
ಬಾಗಿಲು, ತಿನ್ನಲಾಗದು ಹಣ್ಣ ತಿಳಿಯದೇ ಅವನ ಇರವ
ಸರ್ವ ಅಂತರ್ಯಾಮಿಯ ಆಯಾಮ ಬಲ್ಲವ ಒಳ
ತಿಳಿವಿನ ಪ್ರಭೆಗೆ ಬೆಳಗಿದರೆ – ಕಣ್ಣು ಕೋರೈಸಿತೇ ಕನಕ !?

ಬೆಳಕ ಒಳಗೆ ಸ್ವೀಕರಿಸದ ಅಂತರಂಗದವರ ಕಾವಳ
ಮೆತ್ತಿಕೊಂಡಲ್ಲವೇ ಕೃಷ್ಣನಾಗಿದ್ದು ಗೋಪಾಲ !
ಕೊಳಲೂದಿ, ಕೊರಳೆತ್ತಿ ಹಾಡುವ ದಾಸರ ಕರೆದವ
ಆ ಮುರಳಿಗೂ — ಬೇಕು ಹೊರಗಿನದೆಲ್ಲದರ ಹೊದರು.

೪.

ಹೊರ ಮೈ ಶೃಂಗಾರವೇ ಮಡಿ – ಮುದ್ರೆ ? ಹಣೆ
ನಾಮ ಫಲಕ, ಫಾಲದ ಪಕ್ಕಗಳಲಿ ಟಂಕಸಾಲೆ !
ಅಂತರಂಗದ ದೀಪ್ತಿ ಜ್ವಲಿಸದೇ ಹೊರ ಮೈ ಮೇಲೆ
ಎಳೆ ಇಳಿ ಬಿದ್ದಮಾತ್ರಕ್ಕೆ ಯಜ್ಞೋಪವೀತವೇ – ಪರಮ ಪವಿತ್ರವೇ ?

ಒಳಗೆ ಬರಿದು ಹೊರಗೆ ಹಿರಿದು ನೋಟ
ಪಲ್ಲಟ ಪಟಪಟನೆ ಆಡುವ ಮಂತ್ರದ ಹೂಟ ಬಲ್ಲವ ನೀ
ಎಂದೇ ಒಳ ಹೋಗದೇ ಹೊರ ನಿಂತೆಯಾ ಕನಕ ?
'ಬಾಗಿಲನು ತೆರೆದು ಸೇವೆ ಕೊಡುವ' ಪಾಳಿ – ಹರಿಗೇ ಬಿಟ್ಟು

ನಿನ್ನೊಂದಿಗೇ ಬೆಳಕು ಬರಬಹುದೆಂದು ಭಾವಿಸಿದ್ದ ಆ
ಭಗವಂತ ಭವಿಗಳಬ್ಬರದ ಬೊಬ್ಬಿರಿದ ಮಾತಿಗೆ ಬೆದರಿ
ಬಾಗಿಲ ತೆರೆಯಲಿಲ್ಲ! ಭವಕೆ ಮುಖ ತಿರುಗಿಸಿ, ಮಂತ್ರ
ಯಂತ್ರಗಳಿಗೆ ಬೆನ್ನ ತೋರಿ – ಗೋಡೆಯೊಡೆದು ಕಿಂಡಿ

ಅದು ಭಗವಂತ ನಿನ್ನ ಕಂಡ ಕಿಂಡಿ
ಬೆಳಕ ಆವಾಹಿಸಿಕೊಂಡ ಬೆಳಕಿಂಡಿ
ಕನಕನೇ ಬೆಳಕೆಂದು ಅರಿತ ಕಿಂಡಿ.

ಡಾ|| ಆನಂದ್ ಋಗ್ವೇದಿ
ಜಿಲ್ಲಾ ಮಲೇರಿಯಾ ಅಧಿಕಾರಿಗಳ ಕಛೇರಿ
ಆಯುಷ್ ವಿಭಾಗದ ಕಟ್ಟಡ
ಚಿಗಟೇರಿ ಜಿಲ್ಲಾ ಆಸ್ಪತ್ರೆಯ ಆವರಣ
ದಾವಣಗೆರೆ - ೫೭೭ ೦೦೪

# ಆರ್ಥಿಕತೆಯು ಸರ್ವಸ್ವಕ್ಕೂ ನಿರ್ಧಾರಕವಲ್ಲ:

## ವಿರಾಮಕ್ಕಾಗಿ ದುಡಿಮೆ

ಎಲ್ಲರೂ ಪೂರ್ತಿ ಸಮಾನರಾಗುವ ಸಾಮಾಜಿಕ ವ್ಯವಸ್ಥೆಯನ್ನು ಮಾರ್ಕ್ಸ್ ತನ್ನ ದೃಷ್ಟಿಯಲ್ಲಿರಿಸಿಕೊಂಡಿರಲಿಲ್ಲ. ಸಕಲವೂ ಏಕಪ್ರಕಾರವಾಗಿರಬೇಕೆಂಬುದು ಪ್ರಕೃತಿಯಲ್ಲಂತೂ ಇಲ್ಲ. ಬಂಡವಾಳಶಾಹಿಯಲ್ಲಾದರೆ ''ವಿನಿಮಯ ಮೌಲ್ಯ'' ಎಂದು ಹೇಳಿ ಸರಕುಗಳನ್ನು ತೂಕ ಹಾಕಿ 'ಸಮಾನ' ಎನಿಸಿಬಿಡಬಹುದು. ಆದರೆ ಸಂಸ್ಕೃತಿ ಮತ್ತು ನಾಗರಿಕತೆಯ ಕ್ಷೇತ್ರದಲ್ಲಿ ಅಂತಹ 'ವಿನಿಮಯ ಐಕ್ಯತೆ' ಇಲ್ಲ. ನಾವಿರುವುದು ಮೂರ್ತ ಪ್ರಪಂಚದಲ್ಲಿ ಮತ್ತು ಸಾಮಾಜಿಕ ಸಮತಟ್ಟು ಕೇವಲ ಅಮೂರ್ತ ಪ್ರಪಂಚದಲ್ಲಿ ಸಾಧ್ಯವೆಂದು ಮಾರ್ಕ್ಸ್ ಹೇಳುತ್ತಾನೆ. ಬಂಡವಾಳಶಾಹಿಯಲ್ಲಿ ಇನ್ನೊಂದು ಸಮಾನತೆ ಇದೆ: ಪ್ರಜಾಪ್ರಭುತ್ವ ವೆನ್ನಲಾದ ವಿಧಾನದಲ್ಲಿ ಚುನಾವಣೆಯಲ್ಲಿ ಮತದಾನ ಮಾಡುವಾಗ ಎಲ್ಲರೂ ಸಮಾನರು, ಚುನಾವಣೆಯ ಅಭ್ಯರ್ಥಿಗಳು ಸಹ ತೋರಿಕೆಗೆ ಸಮಾನರು. ನಿಜಕ್ಕೂ ಅವರೆಷ್ಟು ಸಮಾನ ರೆಂಬುದು ಎಲ್ಲರಿಗೂ ತಿಳಿದ ವಿಷಯ. ಸಮಾಜವಾದಿ ವ್ಯವಸ್ಥೆಯಲ್ಲಿ ಎಲ್ಲರಿಗೂ ಸಮಾನ ವೇತನವಿರುತ್ತದೆಯೆ? ಇಲ್ಲವೆನ್ನುತ್ತಾನೆ ಮಾರ್ಕ್ಸ್ ತನ್ನ ''ಗೋಥಾ ಕಾರ್ಯಕ್ರಮದ ವಿಮರ್ಶೆ'' ಎಂಬ ಗ್ರಂಥದಲ್ಲಿ, ಹಾಗೇಕೆಂದರೆ ಅವಶ್ಯಕತೆಗಳು ಸಮಾನವಲ್ಲವಾದ್ದರಿಂದ. ಒಂದು ಮಗುವಿರುವ ತಂದೆ-ತಾಯಿಯರ ಆದಾಯದಷ್ಟೇ ಮೂರು ಮಕ್ಕಳಿರುವ ಮನೆಯ ಆದಾಯವೂ ಆದರೆ ಹೇಗೆ! ಒಬ್ಬ ವೈದ್ಯನ ಉಪಕರಣಗಳು ಸರ್ಕಾರಿ ಗುಮಾಸ್ತನ ಉಪಕರಣಗಳಿಗೆ ಸಮವಲ್ಲ. ಹಾಗಿದ್ದರೆ 'ಸಮಾನತೆ'ಯೆಂಬುದು ಮಹತ್ವದ ಮೌಲ್ಯ ಎನ್ನುವ ಮಾರ್ಕ್ಸ್ ಸ್ವಾತಂತ್ರ್ಯ, ಸ್ವಯಂನಿರ್ಧಾರ ಮತ್ತು ಸ್ವಯಂ ಅಭಿವೃದ್ಧಿಗಳನ್ನೆಂದೂ ಹೀಗಳೆದವನಲ್ಲ. ಊಳಿಗಮಾನ್ಯ ವ್ಯವಸ್ಥೆಯ ಪಿಡುಗುಗಳ ಹಿನ್ನೆಲೆಯಲ್ಲಿ ಅಮೂರ್ತ ಸಮಾನತೆ ಖಂಡಿತವಾಗಿಯೂ ಶೋಭಾಯಮಾನವಾದುದು. ಹಾಗೆ ನೋಡಿದರೆ ಮಧ್ಯಮ ವರ್ಗದ ಮೌಲ್ಯಗಳನ್ನು ಸಹ ಮಾರ್ಕ್ಸ್ ತೆಗಳಲಿಲ್ಲ, ಬದಲಾಗಿ ಅದರ ಕ್ರಾಂತಿಕಾರಿ ಕೊಡುಗೆ ಯನ್ನು ಶ್ಲಾಘಿಸಿದ. ಮಾರ್ಕ್ಸನ ಶ್ಲಾಘನೆಗೆ ಗುರಿಯಾಗುವುದು ಅಪಾಯವೆಂದೋ ಏನೋ, ಮಧ್ಯಮ ವರ್ಗವು ಅದನ್ನು ನೆನಪಿಸಿಕೊಳ್ಳುವುದಿಲ್ಲ! ಮಾರ್ಕ್ಸ್ ಜನರ ಹಕ್ಕುಗಳ ಬಗ್ಗೆ ಕಾಳಜಿ ತೋರಲಿಲ್ಲವೆಂಬ ಆಕ್ಷೇಪವೊಂದಿದೆ. ಅಸಮಾನ ಮಾನದಂಡಗಳ ಸನ್ನಿಧಿಯಲ್ಲಿ ಸಮಾನ ಹಕ್ಕುಗಳು ಆಶಯವಾಗಿ ಮಾತ್ರ ಉಳಿಯುತ್ತವೆ. ''ದುಡಿಯುವ ಜನ'' ಎಂಬ ಒಂದು ನಿರ್ದಿಷ್ಟ ಬಣದಲ್ಲಿ ದುಡಿಮೆಯ ದೃಷ್ಟಿಯಿಂದ ಸಮಾನತೆ ಉಂಟು, ಆದರೆ ಎಲ್ಲ ದುಡಿಯುವ ಜನರಿಗೂ ಬಂಡವಾಳಶಾಹಿಯಡಿಯಲ್ಲಿ ಸಮಾನ ಹಕ್ಕುಗಳುಂಟೆ? ಮಾರ್ಕ್ಸ್‌ವಾದವನ್ನು ಮೂದಲಿಸಲು ಸಮಾನತೆಯೆಂಬ ಮರೀಚಿಕೆಯನ್ನು ಕಲ್ಪಿಸುವ ವಿಮರ್ಶಕರು ಸ್ವತಃ ಸಮಾನತೆಗೆ ಕಟ್ಟುಬಿದ್ದವರಲ್ಲ. ಏನೇ ಇರಲಿ, ಮಾರ್ಕ್ಸ್ ತನ್ನ ಕಾಲದ ವೆಲಿಂಗ್‌ಟನ್ ಡ್ಯೂಕನಿಗಿಂತ ಹೆಚ್ಚು ಬುದ್ಧಿವಂತನಾಗಿದ್ದನಲ್ಲವೆ? ಸಮಾನತೆಯ ಹೆಸರಿನಲ್ಲಿ ಅವನು ಡ್ಯೂಕನಷ್ಟೇ ದಡ್ಡತನ ಮೆರೆಯಬೇಕಿತ್ತೆ!

ನಿಜವಾದ ಸಮಾನತೆಯು ಬೇರೆ ತೆರನಾದ್ದು. ಎಲ್ಲರ ಅವಶ್ಯಕತೆಗಳಿಗೂ ಸಮನಾಗಿ ಗಮನ ನೀಡುವುದು ಸಮಾನತೆ. ಪ್ರತಿಯೊಬ್ಬರೂ ತಮ್ಮ ಸಾಮರ್ಥ್ಯವನ್ನು ಪೂರ್ಣವಾಗಿ ವಿಕಾಸಗೊಳಿಸಿಕೊಳ್ಳುವುದು ಮತ್ತು ಸಾಮಾಜಿಕ ಜೀವನವನ್ನು ರೂಪುಗೊಳಿಸಲು ಪೂರ್ಣ ಪ್ರಮಾಣದಲ್ಲಿ ಭಾಗವಹಿಸುವುದು ಅಂತಹ ಹಿನ್ನೆಲೆಯಲ್ಲಿ ಮಾತ್ರ ಸಾಧ್ಯ. ಪ್ರತಿಯೊಬ್ಬರ ಅನನ್ಯ ವ್ಯಕ್ತಿತ್ವವೂ ಅಭಿವ್ಯಕ್ತವಾಗುವುದು ಆಗಲೇ. ಇದು ಭಿನ್ನತೆಯ ಹರಹಿನಲ್ಲೇ ಇರುವ ಸಮಾನತೆ. ಎಲ್ಲರೂ ಒಂದೇ ಬಣ್ಣದ ಬಟ್ಟೆ ತೊಡುವುದರಿಂದ ಸಮಾನತೆ ಬಂದುಬಿಡುವುದಿಲ್ಲ. ಸಮಾಜವಾದವು ಬಹುಮುಖೀ ವ್ಯವಸ್ಥೆ. ಬಂಡವಾಳಶಾಹಿಯಲ್ಲಿ ಅನೇಕರಿಗೆ ಬೇಡಿ ತೊಡಿಸಿ ಕೆಲವರ ಅಭಿವೃದ್ಧಿಗೆ ಆಸ್ಪದವಿದೆ. ಬೇಡಿ ತೊಟ್ಟಿರುವುದೇ ಕೆಲವರಿಗೆ ಸಮಾನತೆಯ ಕುರುಹು. ಜಾರ್ಜ್ ಆರ್‌ವೆಲ್‌ನಂತಹ ಕಾದಂಬರಿಕಾರರು ಸಾಮ್ಯವಾದದಡಿ ಇರುತ್ತದೆಂದು ಪ್ರಚುರಪಡಿಸುವ ''ಸಮಾನತೆ'' ನಿಜಕ್ಕೂ ಇರಬಹುದಾದ್ದು ಬಂಡವಾಳಶಾಹಿಯಲ್ಲಿಯೇ. ಆಧುನಿಕ ಕಾಲದಲ್ಲಿ ಕಲ್ಪನಾ ಸಾಮ್ರಾಜ್ಯಗಳಿಗೇನೂ ಕೊರತೆ ಇಲ್ಲ, ಆದರೆ ಅವು ಮಾರ್ಕ್ಸ್



೧೯೪೩ರಲ್ಲಿ ಜನಿಸಿದ ಟೆರಿ ಈಗಲ್‌ಟನ್ ಮೂಲತಃ ಐರ್ಲೆಂಡಿನ ಒಂದು ಕುಟುಂಬದವನು. ಆದರೆ ಹುಟ್ಟಿದ್ದು, ವಿದ್ಯಾಭ್ಯಾಸ ಪಡೆದಿದ್ದು ಮತ್ತು ಕೆಲಸ ಮಾಡಿದ್ದು ಇಂಗ್ಲೆಂಡಿನಲ್ಲಿ. ಕೇಂಬ್ರಿಜ್, ಆಕ್ಸ್‌ಫರ್ಡ್, ಮ್ಯಾಂಚೆಸ್ಟರ್ ಮತ್ತು ಲೆಸ್ಟರ್ ವಿಶ್ವವಿದ್ಯಾನಿಲಯಗಳೊಡನೆ ಅವನದು ಐವತ್ತಕ್ಕೂ ಹೆಚ್ಚು ವರ್ಷಗಳ ಸಂಬಂಧ. ವ್ಯಾಸಂಗ ಕೇಂಬ್ರಿಜ್‌ನಲ್ಲಿ, ಆದರೆ ಪ್ರಾಧ್ಯಾಪಕ ನಾಗಿದ್ದುದು ಲೆಸ್ಟರ್‌ನಲ್ಲೇ ಹೆಚ್ಚು. ಬೇರೆ ಎರಡು ವಿಶ್ವವಿದ್ಯಾನಿಲಯಗಳಲ್ಲೂ ಬೋಧನೆ ಮತ್ತು ಸಂಶೋಧನೆ ನಡೆಸಿದ್ದಾನೆ. ಸಾಹಿತ್ಯ, ಇತಿಹಾಸ ಮತ್ತು ತತ್ತ್ವಶಾಸ್ತ್ರ ಅವನ ಆಸಕ್ತಿಯ ಕ್ಷೇತ್ರಗಳು. ಸಾಹಿತ್ಯ ಮೀಮಾಂಸೆ ಮತ್ತು ವಿಮರ್ಶೆಯಲ್ಲಿ ಆತನ ಕೃಷಿ ಅತ್ಯಂತ ಮೌಲಿಕವಾದ್ದು. ಅದಕ್ಕೆ ವಿಶೇಷ ಮಾನ್ಯತೆ ಲಭ್ಯವಾಗಿದೆ. ಮಾರ್ಕ್ಸ್‌ವಾದಿ ಸಿದ್ಧಾಂತದ ಬಗೆಗಿನ ಅವನ ತಿಳಿವು ಕೇವಲ ಅಧ್ಯಯನದಿಂದ ಬಂದಿದ್ದಲ್ಲ, ಅವನೊಬ್ಬ ಖ್ಯಾತ ಸಂಘಟಕ ಮತ್ತು ಹೋರಾಟಗಾರ ಕೂಡ. ಅಮೇರಿಕಾದಲ್ಲಿ ಇರುವ ಯೇಲ್ ವಿಶ್ವವಿದ್ಯಾ ನಿಲಯ ೨೦೧೧ರಲ್ಲಿ ''ಮಾರ್ಕ್ಸ್ ಹೇಳಿದ್ದು ಏಕೆ ಸರಿ?'' ಎಂಬ ಅವನ ೨೪೦ ಪುಟಗಳ ಪುಸ್ತಕವನ್ನು ಪ್ರಕಟಿಸಿತು. ಮಾರ್ಕ್ಸ್‌ವಾದವನ್ನು ಖಂಡಿಸು ವವರು ಸಾಮಾನ್ಯವಾಗಿ ಎತ್ತುತ್ತಲೇ ಬಂದಿರುವ ಆಕ್ಷೇಪಗಳನ್ನು ಪರೀಕ್ಷಿಸಿ ಸತ್ವಯುತವಾದ ವಿಮರ್ಶೆ ಮಾಡುವುದು ಅವನ ಉದ್ದೇಶ. ಈ ಪುಸ್ತಕವನ್ನು ಅನುಸರಿಸಿ ಡಾ॥ ಜಿ. ರಾಮಕೃಷ್ಣ ಅವರು ಸಂಗ್ರಹ ರೂಪದಲ್ಲಿ ಮಾರ್ಕ್ಸ್‌ವಾದದ ಬಗೆಗಿನ ಪ್ರತಿಪಾದನೆಯನ್ನು ಪರಿಚಯಿಸಿದ್ದಾರೆ. ಇದು ಆರನೆಯ ಕಂತು.

ವಾದದ ಮೂಸೆಯಿಂದ ಬಂದುವಲ್ಲ. ಥಿಯೋಡರ್ ಅಡೋರ್ನೊ ಒಮ್ಮೆ ಹೇಳಿದ್ದ: ಮಾರ್ಕ್ಸ್ ಒಬ್ಬ ಕನಸುಗಾರ, ಆದರೆ ಕನಸುಗಾರನಲ್ಲ, ಎಂದು. ಹಾಗೆಂದರೇನು? ಅಡೋರ್ನೊ ಹೇಳಿದ: ''ಮಾರ್ಕ್ಸ್ ಕಾಲ್ಪನಿಕ ಸಾಮ್ರಾಜ್ಯದ ಶತ್ರು, ಏಕೆಂದರೆ ಅದನ್ನು ಅಸ್ತಿತ್ವಕ್ಕೆ ತರಬೇಕೆಂಬುದು ಅವನ ಮಹದಿಚ್ಛೆ.''

ಮಾರ್ಕ್ಸ್ ಮೇಲಿನ ಮುಂದಿನ ಆರೋಪ ಅವನು ಸರ್ವಸ್ವಕ್ಕೂ ಆರ್ಥಿಕತೆಯೇ ನಿರ್ಧಾರಕ ಅಂಶವೆನ್ನುತ್ತಾನೆ, ಎಂಬುದು. ಆರ್ಥಿಕತೆಯೇ ಸರ್ವಸ್ವವೆಂಬುದು ಅನುಭವದ ಮಾತು. ಊಟ, ಬಟ್ಟೆ, ಮನೆ, ಬಸ್ಸು, ಎಲ್ಲದಕ್ಕೂ ಆರ್ಥಿಕತೆಯ ಬುನಾದಿ ಬೇಕಲ್ಲ! ಮಾರ್ಕ್ಸ್ ತನ್ನ ''ದ ಜರ್ಮನ್ ಐಡಿಯಾಲಜಿ''ಯಲ್ಲಿ ಬರೆದಿದ್ದಿದು: ''ಮೊದಲ ಚಾರಿತ್ರಿಕ ಕ್ರಿಯೆ ನಮ್ಮ ಭೌತಿಕ ಅಗತ್ಯಗಳ ಪೂರೈಕೆಗೆ ಸಾಧನಗಳನ್ನು ಉತ್ಪಾದಿಸಿಕೊಳ್ಳುವುದು.'' ಆಮೇಲೆ ಪಗಡೆಯಾಟ, ವೀಣೆ, ಕವನ, ಎಲ್ಲಾ. ಸಂಸ್ಕೃತಿಗೆ ದುಡಿಮೆಯು ಆಧಾರ. ಭೌತಿಕ ಉತ್ಪಾದನೆ ಇಲ್ಲದೆ ನಾಗರಿಕತೆ ಇಲ್ಲ – ಆದರೆ ಮಾರ್ಕ್ಸ್‌ವಾದವೆಂದರೆ ಅಷ್ಟೇ ಅಲ್ಲ. ಅದರ ಇಂಗಿತಕ್ಕೆ ಇನ್ನೂ ಹೆಚ್ಚಿನ ವ್ಯಾಪ್ತಿಯುಂಟು. ಭೌತಿಕ ಉತ್ಪಾದನೆಯು ಮೂಲಭೂತವಾದ್ದು, ಅದಿಲ್ಲದೆ ನಾಗರಿಕತೆ ಇಲ್ಲ. ಜೊತೆಗೆ, ಆ ನಾಗರಿಕತೆಯ ಸ್ವರೂಪವನ್ನು ನಿರ್ಧರಿಸುವುದು ಸಹ ಅದೇ ಭೌತಿಕ ಉತ್ಪಾದನೆ. ಒಂದು ವ್ಯತ್ಯಾಸ ಗುರುತಿಸಬೇಕು: ಒಂದು ಲೇಖನಿಯಿಂದ ಕವನ ಬರೆಯಬಹುದು, ಗಣಕ ಯಂತ್ರದಿಂದಲೂ ಬರೆಯಬಹುದು. ಅವು ಬರಹಕ್ಕೆ ಅಗತ್ಯ ಸಾಮಗ್ರಿ. ಯಾವ ಸಾಮಗ್ರಿ ಬಳಸುತ್ತೀರೋ ಅದು ಕವನದ ವಸ್ತುವನ್ನು ನಿರ್ಧರಿಸುತ್ತದೆಂದು ಹೇಳಿದರೆ ಅದು ಶುದ್ಧ ಬೂಸಿ. ಜಾನ್ ಗ್ರೇ ಎಂಬ ತತ್ತ್ವಶಾಸ್ತ್ರಜ್ಞನಿದ್ದ, ಅವನು ಮಾರ್ಕ್ಸ್ ವಿರೋಧಿ. ಅವನು ಹೇಳಿದ್ದ, ''ಮಾರುಕಟ್ಟೆಯ ಸಮಾಜಗಳಲ್ಲಿ ಆರ್ಥಿಕ ಚಟುವಟಿಕೆಯು ಬೇರೆಲ್ಲ ಸಾಮಾಜಿಕ ಜೀವನದಿಂದ ಭಿನ್ನವಷ್ಟೇ ಅಲ್ಲ, ಕೆಲವೇಳೆ ಅದೇ ಸಮಾಜದ ಮೇಲೆ ಮೇಲುಗೈ ಸಾಧಿಸುತ್ತದೆ,'' ಎಂದು. ಗ್ರೇ ಮಾರುಕಟ್ಟೆ ಸಮಾಜಗಳನ್ನು ಕುರಿತು ಹೇಳುವುದನ್ನು ಮಾರ್ಕ್ಸ್ ಮಾನವ ಚರಿತ್ರೆ ಬಗ್ಗೆ ಹೇಳುತ್ತಾನೆ, ಅಷ್ಟೆ.

ವಿಮರ್ಶಕರು ಗ್ರೇ ಮಾತಿಗೆ ಹೂಗುಟ್ಟುತ್ತಾರೆ, ಆದರೆ ಮಾರ್ಕ್ಸ್ ಮಾತನ್ನು ಅತಿವ್ಯಾಪ್ತಿಯ ವಾದ ಎಂದುಬಿಡುತ್ತಾರೆ. ಅಂದರೆ ಅಶುದ್ಧ ತರ್ಕ, ಎಂದು. ಇಡೀ ಮಾನವ ಇತಿಹಾಸವನ್ನು ಹೀಗೆ ಕಿರಿದು ಮಾಡುವುದೇ, ಎಂಬುದು ಅವರ ಆಕ್ಷೇಪ. ಚರಿತ್ರೆಯಲ್ಲಿ ಎಷ್ಟೊಂದು ಅನೇಕತೆಗಳಿವೆ, ಸೆಳೆತಗಳಿವೆ, ಶಕ್ತಿಕೇಂದ್ರಗಳಿವೆ, ಅವನ್ನೆಲ್ಲಾ ಸುಮ್ಮನೆ ಒಂದು ಬದಲಾಗದ ನಿಯಮದಂತೆ ಪ್ರತಿಪಾದಿಸಲಾದೀತೆ? ಪ್ರಶ್ನೆ ಅಸಮಂಜಸವಲ್ಲ, ಆದರೆ ಮರುಪ್ರಶ್ನೆ ಒಂದಿದೆ: ಅನೇಕತೆಯೆಂಬುದು ನಿಜಕ್ಕೂ ಎಷ್ಟು ಅನೇಕ? ಅವುಗಳಲ್ಲಿ ಯಾವುದಾದರೊಂದು ಬೇರೆಲ್ಲವುಗಳಿಗಿಂತಲೂ ಎಂದೂ ಪ್ರಧಾನವಾಗದೆ? ಫ್ರಾನ್ಸಿನ ಕ್ರಾಂತಿ, ಭಾರತದ ೧೮೫೭ರ ಹೋರಾಟ, ಇತ್ಯಾದಿಗಳ ಕಾರಣಗಳನ್ನು ನಾವು ಪ್ರಳಯ ಕಾಲದ ತನಕ ಚರ್ಚಿಸುತ್ತಲೇ ಹೋಗಬಹುದು. ಭಾರತದ ಸೈನಿಕರ ತಲೆಯಲ್ಲಿ ಹುಳು ಹೊಕ್ಕಿದ್ದರಿಂದ ಅಥವಾ ವಿಪರೀತ ಮಾವಿನ ಹಣ್ಣು ತಿಂದಿದ್ದರಿಂದ ೧೮೫೭ರ ವಿಪ್ಲವ ಸಂಭವಿಸಿತೆ? ಅಥವಾ ಅದು ಕನ್ಯಾ ರಾಶಿಯ ಫಲವೊ? ಎಲ್ಲರೂ ಅಂಗೀಕರಿಸುವ ಒಂದು ಸತ್ಯವೆಂದರೆ ಚಾರಿತ್ರಿಕ ಅಂಶಗಳ ಪೈಕಿ ಕೆಲವು ಬಹಳ ತೂಕದ ಕಾರಣಗಳು, ಎಂದು. ಹಾಗೆಂದರೆ ಅವರು ಬಹುಮುಖೀ ಕಾರಣಗಳನ್ನು ತಿರಸ್ಕರಿಸಿದ್ದಾರೆಂದಲ್ಲ. ಅದನ್ನು ಹೀಗೆ ಹೇಳೋಣ: ಅನೇಕಾನೇಕ ಶಕ್ತಿಗಳು ಪ್ರಮುಖ ಚಾರಿತ್ರಿಕ ಘಟನೆಗಳಿಗೆ ಕಾರಣ, ಆದರೆ ಅವೆಲ್ಲವೂ ಸಮಾನವಾದ ಕಾರಣಗಳಲ್ಲ.

ಫ್ರೆಡರಿಕ್ ಏಂಗೆಲ್ಸ್ ಇಂತಹ ಅನೇಕವಾದಿ. ಅವನು ಮತ್ತು ಮಾರ್ಕ್ಸ್ ಇತಿಹಾಸದ ಏಕೈಕ ನಿರ್ಧಾರಕ ಅಂಶವೆಂದರೆ ಆರ್ಥಿಕ ಶಕ್ತಿಗಳು ಮಾತ್ರವೆಂದು ಯಾವಾಗಲೂ ಹೇಳಲೇ ಇಲ್ಲವೆಂದು ಅವನ ವಾದ. ಅದೊಂದು ''ಅರ್ಥರಹಿತ, ಅಮೂರ್ತ, ಬುದ್ಧಿಯಿಲ್ಲದ ಮಾತಾಗಿಬಿಡುತ್ತದೆ'' ಎನ್ನುತ್ತಾನವನು. ಯಾವ ಅನೇಕವಾದಿಯೂ ಎಲ್ಲ ಕಾರಣಗಳೂ ಏಕಪ್ರಕಾರವಾಗಿ ಸಮಾನವಾದ ಕಾರಣಗಳೆಂದು ರಚ್ಚೆ ಹಿಡಿಯುವುದಿಲ್ಲ. ಕಾರಣಗಳ ಶ್ರೇಣೀಕರಣವನ್ನು ಸಮಾನತೆಯ ಕಟ್ಟಾ ಸಮರ್ಥಕರೂ ಒಪ್ಪಬೇಕು. ಹಾಗೆ ನೋಡಿದರೆ, ಈ ವಿಚಾರದಲ್ಲಿ ಶ್ರೇಣೀಕರಣವು ಶಾಶ್ವತ ಎಂದೇ ಹೇಳಬೇಕು. ಯಾರೋ ಹಸಿದವರಿದ್ದಾರೆ: ಅವರಿಗೆ ಚಕ್ಕಲಗುಳಿ ಕೊಡುತ್ತೀರೋ, ಹಿಟ್ಟು ಕೊಡುತ್ತೀರೋ? ಅದರಲ್ಲಿ ಎರಡು ಅಭಿಪ್ರಾಯಗಳು ಬರಲಾರವು. ಅಯೋಧ್ಯೆಯಲ್ಲಿ ಮಸೀದಿ ಉರುಳಿಸಿದ್ದು ಅದ್ವಾನಿಯವರಿಗೆ ಉದ್ದದ ಬೆರಳುಗಳಿರುವುದರಿಂದಲ್ಲ, ಅವರ ಧಾರ್ಮಿಕ ಜಡ್ಡುತನದಿಂದ, ಎಂಬುದರ ಬಗ್ಗೆ ಭಿನ್ನಾಭಿಪ್ರಾಯವುಂಟೆ? ರೂಪ ಕನ್ವರಳನ್ನು ಜೀವಂತವಾಗಿ ಚಿತೆಗೇರಿಸಿ ಸುಟ್ಟದ್ದು ಅವಳನ್ನು ಸ್ವರ್ಗಕ್ಕೆ ತುರ್ತಾಗಿ ರವಾನಿಸುವ ಸಲುವಾಗಿ ಎಂದು ಹೇಳಿಕೊಂಡರೂ ಯಾವ ನೆಂಟರಿಷ್ಟರು ಅವಳ ಆಸ್ತಿ ಲಪಟಾಯಿಸುವ ಹುನ್ನಾರ ಹೊಂದಿದ್ದರು, ಯಾವ ಆಪ್ತರು ಕಟುಕರಾಗಿದ್ದರು, ಯಾರಿಗೆ ರಾಜಕೀಯ ಬಲದ ಬೆಂಬಲವಿತ್ತು, ಎಂಬ ಪ್ರಶ್ನೆಗಳು ಬರುತ್ತವಲ್ಲವೆ? ಹೆಂಡತಿಯನ್ನು ಮನೆಯ ನೀರು ಶೇಖರಣೆಯ ಕೊಳದಲ್ಲಿ ಮುಳುಗಿಸಿ, ಅವಳು ಮೇಲೇಳದಂತೆ ಒತ್ತಿಹಿಡಿಯುವವನು ವೈಜ್ಞಾನಿಕ ಪ್ರಯೋಗ ಮಾಡಿ ಆಧುನಿಕ ಆರ್ಕಿಮೀಡಿಸ್ ಆಗಹೊರಟಿದ್ದಾನೋ ಅಥವಾ ಬೇರಿನ್ನೇನೋ ಕಾರಣಕ್ಕೆ ಅವಳನ್ನು ಕೊಲ್ಲುತ್ತಾನೋ? ಜೀವನ ಬಹಳ 'ಬೋರ್' ಆಗಿದೆಯೆಂದು ಶಾಲೆಗೆ ನುಗ್ಗಿ ಮಕ್ಕಳನ್ನು ಶೂಟ್ ಮಾಡುವವರು ಅಮೆರಿಕಾದ ''ಮುಕ್ತ ಸಮಾಜ''ದಲ್ಲಿದ್ದಾರೆ, ಅವರ ಕತೆಯೇ ಬೇರೆ. ಅಂದರೆ, ಅನೇಕ ಕಾರಣಗಳನ್ನು ಗುರುತಿಸುವವರು ಕೆಲವೊಮ್ಮೆ ಘಟನೆಗಳು ಯಾವುದೋ ಪ್ರಧಾನ ಕಾರಣದಿಂದ ಜರುಗುತ್ತದೆಂಬುದನ್ನು ಒಪ್ಪುತ್ತಾರೆ. ಅವರ ಆಕ್ಷೇಪವೇನೆಂದರೆ ಎಲ್ಲ ಘಟನೆಗಳಿಗೂ ಒಂದೇ ಪ್ರಧಾನ ಕಾರಣವನ್ನು ಗುರುತಿಸುವುದು ಸರಿಯೇ ಎಂಬುದು. ಇತಿಹಾಸದ ನಡಿಗೆಯನ್ನು ಆರ್ಥಿಕ ಸಿದ್ಧಾಂತವು ನಿರ್ಧರಿಸುತ್ತದೆನ್ನುವ ಧೋರಣೆಗೆ ಇದು ಪ್ರತಿರೋಧ ಒಡ್ಡುತ್ತದೆ. ಇತಿಹಾಸವು ಏಕಪ್ರಕಾರವಾಗಿ ಉದ್ದಕ್ಕೂ ನಡೆದುಬಂದಿಲ್ಲ, ಆದರೆ ಆರ್ಥಿಕತೆಯ ಪ್ರಭಾವವನ್ನು ನಿರ್ಧಾರಕವೆಂದು ಬಗೆದರೆ ಇತಿಹಾಸವು ಹಾಗೆ ನಡೆದು ಬರಬೇಕಿತ್ತೆಂದು ಹೇಳಬೇಕಾಗುತ್ತದೆ. ಇತಿಹಾಸವು ಒಂದು ಮೋಹಕ ಕತೆಯಲ್ಲ, ಅದರ ರಚನೆ ಕರಾರುವಾಕ್ಕಾಗಿಲ್ಲ, ಉದ್ದಕ್ಕೂ ಅದನ್ನು ಒಂದು ಎಳೆಯಲ್ಲಿ ಪೋಣಿಸಲಾಗಿಲ್ಲ.




ಈ ವಿಮರ್ಶೆಯನ್ನು ಒಪ್ಪಬೇಕಾದ್ದೆ. ಆದರೆ ಇತಿಹಾಸದಲ್ಲಿ ಮಾದರಿಗಳನ್ನು ಗುರುತಿಸಲಾಗದಷ್ಟು ಗೋಜಲುಗಳಿರುವುದಿಲ್ಲ. ಯಾರಾದರೂ ಇತಿಹಾಸಕಾರರು ಇತಿಹಾಸವನ್ನು ಒಂದು ಅಸಂಬಂಧಿತ ಘಟನೆಗಳ ಮುದ್ದೆ, ಎಲ್ಲವೂ ಆಕಸ್ಮಿಕ, ಎಂದು ಹೇಳಿರುವುದುಂಟೆ? ಫ್ರೀಡ್ರಿಶ್ ನೀಶೆ ಮತ್ತು ಅವನ ಶಿಷ್ಯ ಮಿಶೆಲ್ ಫೂಕೋ ಸ್ವಲ್ಪಮಟ್ಟಿಗೆ ಆ ದಿಕ್ಕಿನಲ್ಲಿ ಚಿಂತಿಸಿರುವುದುಂಟು, ಆದರೆ ಸಾಮಾನ್ಯವಾಗಿ ಇತಿಹಾಸದಲ್ಲಿ ಕಾರಣ ಮತ್ತು ಕಾರ್ಯಗಳ ಸರಪಳಿ ಇರುವುದನ್ನು ಎಲ್ಲ ಇತಿಹಾಸಕಾರರೂ ಗುರುತಿಸಿದ್ದಾರೆ. ಅವನ್ನು ಬಿಡಿಸುವುದು ಸುಲಭವಲ್ಲ, ಅದಕ್ಕೆ ಅವುಗಳ ಸಂಕೀರ್ಣತೆಯು ಕಾರಣ; ಆದರೆ ಮಾದರಿಗಳನ್ನಂತೂ ನಿರಾಕರಿಸುವಂತಿಲ್ಲ. ಒಂದು ಉದಾಹರಣೆಯನ್ನು ನೋಡೋಣ: ಚರಿತ್ರೆಯ ಒಂದು ಘಟ್ಟದಲ್ಲಿ ಅನೇಕ ದೇಶಗಳು ಏಕಕಾಲದಲ್ಲಿ ವಸಾಹತುಗಳನ್ನು ಸ್ವಾಧೀನಪಡಿಸಿಕೊಂಡವು. ಇದಕ್ಕೇನೋ ಸುಸಂಬದ್ಧವಾದ ಕಾರಣವಿರಬೇಕಲ್ಲ, ಮತ್ತು ಆ ಕಾರಣ ಎಲ್ಲ ವಸಾಹತುಶಾಹಿ ದೇಶಗಳಿಗೂ ಅನ್ವಯವಾಗುವಂತಿರಬೇಕಲ್ಲ. ಅಥವಾ, ಇಪ್ಪತ್ತನೆಯ ಶತಮಾನದಲ್ಲಿ ಫ್ಯಾಸಿಸಂ ಏಕಕಾಲಕ್ಕೆ ಹಲವು ದೇಶಗಳಲ್ಲಿ ತೋರಿಬರುವುದಕ್ಕೆ ಏನೋ ಸಮಾನ ಕಾರಣವಿರಬೇಕಲ್ಲ. ಇದ್ದಕ್ಕಿದ್ದಂತೆ ಕೆಲವು ದೇಶಗಳ ಜನ ಬೆಂಕಿಗೆ ಜಿಗಿಯಲು ಉಪಕ್ರಮಿಸುವುದಿಲ್ಲ. ಹಾಗೆ ಮಾಡದಿರುವುದು ಸಹ ಪ್ರಪಂಚದ ಇತಿಹಾಸದಲ್ಲಿ ಒಂದು ಮಾದರಿಯೇ ಆಗಿದೆ.

ಮಾದರಿ ಇದೆಯೇ, ಇಲ್ಲವೇ, ಎಂಬುದು ಪ್ರಶ್ನೆಯಲ್ಲ; ಯಾವುದೋ ಒಂದು ಪ್ರಮುಖ ಮಾದರಿ ಇದೆಯೇ ಎಂಬುದು ಪ್ರಶ್ನೆ. ಪ್ರಮುಖವಾದ ಒಂದು ಮಾದರಿಯನ್ನು ನಿರಾಕರಿಸಲು ಸಾಧ್ಯ, ಆದರೆ ಮಾದರಿಯೇ ಇಲ್ಲವೆನ್ನಲಾಗುವುದಿಲ್ಲ. ಮಾನವ ಚರಿತ್ರೆಯಲ್ಲಿ ವೈವಿಧ್ಯವಿರುವುದರಿಂದ ಒಂದು ಮಾದರಿಯು ಪ್ರಮುಖವೆಂದು ಒಪ್ಪಲಾಗದೆಂದೇ ಇಟ್ಟುಕೊಳ್ಳೋಣ. ಆದರೆ ಇನ್ನೊಂದು ಪ್ರಶ್ನೆಗೆ ಅಂತಹ ವಿನಾಯಿತಿ ದೊರೆಯುವುದಿಲ್ಲ. ಮಾನವನು ಗವಿಗಳಲ್ಲಿ ಜೀವಿಸುತ್ತಿದ್ದ ಕಾಲದಿಂದ ಹಿಡಿದು ಇಂದಿನ ಬಂಡವಾಳಶಾಹಿಯವರೆಗೆ ಇತಿಹಾಸದ ಚಲನೆಯಲ್ಲಿ ಭೌತಿಕ ಆಸಕ್ತಿಗಳು ಪ್ರಧಾನ ಪಾತ್ರ ವಹಿಸಿವೆ; ಅದು ಯಾರೋ ಮಹಾತ್ಮರು ಇಚ್ಛಿಸಿದಂತೆ ನಡೆದುಬಂದಿಲ್ಲ, ಯಾರೋ ಏನು ತಿನ್ನುತ್ತಿದ್ದರೆಂಬುದರಿಂದ ನಿರ್ಧಾರ

ವಾಗಿಲ್ಲ, ಯಾರೋ ನಿಸ್ವಾರ್ಥಿಗಳು ರೂಪಿಸಿದಂತೆ ಘಟಿಸಿಲ್ಲ ಅಥವಾ ಗ್ರಹಗತಿಗಳಿಂದ ಪ್ರೇರಿತವಾಗಿಲ್ಲ, ಇದನ್ನು ಒಪ್ಪುತ್ತೇವೆಯೋ ಇಲ್ಲವೋ ?

ಮಾರ್ಕ್ಸ್ ಅದನ್ನು ಒಪ್ಪುತ್ತಾನೆ, ಸಕಾರಣವಾಗಿಯೇ ಒಪ್ಪುತ್ತಾನೆ. ಹೊರಗೆ ತೋರುವಷ್ಟು ವೈವಿಧ್ಯವು ಇತಿಹಾಸ ದಲ್ಲೇನೂ ಇಲ್ಲ, ಅದು ಒಂದು ರೀತಿಯ ಏಕಪ್ರಕಾರವಾದ ಸರಣಿಯಂತೆಯೇ ಕಾಣುತ್ತದೆ. ಅದರಲ್ಲಿ ಏಕತೆ ಇದೆ ಯೆಂದರೆ ಅದು ''ಮರಳಿ ಮಣ್ಣಿಗೆ'' ಕಾದಂಬರಿಯಲ್ಲೋ ''ಮೃಚ್ಛಕಟಿಕ''ದಂತಹ ನಾಟಕದಲ್ಲೋ ಇರುವ ಏಕತೆ ಯಂತಲ್ಲ, ಏಕತೆಯನ್ನು ನಾವೊಂದು ಉದ್ದವಾದ ದಾರದಲ್ಲಿ ಕಾಣುತ್ತೇವೆ, ಆ ದಾರವು ಎಲ್ಲೆಡೆಯೂ ಕೆಲವು ಏಕಪ್ರಕಾರ ವಾದ ಸಂಗತಿಗಳನ್ನು ಪೋಣಿಸಿಟ್ಟಿದೆ. ಆಹಾರದ ಕೊರತೆ, ಕಷ್ಟದ ದುಡಿಮೆ, ಹಿಂಸೆ, ಶೋಷಣೆ, ಇತ್ಯಾದಿಗಳು ಆ ಸಂಗತಿಗಳು. ಅವುಗಳಲ್ಲೂ ಅಲ್ಲಲ್ಲಿ ಬೇರೆ ಬೇರೆ ರೂಪಗಳಿವೆ, ಆದರೆ ಈವರೆಗಿನ ಎಲ್ಲ ನಾಗರಿಕತೆಗಳಿಗೂ ಅವು ಅಡಿಪಾಯ ಹಾಕಿವೆಯೆಂಬುದೂ ಅಷ್ಟೇ ನಿಜ. ಈ ಅಂಶವು ರುಚಿಕರವಲ್ಲದಿರಬಹುದು, ಕಣ್ಣಿಗೆ ಕೋರೈಸು ವಂತಿಲ್ಲದಿರಬಹುದು, ಮನಸ್ಸನ್ನು ಕದಡಬಹುದು; ಆದರೆ ಈ ಅಂಶವು ಚರಿತ್ರೆಯಲ್ಲಿ ಎಡೆಬಿಡದೆ ಕಂಡುಬರುತ್ತದೆ. ಥಿಯೋಡರ್ ಅಡೋರ್ನೊ ಅದನ್ನು ಹೀಗೆ ಸಂಗ್ರಹಿಸಿದ್ದಾನೆ : ''ಇಂದಿನವರೆಗೂ ನಿರಂತರವಾಗಿ ನಡೆದು ಬಂದಿರುವ ಸಂಗತಿಯೆಂದರೆ ದುಃಖ ಮತ್ತು ನೋವು. ಅದಕ್ಕೆಂದೇ ಮಾನವ ಜೀವ ತಳೆದಿದ್ದಾನೋ ಎಂಬಷ್ಟು ಮಟ್ಟಿಗೆ ಇದು ನಿಜ; ಎಲ್ಲೋ ಒಮ್ಮೊಮ್ಮೆ ಸುಖವಾಗಿ ಉಸಿರಾಡಲು ಅವಕಾಶಗಳಿದ್ದಿರಬಹುದು, ಅಷ್ಟೆ.'' ಇತಿಹಾಸದ ಅದ್ಭುತ ಸಂಕಥನವು ಪ್ರಗತಿ, ವೈಚಾರಿಕತೆ, ಜ್ಞಾನವೃದ್ಧಿ, ಇವುಗಳದ್ದು ಎನ್ನುತ್ತಾರೆ; ಅದಕ್ಕಿಂತಲೂ ಹೆಚ್ಚಾಗಿ ಅದು ನೋವಿನ ಸಂಕಥನ ಕೂಡ. ಅಡೋರ್ನೊ ಹೇಳುವಂತೆ ಮಾನವನು ಕಲ್ಲು ಬೀರಿ ಹಣ್ಣು ಬೀಳಿಸುವ ಹಂತದಿಂದ ಪರಮಾಣು ಶಸ್ತ್ರಾಸ್ತ್ರಗಳ ಹಂತಕ್ಕೆ ಬಂದಿದ್ದಾನೆ, ಆದರೆ ದಾರಿಯುದ್ದಕ್ಕೂ ಅವನದು ರಗಳೆಯ ಪ್ರಸಂಗಗಳೇ.

ಹಿಂಸೆ, ಕಷ್ಟದ ದುಡಿಮೆ ಮತ್ತು ಶೋಷಣೆ ಇತಿಹಾಸದ ಉದ್ದಕ್ಕೂ ಇದ್ದುವು, ನಿಜ; ಆದರೆ ಅವನ್ನು ಇತಿಹಾಸದ ಅಡಿಪಾಯವೆಂದೇಕೆ ಭಾವಿಸಬೇಕು ? ಅವು ಮಾನವನ ಉಳಿಕೆಗೆ ಕಾರಣಗಳಾಗಿರುವುದರಿಂದ ಅವು ಮಹತ್ವದವೆಂದು ಮಾರ್ಕ್ಸ್‌ವಾದಿಗಳು ಭಾವಿಸುತ್ತಾರೆ. ನಮ್ಮ ಭೌತಿಕ ಅಸ್ತಿತ್ವದ ಮೂಲ ಲಕ್ಷಣಗಳು ಅವು. ಅವೆಲ್ಲೋ ಹಠಾತ್ತನೆ ಜರುಗಿ ಇಲ್ಲವಾಗಿರುವಂಥವಲ್ಲ, ನಮ್ಮ ಭೌತಿಕ ಜೀವನದಲ್ಲಿ ಉತ್ಪಾದನೆ ಮತ್ತು ಸಂತಾನೋತ್ಪತ್ತಿ ಇಲ್ಲದ ಹಂತವಿಲ್ಲ, ಅವಕ್ಕೆ ಒಂದು ಸಂರಚನೆ ಸದಾ ಇದ್ದದ್ದೆ ಮತ್ತು ಅದರಲ್ಲಿ ಎಂದೆಂದೂ ಹಿಂಸೆ, ಕಷ್ಟದ ದುಡಿಮೆ ಮತ್ತು ಹಿಂಸೆ ಹಾಸುಹೊಕ್ಕಾಗಿ ಸೇರಿಕೊಂಡಿವೆ. ಅವು ಪ್ರಮುಖ, ಆದರೆ ಅವೇ ಸರ್ವಸ್ವವೆಂದು ಮಾರ್ಕ್ಸ್‌ವಾದಿಗಳು ಹಠ ಹಿಡಿದಿಲ್ಲ. ಹಠ ಹಿಡಿದರೆ ಮಲೇರಿಯಾಕ್ಕೆ ಅವು ಕಾರಣ, ಬ್ರಾಹ್ಮಣ ವಟು ಜುಟ್ಟು ಬಿಡುವುದಕ್ಕೆ ಅವು ಕಾರಣ, ಕಾಳಿದಾಸನ ಕಾವ್ಯದಲ್ಲಿ ಸಾಮಾಜಿಕ ಚಿಂತನೆಗೆ ಅವು ಕಾರಣ, ಅವಧೂತ ಸಿದ್ಧಾಂತಕ್ಕೆ ಅವು ಕಾರಣ, ವಡ್ಡಾರಾಧನೆ ಬರೆದುದಕ್ಕೆ ಅವು ಕಾರಣ, ಇತ್ಯಾದಿ ಸಲ್ಲದ ತೀರ್ಮಾನಗಳಿಗೆ ಬಂದಂತಾಗುತ್ತದೆ. ಎಲ್ಲ ಸಂಘರ್ಷಗಳೂ ಆರ್ಥಿಕ ಮೂಲದವಲ್ಲ, ಎಲ್ಲ ಕಲಾಕೃತಿಗಳಲ್ಲೂ ವರ್ಗ ಹೋರಾಟದ ಛಾಯೆಗಳಿಲ್ಲ. ಇದನ್ನು ಮಾರ್ಕ್ಸ್‌ವಾದಿಗಳು ನಿರಾಕರಿಸಲಾರರು. ಕೆಲವೊಮ್ಮೆ ಮಾರ್ಕ್ಸ್‌ನ ಬರಹಗಳಲ್ಲಿ ರಾಜಕೀಯವು ಆರ್ಥಿಕತೆಯ ಪ್ರತಿಫಲನವೆಂಬ ಧೋರಣೆಯು ವ್ಯಕ್ತವಾಗಿರುವಂತೆ ತೋರುತ್ತದೆ, ಆದರೆ ಅವನು ಸಹ ಸಾಮಾಜಿಕ-ರಾಜಕೀಯ-ಮಿಲಿಟರಿ ಉದ್ದೇಶ ಗಳಿರುವ ಚಾರಿತ್ರಿಕ ಘಟನೆಗಳಿಗೆ – ಆಳದಲ್ಲೆಲ್ಲೋ ಇರಬಹುದಾದ ಆರ್ಥಿಕ ಸನ್ನಿವೇಶದ ಅಭಿವ್ಯಕ್ತಿ ಎಂಬುದನ್ನು ಪಕ್ಕಕ್ಕಿಟ್ಟು – ಕಾರಣಗಳನ್ನು ಅರಸುತ್ತಾನೆ. ರಾಜಕೀಯ, ಕಲೆ ಮತ್ತು ಸಾಮಾಜಿಕ ಜೀವನದ ಮೇಲೆ ಭೌತಿಕ ಶಕ್ತಿಗಳ ನೇರ ಪ್ರಭಾವ ಕೆಲವೇಳೆ ಇರುತ್ತದೆ, ಆದರೆ ಅದು ದೀರ್ಘಕಾಲಿಕವಾದ್ದು ಮತ್ತು ಒಳಹರಿವಿನಂತೆ ಅಗೋಚರ ವಾದ್ದು. ಪ್ರಭಾವವು ಒಮ್ಮೊಮ್ಮೆ ಭಾಗಶಃ ಇರುತ್ತದೆ, ಮತ್ತೆ ಕೆಲವೊಮ್ಮೆ ನಗಣ್ಯವಾಗಿರುತ್ತದೆ. ನಾನುಡುವ ಪಂಚೆಗೂ ಬಂಡವಾಳಶಾಹಿ ಮಾದರಿಯ ಉತ್ಪಾದನೆಗೂ ಸಂಬಂಧ ಕಲ್ಪಿಸಲಾದೀತೆ ?

ಇಲ್ಲೆಲ್ಲೂ ಹೇಗೋ ಮಾಡಿ ಒಂದು ತೀರ್ಮಾನವನ್ನು ಸಮರ್ಥಿಸಬೇಕೆಂಬ ತರ್ಕವಿಲ್ಲ. ರಾಜಕೀಯ, ವಿಜ್ಞಾನ, ವಿಚಾರಧಾರೆಗಳು, ಸಮಾಜ ವಿಜ್ಞಾನ, ಇವೆಲ್ಲಾ ವೇಷ ಮರೆಸಿ ಕೊಂಡಿರುವ ಅರ್ಥಶಾಸ್ತ್ರವಲ್ಲ; ಅವಕ್ಕೆಲ್ಲಾ ತಮ್ಮದೇ ಸ್ವಂತ ವೇಷವಿದೆ. ಮನೋವಿಜ್ಞಾನದಲ್ಲಿ ಮನಸ್ಸು ಎಂಬುದು ವೇಷ ಮರೆಸಿಕೊಂಡಿರುವ ಮಿದುಳು ಎನ್ನುವುದುಂಟು. ಇಲ್ಲಿ ಅಂಥದೇನೂ ಇಲ್ಲ. ವಿಭಿನ್ನ ಶಿಸ್ತುಗಳಿಗೆ ಅವುಗಳದ್ದೇ ಒಂದು ತರ್ಕವಿದೆ, ಅದರಂತೆ ಅವು ನಡೆಯುತ್ತವೆ. ಅವು ಬೇರಾವುದೋ ಶಿಸ್ತಿನ ಪ್ರತಿಫಲನಗಳಲ್ಲ. ಉತ್ಪಾದನಾ ವಿಧಾನದ ಮೇಲೆ ಅವುಗಳದ್ದೂ ಪ್ರಭಾವವುಂಟು. ಅಡಿಪಾಯ ಮತ್ತು ಮೇಲ್ಮೈಗಳ ನಡುವಣ ಸಂಬಂಧವು ಏಕಮುಖಿಯಲ್ಲ, ಅದು ಪರಸ್ಪರ ಪ್ರಭಾವವುಳ್ಳ ಸಂಬಂಧ. ಆದ್ದರಿಂದ ಯಾಂತ್ರಿಕವಾಗಿ ಪೂರ್ವನಿರ್ಧಾರಿತ ಸಂಬಂಧ ವನ್ನು ಇತಿಹಾಸ ಮತ್ತು ಆರ್ಥಿಕತೆಗಳ ನಡುವೆ ಕಲ್ಪಿಸುವ ಪ್ರಶ್ನೆಯೇ ಇಲ್ಲ. ಒಂದರ್ಥದಲ್ಲಿ ನೇತ್ಯಾತ್ಮಕತೆಯ ಸುಳಿವು ಇಲ್ಲಿದೆ. ಅದನ್ನು ಹೀಗೆ ಹೇಳಬಹುದು : ಮಾನವರು ತಮ್ಮ ಭೌತಿಕ ಜೀವನದ ಅಗತ್ಯಗಳನ್ನು ಉತ್ಪಾದಿಸಿಕೊಳ್ಳುವ ವಿಧಾನವು ಅವರ ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ ಮತ್ತು ನ್ಯಾಯವಿತರಣೆಯ ಸಂಸ್ಥೆಗಳನ್ನು ರೂಪಿಸಿಕೊಳ್ಳು ವುದರಲ್ಲಿ ಕೆಲವು ನಿರ್ಬಂಧಗಳನ್ನು ಹೇರುತ್ತದೆ. ಆದ್ದರಿಂದ ''ನಿರ್ಧರಿಸುವುದು'' ಎಂದರೆ ಇಲ್ಲಿ ''ಕೆಲವು ನಿರ್ಬಂಧ ಗಳನ್ನು ಹೇರುವುದು'' ಎಂದರ್ಥ. ಉತ್ಪಾದನಾ ವಿಧಾನಗಳು ರಾಜಕೀಯವು ಹೀಗೇ ಇರಬೇಕೆಂದು ನಿರ್ಧರಿಸುವುದಿಲ್ಲ. ಉದಾಹರಣೆಗೆ, ರಮಣ ಮಹರ್ಷಿಯ ತತ್ತ್ವಶಾಸ್ತ್ರವನ್ನು ಬಂಡವಾಳಶಾಹಿಯು ನಿರ್ಧರಿಸುವುದಿಲ್ಲ, ಅಥವಾ ಪುಟ್ಟಣ್ಣನವರ ಕಾದಂಬರಿಯ ಹರಹನ್ನೂ ನಿರ್ಧರಿಸುವುದಿಲ್ಲ. ಆದರೆ ಬಂಡವಾಳಶಾಹಿಯ ಹಿನ್ನೆಲೆಯಲ್ಲಿ ಎರಡನ್ನೂ ಅರ್ಥೈಸಿಕೊಳ್ಳಲು ಸಾಧ್ಯ. ಇಂತಹ ಉತ್ಪಾದನಾ ವಿಧಾನ ವಿರುವಾಗ ಇಂಥದೇ ವಿಚಾರ ಮೂಡುತ್ತದೆ ಎಂದು ಯಾರಾದರೂ ಹೇಳಿದರೆ ಅದು ಅಸಂಬದ್ಧ; ಹಾಗಿದ್ದಿದ್ದರೆ ಮಾರ್ಕ್ಸ್‌ವಾದ ಮೂಡಲೇಬಾರದಿತ್ತು! ಟಾಂ ಪೇನ್‌ನ ಕಾಲದಲ್ಲಿ ಬ್ರಿಟನ್ನಿನ ಪೊಲೀಸ್ ಪಡೆ ಎಗ್ಗಿಲ್ಲದೆ ದೌರ್ಜನ್ಯ ನಡೆಸುತ್ತಿತ್ತು, ಆಗಲೇ ಅವನು ''ಮಾನವನ ಹಕ್ಕುಗಳು'' ಎಂಬ ಮಹಾನ್ ಗ್ರಂಥವನ್ನು ರಚಿಸಿದ. ಆದರೆ ಬ್ರಿಟನ್ನಿನ ಸಂಸ್ಕೃತಿಯ ಪ್ರತಿನಿಧಿಯಾಗಿ ಇದೊಂದೇ ಗ್ರಂಥ ಇರಲಿಲ್ಲವೆಂಬುದೂ ನಿಜ. ನಮ್ಮ ಸಮಕಾಲೀನ ಸಂದರ್ಭ ನೋಡಿ : ಬಹುತೇಕ ಕಾದಂಬರಿಕಾರರು, ವಿದ್ವಾಂಸರು, ಜಾಹಿರಾತುದಾರರು, ಮಾಧ್ಯಮಗಳು, ಅಧ್ಯಾಪಕರು, ವಕೀಲರು, ಎಲ್ಲ ಯಥಾಸ್ಥಿತಿಗೆ ತಕ್ಷಣದಲ್ಲೇನೂ ಕುತ್ತು ಸಂಭವಿಸಬಹುದಾದಂತಹುದನ್ನು ಅಭಿವ್ಯಕ್ತಿ ಮಾಡದವರೇ ಇರುತ್ತಾರೆ. ತಮ್ಮ ಸ್ವಾತಂತ್ರ್ಯವನ್ನು ಚಲಾಯಿಸದಿರುವ ಸ್ವಾತಂತ್ರ್ಯ ಅವರದು. ಅದನ್ನು ಗಮನಿಸುವವರು ವಿರಳ. ಮಾರ್ಕ್ಸ್ ಹೇಳುವುದೇನೆಂದರೆ ಇದೊಂದು ಆಕಸ್ಮಿಕವಲ್ಲ ಎಂದು. ಇದರಿಂದ ಮುಂದೆ ಹೋಗಿ ಅವನು ಇತ್ಯಾತ್ಮಕವಾಗಿ ಮಂಡಿಸುವ ವಿಚಾರವನ್ನು ನೋಡಬಹುದು. ವರ್ಗ ಸಮಾಜದಲ್ಲಿ ಯಾವುದೇ ಕಾಲದ ಸಂಸ್ಕೃತಿ, ಕಾನೂನುಕಟ್ಟಳೆ, ಮತ್ತು ರಾಜಕೀಯವು ಆ ಕಾಲದ ಪ್ರಭಾವಿ ಸಾಮಾಜಿಕ ವರ್ಗದ ಹಿತಾಸಕ್ತಿಗಳೊಡನೆ ಬೆಸೆದುಕೊಂಡಿರುತ್ತದೆ. ''ದ ಜರ್ಮನ್ ಐಡಿಯಾಲಜಿ''ಯಲ್ಲಿ ಮಾರ್ಕ್ಸ್ ಹೇಳುವಂತೆ ''ಯಾವ ವರ್ಗವು ಸಮಾಜದ ಭೌತಿಕ ಶಕ್ತಿಯನ್ನು ತನ್ನದಾಗಿಸಿಕೊಂಡಿರುತ್ತದೋ ಅದು ಆ ಕಾಲದ ಬೌದ್ಧಿಕ ಶಕ್ತಿಯಾಗಿ ಸಹ ಆಳುತ್ತಿರುತ್ತದೆ.''

ಸ್ವಲ್ಪ ಯೋಚನೆ ಮಾಡಿದರೆ ಭೌತಿಕ ಉತ್ಪಾದನೆಯು ಮಾನವ ಚರಿತ್ರೆಯಲ್ಲಿ ಎಂತಹ ಪ್ರಚಂಡ ಸ್ಥಾನವನ್ನು ಹೊಂದಿದೆಯೆಂಬುದು ಗೊತ್ತಾಗುತ್ತದೆ. ಅದಕ್ಕಾಗಿ ಅದೆಷ್ಟು ಸಮಯ ಮತ್ತು ಶಕ್ತಿ ಮೀಸಲಿರಿಸಲಾಗಿದೆ, ಅದೆಷ್ಟು ಆಂತರಿಕ ಸಂಘರ್ಷಗಳು ಜರುಗಿವೆ, ಹುಟ್ಟಿನಿಂದ ಸಾವಿನವರೆಗೆ ಅದಕ್ಕಾಗಿ ಅದೆಷ್ಟು ಜನ ಜೀವ ಸವೆಸಿದ್ದಾರೆ; ಅಂಥದು ಜೀವನದ ಬೇರೆ ವಿಭಾಗಗಳ ಮೇಲೆ ತನ್ನ ಮುದ್ರೆಯನ್ನೊತ್ತದೆ ಬಿಟ್ಟೀತೆ! ಬೇರೆ ಸಾಮಾಜಿಕ ಸಂಸ್ಥೆಗಳೆಲ್ಲ ಇದರ ವರ್ತುಲಕ್ಕೆ ಸೆಳೆಯಲ್ಪಡುತ್ತವೆ. ರಾಜಕೀಯ, ಕಾನೂನು, ಸಂಸ್ಕೃತಿ, ವಿಚಾರಧಾರೆಗಳು, ಯಾವುವನ್ನೂ ಇದು ಸುಮ್ಮನೆ ಬಿಡುವುದಿಲ್ಲ; ತಾನು ನಿರ್ಮಿಸಿರುವ ಸಾಮಾಜಿಕ ವ್ಯವಸ್ಥೆಯ ಸಮರ್ಥನೆಗೆ ಇವೆಲ್ಲಾ ಕೈಜೋಡಿಸ ಬೇಕೆಂದು ಒತ್ತಾಯಿಸುತ್ತದೆ. ಸಮಕಾಲೀನ ಬಂಡವಾಳ ಶಾಹಿಯತ್ತ ಕಣ್ಣುಹಾಯಿಸಿ : ಎಲ್ಲವನ್ನೂ ಸರಕನ್ನಾಗಿಸುವ ಭರಾಟೆಯಲ್ಲಿ ಅದು ಯಾವುದನ್ನೂ ಬಿಟ್ಟಿಲ್ಲ. ಕ್ರೀಡೆ, ಲೈಂಗಿಕತೆ, ಜಾಹಿರಾತು, ದೃಶ್ಯ ಮಾಧ್ಯಮ, ಎಲ್ಲದರಲ್ಲೂ ಅದರದೇ ಕಪ್ಪು ಛಾಯೆ. ಕಡೆಗೆ ಜಾನಪದವನ್ನು ಸಹ ಬಿಟ್ಟಿಲ್ಲ, ಇನ್ನು ದೇವಸ್ಥಾನಗಳ ಮಾತೇ ಬೇಡ! ಇತಿಹಾಸವನ್ನು ಕುರಿತ ಮಾರ್ಕ್ಸ್‌ನ ಸಿದ್ಧಾಂತಕ್ಕೆ ಬೇರೆ ಪುರಾವೆಯೇ ಅನಗತ್ಯವೆನ್ನುವಂತಾಗಿಬಿಟ್ಟಿದೆ. ದಿನೇ ದಿನೇ ಆ ಸಿದ್ಧಾಂತದ ಪ್ರಕರ್ಷ ಹೆಚ್ಚುತ್ತಿರುವುದನ್ನು ನೋಡಿದರೆ ಮಾರ್ಕ್ಸ್ ಮೇಲಿನ ಆರೋಪವು ಬಂಡವಾಳಶಾಹಿಗೆ ಸೂಕ್ತವಾದ ಆರೋಪ ಎನ್ನುವುದು ಖಚಿತವಾಗುತ್ತಿದೆ. ಆರ್ಥಿಕತೆಯೇ ಸರ್ವಸ್ವ ವೆನ್ನುವುದು ಬಂಡವಾಳಶಾಹಿಯ ಸೂತ್ರ, ಮಾರ್ಕ್ಸ್‌ನದಲ್ಲ.

ಬಂಡವಾಳಶಾಹಿ ಪ್ರಕ್ರಿಯೆಗೆ ಭಿನ್ನವಾಗಿ ಮಾರ್ಕ್ಸ್ ವಿಶಾಲಾರ್ಥದಲ್ಲಿ ಉತ್ಪಾದನೆಯು ಉತ್ಪಾದನೆಗಾಗಿಯೇ ಎಂದು ವಾದಿಸುತ್ತಾನೆ. ಮಾನವನ ಸ್ವಯಂಸಿದ್ಧಿಗೆ ತನ್ನದೇ ಆದ ಮೌಲ್ಯವಿದೆ. ಅದು ಬೇರಾವುದೋ ಗುರಿಗೆ ಸಾಧನ ವಾಗಬೇಕಾಗಿಲ್ಲ. ಬಂಡವಾಳಶಾಹಿಯೂ ಉತ್ಪಾದನೆಯು ಉತ್ಪಾದನೆಗಾಗಿಯೇ ಎನ್ನುತ್ತದೆ, ಆದರೆ ಬಹಳ ಸಂಕುಚಿತ ಅರ್ಥದಲ್ಲಿ. ಈ ಅರ್ಥದ ವ್ಯಾಪ್ತಿಯಲ್ಲಿ ಮಾನವನ ಸಕಲ ಕ್ರಿಯಾತ್ಮಕ ಶಕ್ತಿಯೂ ಜೀವನ ಹೊರೆಯಲು ಅಗತ್ಯವಾದ ಸಾಧನಗಳನ್ನು ಉತ್ಪಾದಿಸುವುದರಲ್ಲೇ ವ್ಯಯವಾಗಿ

ಹೋಗುತ್ತದೆ. ಆ ಜಂಜಾಟದಲ್ಲಿ ಜೀವನದ ಸೊಬಗನ್ನು ಸವಿಯಲು ಸಮಯವಿನ್ನೆಲ್ಲಿಯದು! ಮಾರ್ಕ್ಸ್‌ವಾದದ ತಿರುಳು ಇದರಲ್ಲಿದೆ: ''ಉತ್ಪಾದನೆಯು ಉತ್ಪಾದನೆಯ ಸಲುವಾಗಿ'' ಎಂಬುದನ್ನು ಹೇಗೆ ವ್ಯಾಖ್ಯಾನಿಸಿಕೊಳ್ಳುತ್ತೇವೆ ಎಂಬುದು ಅಲ್ಲಿ ಮೂಲಭೂತ ವಿಷಯ. ಒಂದು ಆರ್ಥಿಕ ಆಯಾಮವನ್ನುಳ್ಳ ಅರ್ಥ, ಇನ್ನೊಂದು ಸೃಷ್ಟ್ಯಾತ್ಮಕ ಅಥವಾ ಕಲಾತ್ಮಕ ಆಯಾಮವನ್ನುಳ್ಳ ಅರ್ಥ. ಆರ್ಥಿಕತೆಯೇ ಸರ್ವಸ್ವವೆನ್ನುವವನು ಮಾರ್ಕ್ಸ್ ಅಲ್ಲ; ಅವನಿಗೆ ಕಾರು, ಜೆಟ್ಟು, ಬಾಂಬು, ಟ್ರಾಕ್ಟರುಗಳಾಚೆಗೆ ಮಾನವ ಉತ್ಪಾದನಾ ಶಕ್ತಿ ವಿಸ್ತರಿಸಿಕೊಳ್ಳುತ್ತದೆಂಬ ಶ್ರದ್ಧೆ ಇದೆ. ಕುರಿಗಳನ್ನು ಕಡಿಯುವುದು ಅಥವಾ ಟ್ರಾನ್ಸಿಸ್ಟರ್ ಜೋಡಿಸುವುದು, ಇವೇ ಉತ್ಪಾದನೆಗಳಲ್ಲ; ಅದರಾಚೆಗೆ ಕಲೆಯ ಉತ್ಪಾದನೆಯೆಂಬ ಶ್ರೇಯೋಮಾರ್ಗವೊಂದಿದೆ. ಸಂಕುಚಿತಾರ್ಥದಲ್ಲಿ ಆರ್ಥಿಕತೆಯು ಇತಿಹಾಸದಲ್ಲಿ ಕೇಂದ್ರ ಪಾತ್ರ ವಹಿಸುತ್ತದೆಂಬುದು ಮಾರ್ಕ್ಸ್‌ಗೆ ಮಾನ್ಯ. ಅವನೊಬ್ಬನೇ ಏನು, ಹಲವರು ಆ ಅಭಿಪ್ರಾಯ ಉಳ್ಳವರಿದ್ದಾರೆ. ಪ್ರಾಚೀನ ರೋಮಿನಲ್ಲಿ ಸಿಸೆರೊ ಪ್ರಭುತ್ವದ ಕರ್ತವ್ಯವು ಖಾಸಗಿ ಆಸ್ತಿಯನ್ನು ರಕ್ಷಿಸುವುದು ಎಂದಿದ್ದ. ೧೮ನೆಯ ಶತಮಾನದ ಯೂರೋಪಿನ ''ಜ್ಞಾನೋದಯ'' ಯುಗದಲ್ಲಿ ಇತಿಹಾಸದ ''ಆರ್ಥಿಕ'' ಸಿದ್ಧಾಂತಕ್ಕೆ ಪ್ರಧಾನ ಸ್ಥಾನ ಕೊಡಲಾಗಿತ್ತು, ಆ ಕಾಲದ ಅನೇಕ ಚಿಂತಕರು ಇತಿಹಾಸವೆಂದರೆ ಉತ್ಪಾದನೆಯ ವಿಧಾನದಲ್ಲಿನ ವಿವಿಧ ಮಜಲುಗಳೆಂದು ವ್ಯಾಖ್ಯಾನಿಸಿ, ಆದರಿಂದಲೇ ಜೀವನಶೈಲಿ, ಸಾಮಾಜಿಕ ಅಸಮಾನತೆಗಳು, ಕುಟುಂಬದೊಳಗಿನ ಸಂಬಂಧಗಳು, ಸರ್ಕಾರದೊಡನೆ ಸಂಬಂಧ, ಇವೆಲ್ಲಾ ಅರ್ಥವಾಗುತ್ತದೆಂದು ವಿವರಿಸಿದ್ದರು. ಆ್ಯಡಂ ಸ್ಮಿತ್ ಪ್ರಕಾರ ಇತಿಹಾಸದಲ್ಲಿ ಒಂದೊಂದು ವಿಧದ ಭೌತಿಕ ಉತ್ಪಾದನೆಯೂ ತನ್ನದೇ ಆದ ಕಾನೂನು, ಆಸ್ತಿ, ಸರ್ಕಾರ, ಇವನ್ನು ರೂಪಿಸಿಕೊಳ್ಳುತ್ತದೆಂದ. ರೂಸೋ ಹೇಳುತ್ತಾನೆ, ಆಸ್ತಿಯು ಯುದ್ಧಕ್ಕೆ, ಶೋಷಣೆಗೆ ಮತ್ತು ವರ್ಗ ಸಂಘರ್ಷಕ್ಕೆ ಕಾರಣ, ಎಂದು. ''ಸಾಮಾಜಿಕ ಕರಾರು'' ಎಂಬುದು ಶುದ್ಧ ಮೋಸ ಎನ್ನುವ ರೂಸೋ, ತಮ್ಮ ಹಿತದ ರಕ್ಷಣೆಗಾಗಿ ಶ್ರೀಮಂತರು ಬಡವರ ಮೇಲೆ ಹೇರಿರುವ ಕಲ್ಪನೆ ಇದೆಂದು ಟೀಕಿಸಿದ್ದಾನೆ. ಅವನ ಪ್ರಕಾರ ಮಾನವ ಸಮಾಜವು ದುರ್ಬಲರಿಗೆ ಕೋಳ ತೊಡಿಸಿ, ಶ್ರೀಮಂತರಿಗೆ ಅಧಿಕಾರ ನೀಡಿ, ''ಸದಾಕಾಲಕ್ಕೂ ಸಹಜ ಸ್ವಾತಂತ್ರ್ಯವನ್ನು ನಾಶಮಾಡಿದೆ, ಆಸ್ತಿಯ ಹಕ್ಕನ್ನು ಎತ್ತರಕ್ಕೇರಿಸಿ ಅಸಮಾನತೆಗೆ ಎಡೆಮಾಡಿಕೊಟ್ಟಿದೆ.'' ಆದರಿಂದಾಗಿ ಕಾನೂನು ಬಹುಮಟ್ಟಿಗೆ ಹಿಂಸೆ ಮತ್ತು ಪ್ರಾಬಲ್ಯದ ಅಸ್ತ್ರವಾಗಿದೆ; ಸಂಸ್ಕೃತಿ, ಜ್ಞಾನ, ಕಲೆ, ಮತಧರ್ಮ, ಎಲ್ಲವೂ ಯಥಾಸ್ಥಿತಿಯ ರಕ್ಷಣೆಗೆ ತೊಡಗಿಸಲ್ಪಟ್ಟಿವೆ, ಎನ್ನುತ್ತಾನೆ ಅವನು. ಅವನ ರೂಪಕ ಅಮೋಘವಾಗಿದೆ: ಮಾನವನಿಗೆ ಕೈಕೋಳ ತೊಡಿಸಿ ಅದರ ಮೇಲೆ ''ಹೂವಿನ ಮಾಲೆಯನ್ನು'' ಹಾಕಿ ಅಲಂಕರಿಸಲಾಗಿದೆ, ಆದರೆ ಕೈಕೋಳದ ಭಾರವು ಪುರುಷ-ಮಹಿಳೆಯರನ್ನು ಬಗ್ಗಿಸಿಬಿಟ್ಟಿದೆ. ಮಾನವನ ಅತೃಪ್ತಿಗೆ ಮೂಲಕಾರಣ ಆಸ್ತಿ, ಅಷ್ಟೆ. (ಮಾರ್ಕ್ಸ್‌ಗಿಂತಲೂ ನಾಲ್ಕು ದಶಕಗಳ ಹಿಂದಿನ ಮಾತಿದು.)

೧೯ನೆಯ ಶತಮಾನದ ಐರ್ಲೆಂಡಿನ ಅರ್ಥಶಾಸ್ತ್ರಜ್ಞ ಜಾನ್ ಎಲಿಯಟ್ ಕೇರ್ನ್ಸ್ ಸಮಾಜವಾದವನ್ನು ''ಅರ್ಥಶಾಸ್ತ್ರದ ಅಜ್ಞಾನದ'' ಫಲವೆಂದು ಮೂದಲಿಸಿ ''ಮಾನವನ ಭೌತಿಕ ಹಿತಾಸಕ್ತಿಗಳು ಅವನ ರಾಜಕೀಯ ಅಭಿಮತ ಮತ್ತು ನಡತೆಯನ್ನು ನಿರ್ಧರಿಸುತ್ತವೆ'' ಎಂದು ಉದ್ಗರಿಸಿದ. ಅವನ ಕೃತಿ ''ದ ಸ್ಲೇವ್ ಪವರ್''ನ ಮುನ್ನುಡಿಯ ಮಾತನ್ನು ಗಮನಿಸಿ: ''ಚರಿತ್ರೆಯ ಗತಿಯು ಬಹುಮಟ್ಟಿಗೆ ಆರ್ಥಿಕ ಕಾರಣಗಳ ಪರಿಣಾಮದಿಂದ ನಿರ್ಧಾರವಾಗಿದೆ.'' ಕೇರ್ನ್ಸ್‌ನ ಸಮಕಾಲೀನ ಲೆಕ್ಕಿ ಅದನ್ನೇ ಮರುಪಠಣ ಮಾಡಿದ್ದಾನೆ. ಅಷ್ಟೇ ಏಕೆ, ಸಿಗ್ಮಂಡ್ ಫ್ರಾಯ್ಡ್ ಸಹ ಒಂದು ರೀತಿಯಲ್ಲಿ ಆರ್ಥಿಕತೆಯ ನಿರ್ಧಾರಕ ಸೂತ್ರವೆಂದು ಬಗೆದಿದ್ದಾನೆ. ದುಡಿಮೆ ಇಲ್ಲದಿದ್ದರೆ ಎಲ್ಲೋ ಲೈಂಗಿಕ ಚಿಂತನೆಯಲ್ಲಿ ಮುಳುಗಿರುತ್ತಿದ್ದೆವು, ಎನ್ನುತ್ತಾನವನು. ಇವನ್ನೆಲ್ಲಾ ಬಿಡಿ: ೧೮ನೆಯ ಶತಮಾನದ ಆಲಿವರ್ ಗೋಲ್ಡ್‌ಸ್ಮಿತ್ ಎಂಬ ಕವಿ, ಪ್ರಬಂಧಕಾರ, ನಾಟಕಕಾರ ಹೇಳಿರುವುದನ್ನು ನೋಡಿ – ''ಮಾನವ ಸಮಾಜದ ಜೀವಿ ಹಲವು ಹಂತಗಳನ್ನು ಹಾದುಬರಬೇಕು; ಬೇಟೆಗಾರ, ದನಗಾಹಿ, ಆದನಂತರ ಆಸ್ತಿಗೆ ಮೌಲ್ಯ ಕಟ್ಟಿದಾಗ ಅನ್ಯಾಯ ಆರಂಭವಾಯಿತು. ಆಮೇಲೆ, ಪೀಡನೆಗೆ ಗುರಿಯಾದವನನ್ನು ತುಳಿಯುವ ಕಾನೂನು, ಅವನ ಆಸ್ತಿಯು ಪರಾಧೀನವಾಗುವುದು, ಎಲ್ಲಾ ಜರುಗುತ್ತದೆ. ಕಾನೂನಿನ ಪ್ರಕಾರವೇ ಆಸ್ತಿ ಸೆಳೆದುಕೊಂಡವರು ಹಿಗ್ಗಾಮುಗ್ಗ ಆಸ್ತಿ ತುಂಬಿಕೊಳ್ಳುತ್ತಾರೆ, ಸುಖಲೋಲುಪತೆಯಲ್ಲಿ ಲೀನರಾಗುತ್ತಾರೆ ಮತ್ತು ಹಾಗೆಯೇ ಇರಬಯಸುತ್ತಾರೆ, ಇದಕ್ಕೆಲ್ಲಾ ಜ್ಞಾನದ ಖನಿಯು ಅವಶ್ಯಕವಾಗುತ್ತದೆ, ಉಪಯುಕ್ತವಾಗುತ್ತದೆ. ಆ ಜ್ಞಾನಿಗಳು ಇಲ್ಲದಿದ್ದರೆ ಪ್ರಭುತ್ವವು ಉಳಿಯುವುದಿಲ್ಲ.''

## ಅದ್ರಾಮ ಮತ್ತು ಬೆಕ್ಕುಗಳು

೧

ಹಿಂದೆ

ನನ್ನೂರ ಬೆಕ್ಕುಗಳು ಕಾದು
ಕುಳಿತಿರುತ್ತಿದ್ದವು ಅದ್ರಾಮನಿಗೆ
ಎಸೆವ ಮೀನುಗಳಿಗೆ

ಸರಿಯಾಗಿ ಹತ್ತಕ್ಕೆ
ಸೈಕಲ್ಲು ಬೆಲ್ಲು ಕೇಳಿದರೆ ಸಾಕು
ಎಲ್ಲ ಕೇರಿಯ
ಎಲ್ಲ ಬಣ್ಣದವು
ಒಂದಾಗುತ್ತಿದ್ದವು

ಅವನೋ ಜೋಗಿ
ಬೆಲ್ಲು ಬಾರಿಸುತ ಮುಂದೆ ಮುಂದೆ
ಇವು ಅವನ ಹಿಂದೆ ಹಿಂದೆ

ಊರೆಲ್ಲ ಅಲೆದಾಡಿಸಿ
ಕೆರೆಕಟ್ಟೆ ಹಾಯಿಸಿ
ತಲೆ ಬಾಲ ಎಸೆದಾಗಲೇ
ಅವನಿಗೂ ಇವಕ್ಕೂ
ತೃಪ್ತಿ

೨

ಈಗ ಊರಲ್ಲಿ
ಹಸಿರು ಕೇಸರಿ ಬಣ್ಣಗಳ ರಾಡಿ
ಬಾಂಗು ಸುಪ್ರಭಾತಗಳ ಕಲಸು ಮೇಲೋ
ಗರದಲ್ಲಿ ಅದ್ರಾಮನ ದನಿ ಕೇಳುವುದೇ
ಇಲ್ಲ

ಬೆಕ್ಕುಗಳಿಗೀಗ ಕೇರಿಯಲ್ಲೇ
ಹಾಲನ್ನ ಬ್ರೆಡ್ಡು ಬೆಣ್ಣೆ
ತರಹೇವಾರಿ ಅಂತಸ್ತುಗಳ ಊಟ

ಕೆಟ್ಟು ಕೆರಹಿಡಿದ ನಾಲಗೆ
ಅದ್ರಾಮನ ಬಯಸಿದರೆ
ಬಣ್ಣಗಳ ಮಾರುದ್ದ ಉಪದೇಶ

ಬಂದಾನೋ ಬಾರನೋ ಜೋಗಿ?
ಮತ್ಸ್ಯಗಂಧದ ನೆನಪಲ್ಲಿ
ಬೆಕ್ಕುಗಳೀಗ ತಪ್ತ



**ಪಿ. ಬಿ. ಪ್ರಸನ್ನ**
ಸಹಾಯಕ ಕನ್ನಡ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು,
ಸಿರಸಿ - ೫೮೧ ೪೦೧, ಉತ್ತರ ಕನ್ನಡ ಜಿಲ್ಲೆ

ಗೋಲ್ಡ್‌ಸ್ಮಿತ್, ರೂಸೋ, ಕೇರ್ನ್ಸ್, ಆ್ಯಡಂ ಸ್ಮಿತ್, ಲೆಕ್ಕಿ, ಯಾರೂ ಮಾರ್ಕ್ಸ್‌ವಾದಿಗಳಲ್ಲ. ಅವರು ಹೇಳಿದ್ದುದನ್ನು ಮಾರ್ಕ್ಸ್ ಇನ್ನೂ ಗಟ್ಟಿಯಾಗಿ ಹೇಳಿದ, ವೈಜ್ಞಾನಿಕ ಅಡಿಪಾಯದ ಮೇಲೆ ನಿಲ್ಲಿಸಿದ. ಆದರೆ ಆಕ್ಷೇಪಕ್ಕೆ ಅದಷ್ಟೇ ಕಾರಣವಲ್ಲ. ಇತರರು ಒಂದು ಅಭಿಪ್ರಾಯವನ್ನು ಚಿಂತಕರಾಗಿ ವ್ಯಕ್ತಪಡಿಸಿ ನಿರ್ಗಮಿಸಿದರು; ಆದರೆ ಮಾರ್ಕ್ಸ್ ಬದಲಾವಣೆಗೆ ಕಾರ್ಯಕ್ರಮ ರೂಪಿಸಹೊರಟ, ತಾವು ಸ್ಥಿರವೆಂದು ನಂಬಿದ್ದ ಆಳುವ ವರ್ಗಕ್ಕೆ ಕಾರ್ಯಕ್ರಮದ ರೂಪದಲ್ಲಿ ಎಚ್ಚರಿಕೆ ನೀಡಿದ. ಅದಕ್ಕೇ ಅವನ ಚಿಂತನೆಯನ್ನು ಅಪಾರ್ಥಗೈಯ್ಯುವುದು ಮತ್ತು ಖಂಡನೆಗೆ ಗುರಿ ಮಾಡುವುದು ಆಳುವ ವರ್ಗದ ಪರವಾಗಿರುವ ಚಿಂತಕರ ಮತ್ತು ವಿದ್ವಾಂಸರ ವೃತ್ತಿಯಾಗಿದೆ. ಅದು ವೃತ್ತಿ, ಕೇವಲ ಪ್ರವೃತ್ತಿಯಲ್ಲ. ಗೋಲ್ಡ್‌ಸ್ಮಿತ್ ಐರ್ಲೆಂಡಿನ ಬಡಕೊಂಪೆ ಯೊಂದರಲ್ಲಿದ್ದ, ಅವನ ಸುತ್ತಲೂ ದೊಡ್ಡ ಇಂಗ್ಲಿಷ್ ಜಮೀನ್ದಾರರಿದ್ದರು, ಮತ್ತು ಅವನು ಕಣ್ತೆರೆದು ನೋಡಿದ. ಇಂಗ್ಲೆಂಡಿನಲ್ಲಿ ಕವಿಗಳಿಗೆ ಮತ್ತು ಇತಿಹಾಸಕಾರರಿಗೆ ಅಷ್ಟು ಜಂಜಡದ ಬಾಧೆ ಇರಲಿಲ್ಲವೇನೊ ! ಈಗಂತೂ ತಮಾಷೆಯ ಸನ್ನಿವೇಶವಿದೆ : ಮಾರ್ಕ್ಸ್‌ನನ್ನು ಅವನ ಇತಿಹಾಸದ ಸಿದ್ಧಾಂತಕ್ಕಾಗಿ ನಿಂದಿಸುತ್ತಾರೆ ಮತ್ತು ಅದೇ ಜನ ಆ ಸಿದ್ಧಾಂತವು ನಿಜವೆಂಬಂತೆ ಜೀವನದಲ್ಲಿ ವರ್ತಿಸುತ್ತಾರೆ. ಅವರಿಗೆ ಬ್ಯಾಂಕರುಗಳು, ಲೇವಾದೇವಿಗಾರರು, ಖಜಾನೆಯ ಅಧಿಕಾರಿಗಳು, ಸಹಕಾರಿ ವಿಭಾಗದ ಕಾರ್ಯಕರ್ತರು, ಬಂಡವಳಿಗರು, ಎಂದೆಲ್ಲಾ ಹೆಸರುಗಳಿವೆ. ಅವರ ಪ್ರತಿಯೊಂದು ಕ್ರಿಯೆಯೂ ಆರ್ಥಿಕತೆಗೆ ಆದ್ಯತೆ ನೀಡು ವಂಥದೇ. ಅವರಷ್ಟು ಬದ್ಧತೆಯುಳ್ಳ ಮಾರ್ಕ್ಸ್‌ವಾದಿಗಳು ಇನ್ನೆಲ್ಲಿ! ಸ್ವಾರಸ್ಯದ ಸಂಗತಿಯೆಂದರೆ ''ಇತಿಹಾಸದ ಆರ್ಥಿಕ ಸಿದ್ಧಾಂತ'' ಹುಟ್ಟಿಕೊಂಡದ್ದು ಮ್ಯಾಂಚೆಸ್ಟರ್ ಹಿನ್ನೆಲೆಯಲ್ಲಿ; ಔದ್ಯಮಿಕ ಬಂಡವಾಳ ಜನ್ಮತಾಳಿದ ಹಿನ್ನೆಲೆಯಲ್ಲಿ. ಏಂಗೆಲ್ಸ್ ಹೇಳಿದ, ''ಇಲ್ಲೇ ನಾನು ಆರ್ಥಿಕತೆಯ ಅತಿಮಹತ್ವವನ್ನು ಅರಿತುಕೊಂಡಿದ್ದು'' ಎಂದು. ಅದಂತಿರಲಿ, ಸರ್ವಸ್ವವೂ ಆರ್ಥಿಕತೆಯಿಂದ ನಿರ್ಧಾರವಾಗುತ್ತದೆಂದು ಮಾರ್ಕ್ಸ್ ಭಾವಿಸಿದ್ದನೆಂದು ಹೇಳುವುದು ತೀರಾ ಅಸಂಗತ. ಇತಿಹಾಸವನ್ನು ನಿರ್ಧರಿಸುವುದು ವರ್ಗ ಹೋರಾಟ ವೆಂಬುದು ಅವನ ನಿಲುವು, ಮತ್ತು ವರ್ಗಗಳು ಕೇವಲ ಆರ್ಥಿಕ ಸ್ತಂಭಗಳ ಮೇಲೆ ನಿಂತಿಲ್ಲ, ವರ್ಗಗಳು ಉತ್ಪಾದನೆಯ ಒಂದು ಮಾದರಿಯಲ್ಲಿ ಒಂದೇ ತೆರನ ಸ್ಥಾನ ತುಂಬುವ ಗುಂಪುಗಳು. ಆದರೆ ವಿಶೇಷವಾಗಿ ಸಾಮಾಜಿಕ ವರ್ಗಗಳ ಮಾತನಾಡುತ್ತೇವೆ, ಆರ್ಥಿಕ ವರ್ಗಗಳನ್ನಲ್ಲ. ಮಾರ್ಕ್ಸ್ ''ಸಾಮಾಜಿಕ ವರ್ಗಗಳು'' ಮತ್ತು ''ಸಾಮಾಜಿಕ'' ಕ್ರಾಂತಿಯ ಬಗೆಗೆ ವಿಶ್ಲೇಷಣೆ ನೀಡಿದ್ದಾನೆ. ಉತ್ಪಾದಕ ಶಕ್ತಿಗಳಿಗಿಂತ ಉತ್ಪಾದನೆಯ ಸಾಮಾಜಿಕ ಸಂಬಂಧಗಳು ಹೆಚ್ಚು ಮುಖ್ಯವೆನ್ನುವ ಮಾರ್ಕ್ಸ್ ಹೇಗೆ ತಾನೆ ಆರ್ಥಿಕತೆಗೆ ಚರಿತ್ರೆಯ ಚಾಲಕಶಕ್ತಿಯ ಸ್ಥಾನ ನೀಡಿಯಾನು ! ಪೋಪ್ ಮತ್ತು ಪೇಜಾವರ ಸ್ವಾಮಿ, ಇಬ್ಬರೂ ಆರ್ಥಿಕತೆಯ ಮಾತನ್ನಾಡುವುದಿಲ್ಲ, ಅದಿಲ್ಲದೆಯೇ ಅವರು ಭಕ್ತರನ್ನು ಭಗವಂತನ ಪಾದದ ಬಳಿಗೆ ದೂಡುತ್ತಾರೆ. ಅಂಥವರ ಧೂರ್ತತನವನ್ನು ಬಡಿಯಲು ಮಾರ್ಕ್ಸ್ ಆರ್ಥಿಕತೆಗೆ ಒತ್ತು ನೀಡಿದ್ದಾನೆ.

ವರ್ಗಗಳು ಕಾರ್ಖಾನೆಗಳಲ್ಲಿ, ಗಣಿಗಳಲ್ಲಿ ಮತ್ತು ಹೊಲಗದ್ದೆಗಳಲ್ಲಿ ಮಾತ್ರವೇ ಇಲ್ಲ; ಅವು ಸಾಮಾಜಿಕ ರಚನೆಗಳು, ಸಮುದಾಯಗಳು. ಅಂತೆಯೇ ಆರ್ಥಿಕ ಬಣಗಳು. ಅವಕ್ಕೆ ವಿಭಿನ್ನ ಆಚರಣೆಗಳು, ಸಂಪ್ರದಾಯ ಗಳು, ಸಾಮಾಜಿಕ ಸಂಸ್ಥೆಗಳು, ಮೌಲ್ಯಗಳು, ಚಿಂತನಾ ಮಾರ್ಗಗಳು, ಇವೆ. ಅವು ರಾಜಕೀಯ ಸಂಗತಿಗಳು ಸಹ ಆಗಿವೆ. ಮಾರ್ಕ್ಸ್ ಕೆಲವೆಡೆ ಸೂಚಿಸುವಂತೆ ಅವಕ್ಕೆ ರಾಜಕೀಯ ವಿಶಿಷ್ಟತೆಗಳಿಲ್ಲದಿದ್ದರೆ ಪೂರ್ಣಾರ್ಥದಲ್ಲಿ ಅವು ವರ್ಗಗಳೆನಿಸಿಕೊಳ್ಳುವುದಿಲ್ಲ. ಅವಕ್ಕೆ ತಮ್ಮ ವರ್ಗದ ಬಗೆಗಿನ ಪ್ರಜ್ಞೆ ಇದ್ದಾಗ ಮಾತ್ರ ಅವು ನೈಜ ವರ್ಗಗಳು. ಅದರಲ್ಲಿ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಸೈದ್ಧಾಂತಿಕ ಮತ್ತು ಕಾನೂನು ಕಟ್ಟಲೆಗಳ ಭಿನ್ನತೆಯುಂಟು. ಅಷ್ಟಾಗಿಯೂ ವರ್ಗಗಳು ಒಂದೇ ತೆರನಾದವಲ್ಲ, ಆಂತರಿಕವಾಗಿ ವಿಭಜನೆ ಮತ್ತು ವೈವಿಧ್ಯತೆ ಅವುಗಳಲ್ಲಿ ಇರುತ್ತವೆ. ದುಡಿಮೆ ಎಂಬುದು ಮಾರ್ಕ್ಸ್‌ಗೆ ಕೇವಲ ಒಂದು ಆರ್ಥಿಕ ವಿಚಾರವಲ್ಲ. ಅದರಲ್ಲಿ ಪ್ರಕೃತಿಯನ್ನು ಕುರಿತ ಸಿದ್ಧಾಂತ ಅಡಗಿದೆ, ಮಾನವ ಅಗತ್ಯಗಳಿವೆ, ಸಾಮಾಜಿಕ ಸಹಕಾರ ಮತ್ತು ವೈಯ್ಯಕ್ತಿಕ ಪೂರೈಕೆಗಳು, ಎಲ್ಲಾ ಸೇರಿವೆ. ನಮ್ಮ ಇಂದಿನ ಮಾಧ್ಯಮಗಳು ''ಆರ್ಥಿಕ'' ಎಂದಾಗ ಇವನ್ನೆಲ್ಲಾ ಗಣನೆಗೆ ತೆಗೆದುಕೊಳ್ಳುವುದಿಲ್ಲ. ದುಡಿಮೆಯಲ್ಲಿ ಲಿಂಗಭೇದ, ನೆಂಟಸ್ತನ, ಲೈಂಗಿಕತೆ, ಮುಂತಾದವೂ ಇವೆ. ಎಲ್ಲಕ್ಕೂ ಮೊದಲು, ಸ್ವತಃ ದುಡಿಮೆಗಾರರು ಬಂದದ್ದೆಲ್ಲಿಂದ, ಅವರ ಜೀವನ ನಿರ್ವಹಣೆ ಹೇಗೆ ಮತ್ತು ಅಂತಃಕರಣದ ವಿಪುಲತೆ ಅವರಿಗೆಲ್ಲಿಂದ ದೊರೆಯುತ್ತದೆ ? ಉತ್ಪಾದನೆಯು ನಿರ್ದಿಷ್ಟ ಸ್ವರೂಪ ಹೊಂದಿದೆ, ಅದಕ್ಕೆ ಸಾಮಾಜಿಕ ಅರ್ಥವಿದೆ. ದುಡಿಮೆಯು ಮಾನವ ಜೀವಿಗಳದ್ದು, ಅವರು ವಿಶಿಷ್ಟ ರೀತಿಯ ಪ್ರಾಣಿಗಳು. ಆದ್ದರಿಂದ ದುಡಿಮೆಯು ಕೇವಲ ತಾಂತ್ರಿಕವಲ್ಲ, ಯಾಂತ್ರಿಕವಲ್ಲ, ಭಗವಂತನ ಶ್ಲಾಘನೆ, ತಾಯ್ನಾಡಿನ ವೈಭವ, ಕುಡಿತಕ್ಕೆ ಬೇಕಾದ ಕಾಸು, ಎಲ್ಲಾ ಅದರಲ್ಲಿವೆ. ಅಂದರೆ, ಆರ್ಥಿಕ ಎಂಬುದರ ಹಿಂದೆ ಬೇರೆ ಹತ್ತಾರು ಸಂಗತಿಗಳಿವೆ. ಅದು ಕೇವಲ ಮಾರುಕಟ್ಟೆಯ ವೈಪರೀತ್ಯಗಳಲ್ಲ, ನಾವು ಮಾನವ ಜೀವಿಗಳಾಗುವುದು ಹೇಗೆಂಬುದು ಅದರ ಸಾರ. ಸುಮ್ಮನೆ ಸ್ಟಾಕ್ ಎಕ್ಸ್‌ಚೇಂಜ್‌ಗೆ ನುಗ್ಗಿ ಹಣ ಮಾಡುವುದು ಇಲ್ಲವೇ ಕಳೆದುಕೊಳ್ಳುವುದಷ್ಟೇ ಆರ್ಥಿಕವಲ್ಲ, ಲೈಂಗಿಕತೆ ಹೇಗೆ ಕೇವಲ ವೈಯ್ಯಕ್ತಿಕವಲ್ಲವೋ ಹಾಗೆ ವರ್ಗಗಳು ಕೇವಲ ಆರ್ಥಿಕ ಬಣಗಳಲ್ಲ.

ಹಣವನ್ನು ನಾಣ್ಯರೂಪದಲ್ಲಿ ಒಂದೆಡೆ ಕೂಡಿಸಿಡಿ : ಅವನ್ನು ಸುಂದರವೆಂದು ಮೆಚ್ಚಬಹುದು ಇಲ್ಲವೇ ಕರಗಿಸಿ ಅದರ ಖನಿಜತ್ವದ ಲಾಭ ಪಡೆಯಬಹುದು. ಹಣವೆಂದರೆ ಮಾನವ ಅಸ್ತಿತ್ವವನ್ನು ಆರ್ಥಿಕವನ್ನಾಗಿಸುವ ವಸ್ತು. ಆ ಒಂದು ನಾಣ್ಯದಲ್ಲಿ ಮಾನವ ಸಾಧ್ಯತೆಗಳ ಎಷ್ಟೊಂದು ಸಂಪತ್ತು ಶೇಖರಗೊಂಡಿದೆ ! ಹಣಕ್ಕಿಂತಲೂ ಮೌಲಿಕವಾದುವು ಜೀವನದಲ್ಲಿ ಬೇಕಾದಷ್ಟಿವೆ, ಆದರೆ ಆ ಎಲ್ಲ ''ಬೇಕಾದಷ್ಟು ಗಳು'' ದೊರೆಯುವುದು ಹಣದಿಂದ ! ಹಸಿವಿನಿಂದ ಬಳಲಿ ಬಿದ್ದು ಸಾಮಾಜಿಕ ಸಂಕೋಚ ಬೇಡವೆಂದಾದರೆ ಹಣದಿಂದ ಇಷ್ಟವೆನಿಸುವ ಸಂಬಂಧಗಳನ್ನು ಬೆಳೆಸಿಕೊಳ್ಳಲು ಅಡ್ಡಿಯಿಲ್ಲ. ಖಾಸಗಿತನ, ಆರೋಗ್ಯ, ಶಿಕ್ಷಣ, ಸೌಂದರ್ಯ, ಸಾಮಾಜಿಕ ಘನತೆ, ಗೌರವ, ಸ್ವಾತಂತ್ರ್ಯ, ವಿಜಯನಗರದ ಅರಮನೆ, ಹೀಗೆ ಯಾವುದು ಬೇಕಾದರೂ ಹಣದಿಂದ ಕೊಳ್ಳಬಹುದು. ಹಿರಣ್ಣಯ್ಯನವರ ''ಝಣ ಝಣ'' ರೂಪಾಯಿ ನೆನೆಸಿಕೊಳ್ಳಿ, ಮಾರ್ಕ್ಸ್ ಹಣದ ರಸತಂತ್ರವನ್ನು ನಿರೂಪಿಸುವುದು ಅರ್ಥ ವಾಗುತ್ತದೆ. ಸಾಮಾನ್ಯ ಖನಿಜವನ್ನು ಚಿನ್ನವನ್ನಾಗಿಸುತ್ತದೆ ಎಂದು ಹೇಳಲಾಗುವ ರಸತಂತ್ರಕ್ಕೆ ಸಮವಾದ್ದು ಹಣ, ಎನ್ನುತ್ತಾನೆ ಮಾರ್ಕ್ಸ್. ರಾಮಕೃಷ್ಣ ಪರಮಹಂಸರು ಒಂದು ದಿನ, ಒಮ್ಮೆ, ಒಂದಷ್ಟು ನಾಣ್ಯಗಳನ್ನು ನದಿಗೆ ಎಸೆದು ಹಣ ದಿಂದ ವಿಮುಕ್ತಿ ಪಡೆದುದಾಗಿ ಭ್ರಮಿಸುತ್ತಾರೆ; ಮಾರನೆಯ ದಿನದ ರಸಗುಲ್ಲಾಕ್ಕೆ ಹಣ ನೀಡಿಯೇ ತೀರಬೇಕು !

ಹೋಗಲಿ, ನಾಣ್ಯಗಳು ಕಚ್ಚಾ ಅರ್ಥಶಾಸ್ತ್ರ ಎನ್ನಬಹುದೆ ? ಆದರೆ ಆರ್ಥಿಕತೆ ಎಂದೂ ''ಕಚ್ಚಾ'' ರೂಪದಲ್ಲಿ ಪ್ರಕಟಗೊಳ್ಳದು. ಹಣಕಾಸು ವಿಶ್ಲೇಷಣೆಗೆ ಮುಡಿಪಾದ ಮಾಧ್ಯಮಗಳು ಚಿತ್ರಿಸುವ ''ಆರ್ಥಿಕತೆ'' ಎಂಬುದು ಒಂದು ಬಗೆಯ ವಿಸ್ಮಯರೂಪದ್ದು. ಅದನ್ನು ಕಣ್ಣುಬಿಟ್ಟು ನೋಡಿದವರಿಲ್ಲ, ಮುಟ್ಟಿ ಆನಂದಿಸಿದವರಿಲ್ಲ. ಸಂಕೀರ್ಣ ಸಾಮಾಜಿಕ ಪ್ರಕ್ರಿಯೆಯ ಒಂದು ಅಮೂರ್ತ ಸಂಗತಿ ಈ ಆರ್ಥಿಕತೆ ಎಂಬುದು. ಸಾಂಪ್ರದಾಯಿಕ ಆರ್ಥಿಕ ಚಿಂತನೆಯಲ್ಲಿ ಆರ್ಥಿಕತೆ ಎಂಬುದನ್ನು ಕುಗ್ಗಿಸಿ ನೋಡುವ ಪದ್ಧತಿ ಇದೆ. ಆದರೆ ಮಾರ್ಕ್ಸ್‌ವಾದವು ಉತ್ಪಾದನೆಯನ್ನು ವಿಸ್ತಾರವಾದ ನೆಲೆಯಲ್ಲಿ ನೋಡುತ್ತದೆ. ಮಾರ್ಕ್ಸ್ ಹೇಳುವ ಇತಿಹಾಸದ ಸಿದ್ಧಾಂತದ ತಿರುಳು ಇದೇ : ಭೌತಿಕ ಸರಕುಗಳು ಕೇವಲ ಭೌತಿಕವಲ್ಲ, ಅವು ಮಾನವ ಕಲ್ಯಾಣದ ಆಶ್ವಾಸನೆ ನೀಡುವ ಸಾಧನಗಳು, ಮಾನವ ಜೀವನದ ಶ್ರೇಷ್ಠ ಕೊಡುಗೆಗಳ ಆಕರ. ಅದಕ್ಕೇ ಜನ ಭೂಮಿ, ಆಸ್ತಿ, ಹಣ ಮತ್ತು ಬಂಡವಾಳಗಳಿಗಾಗಿ ಕಾದಾಡಿ ಸಾಯುವುದು ಸಹ. ಆರ್ಥಿಕತೆಯನ್ನು ಕೇವಲ ಆರ್ಥಿಕವೆಂದು ನೋಡುವವರು ಆರ್ಥಿಕ ಕ್ಷೇತ್ರದ ವೃತ್ತಿನಿರತ ಉದ್ಯೋಗಿಗಳು ಮಾತ್ರ.

ಮಾರ್ಕ್ಸ್‌ವಾದದ ಮೇಲೆ ಇನ್ನೊಂದು ಆರೋಪವಿದೆ : ತನ್ನ ರಾಜಕೀಯ ವಿರೋಧಿಗಳಿಗೂ ಅದಕ್ಕೂ ಅಷ್ಟೇನೂ ವ್ಯತ್ಯಾಸವಿಲ್ಲ, ಎಂದು. ಬಂಡವಾಳಶಾಹಿಯು ಮಾನವನನ್ನು ''ಆರ್ಥಿಕ ಮನುಷ್ಯ''ನನ್ನಾಗಿಸುವಂತೆ ಮಾರ್ಕ್ಸ್‌ವಾದವೂ ಅದನ್ನೇ ಮಾಡುತ್ತದೆ. ಭೌತಿಕ ಉತ್ಪಾದನೆಯನ್ನು ಬಂಡವಾಳಶಾಹಿಯು ದೇವತೆಯ ಪಟ್ಟಕ್ಕೇರಿಸುವಂತೆ ಮಾರ್ಕ್ಸ್ ಸಹ ಮಾಡುತ್ತಾನೆ. – ಇದು ಆಪಾದನೆ. ಆದರೆ ಅದು ಹುರುಳಿಲ್ಲದ್ದು. ಮಾರ್ಕ್ಸ್‌ನ ಪ್ರಕಾರ ಯಾವುದನ್ನು ಉತ್ಪಾದನೆಯೆಂದು ಸಾಮಾನ್ಯವಾಗಿ ಪರಿಗಣಿಸುತ್ತಾರೋ ಅದು ಉತ್ಪಾದನೆಯೇ ಅಲ್ಲ. ಅದು ನೈಜ ಉತ್ಪಾದನೆ ಎನಿಸಿ ಕೊಳ್ಳಲು ಅರ್ಹವಾಗುವುದು ಜನತೆಯು ಅದನ್ನು ಸ್ವತಂತ್ರವಾಗಿ, ಅದಕ್ಕಾಗೆಂದೇ, ಉತ್ಪಾದಿಸಿದಾಗ ಮಾತ್ರ. ಅದು ಕಮ್ಯುನಿಸಂ ಅಸ್ತಿತ್ವದಲ್ಲಿದ್ದಾಗ ಮಾತ್ರ ಶಕ್ಯ. ಅದೊಂದು ಕಲ್ಪನೆ ಆಗಿಹೋಯಿತಲ್ಲಾ ಎಂದರೆ, ಅದರ ನೈಜತೆಯ ಚಿತ್ರಣವನ್ನು ಕಲಾಪ್ರಪಂಚದ ಉತ್ಪಾದನೆಯ ರೂಪದಲ್ಲಿ ಕಾಣಬಹುದು. ಮಾರ್ಕ್ಸ್‌ನ ಮಾತನ್ನೇ ನೋಡೋಣ : ''ಜಾನ್ ಮಿಲ್ಟನ್ (ಅಥವಾ ವಾಲ್ಮೀಕಿ) ಪ್ಯಾರಡೈಸ್ ಲಾಸ್ಟ್ (ಅಥವಾ ರಾಮಾಯಣ) ಏಕೆ ಬರೆಯುತ್ತಾನೆ ? ರೇಷ್ಮೆ ಹುಳು ರೇಷ್ಮೆಯನ್ನೇಕೆ ಉತ್ಪಾದಿಸುತ್ತದೆಯೆಂಬ ಪ್ರಶ್ನೆಗೆ ಸಮಾನ ಇದು. ಅದು ಆಯಾ ವ್ಯಕ್ತಿಗಳ (ರೇಷ್ಮೆ ಹುಳುವಿನ) ಸ್ವಭಾವ ಕ್ರಿಯೆ.'' ಕಲೆಯಲ್ಲಿ ದುಡಿಮೆಯು ಪರವಶವಾಗಿಲ್ಲ. ಅದು ಮಾರ್ಕ್ಸ್‌ನ ಬರಹ ಇದ್ದಂತೆ : ಅದು ಅವನ ಸ್ವಭಾವ ಕ್ರಿಯೆಯ ಫಲ; ಅದನ್ನು ತೀರಾ ಮಗ್ನನಾಗಿ, ಪೂರ್ತಿ ಮನಸ್ಸಿಟ್ಟು, ಸೊಗಸು ಆವಿರ್ಭಾವವಾಗಲೆಂದು ಮಾಡಿದ ಕೆಲಸ. ಈ ಮಾರ್ಕ್ಸ್‌ಗೆ ಕಲೆಯು ಕೇವಲ ಮೇಲ್ಮೈನ ಆಸಕ್ತಿ ಯಾಗಿರಲಿಲ್ಲ. ಅವನು ಭಾವಗೀತೆಗಳನ್ನು ರಚಿಸಿದ,

ಹಾಸ್ಯಪ್ರಧಾನ ಕಾದಂಬರಿಯೊಂದನ್ನು ಬರೆದ, ಒಂದು ಗೀತನಾಟಕವನ್ನು ಅರ್ಧದಷ್ಟು ಬರೆದು ತೊರೆದ, ಮತ್ತು ಕಲೆ ಹಾಗೂ ಮತಧರ್ಮ ಕುರಿತ ಗ್ರಂಥವನ್ನು ಭಾಗಶಃ ಬರೆದ. ಕಡೆಯದು ಈವರೆಗೆ ಪ್ರಕಟವಾಗಿಲ್ಲ. ವಿಶ್ವಸಾಹಿತ್ಯದ ಪರಿಚಯ ಅವನಿಗೆ ಅಗಾಧವಾಗಿತ್ತು, ಸೌಂದರ್ಯ ಶಾಸ್ತ್ರದ ಗ್ರಂಥವೊಂದನ್ನು ರಚಿಸಲು ಮುಂದಾಗಲಿದ್ದ.

ಮಾನವ ದುಡಿಮೆಯು ಸಂತೃಪ್ತಿ ಉಂಟುಮಾಡ ಬೇಕಾದರೆ ಅದು ಬಲವಂತಕ್ಕೆ ಕಟ್ಟುಬಿದ್ದು ಮಾಡಿದಂಥದಾಗ ಕೂಡದು. ಹೊಟ್ಟೆಗಿಲ್ಲವಲ್ಲಾ ಎಂದು ದುಡಿಯುವುದು ಸಹ ಒಂದು ಬಲವಂತವೇ. ಜೊತೆಗೆ, ವರ್ಗ ಸಮಾಜದಲ್ಲಿ ದುಡಿಮೆಯು ದುಡಿಮೆಯ ಸಂತೋಷಕ್ಕಾಗಿ ಇರುವುದಿಲ್ಲ, ಬೇರಾರದೋ ಲಾಭ ಮತ್ತು ಹಿತಾಸಕ್ತಿಗಾಗಿನ ದುಡಿಮೆ ಅದು. ಮಾರ್ಕ್ಸ್ ಆಗಲಿ ಅರಿಸ್ಟಾಟಲ್ ಆಗಲಿ ಒಳ್ಳೆಯ ಜೀವನದಲ್ಲಿ ದುಡಿಮೆಯು ದುಡಿಮೆಯ ಸಂತೋಷಕ್ಕಾಗಿ ಇರಬೇಕೆಂದು ಬಯಸುತ್ತಾರೆ : ನಾವು ನಿಶ್ಚಿಂತೆಯಿಂದ ಕೂತು ಸ್ವಸಂತೋಷಕ್ಕಾಗಿ ಸಂಗೀತ ಕೇಳುವಂತೆ. ಒಂದು ಲೇಖನ ಬರೆಯಲು ನಾಲ್ಕು ಪುಸ್ತಕಗಳನ್ನೋದುವುದು ಸಹ ಅಂತಹ ದುಡಿಮೆಯಲ್ಲಿ. 'ಮುದ್ರಾರಾಕ್ಷಸ' ನಾಟಕ ಏಕೆ ಓದುತ್ತೇನೆ ? ಓದಲು, ಅಷ್ಟೆ; ಅದಕ್ಕೆ ಬೇರೆ ಕಾರಣ ಬೇಕಿಲ್ಲ. ಅದಕ್ಕೆ ಸ್ವಯಂ ತೃಪ್ತಿಯಷ್ಟೇ ಪ್ರೇರಣೆ. ಮಾನವನಾಗಿ ಅಂತಹ ಸ್ವಯಂ ತೃಪ್ತಿ ಪಡೆಯಲು, ಅದೊಂದು ಜವಾಬ್ದಾರಿಯ ನಿರ್ವಹಣೆ, ಆಚರಣೆ, ಆದೇಶ, ಅವಶ್ಯಕತೆ, ಭೌತಿಕ ಅಗತ್ಯ, ಸಾಮಾಜಿಕ ಪ್ರಯೋಜನ, ಭಗವಂತನ ಭಯ, ಎಂಬ ಯಾವ ಕಟ್ಟುಪಾಡೂ ಇರಕೂಡದು. ಅದು ವಿಷ್ಣು ಸಹಸ್ರನಾಮದ ಪಠನೆಯಂತಲ್ಲ, ತರಗತಿಯಲ್ಲಿ ಬೋಧಿಸಲು ಓದಿಕೊಳ್ಳುವ ಬಾಣನ ಕಾದಂಬರಿ ಯಂತೆಯೂ ಅಲ್ಲ. ನಾನು ಯಾರದೋ ಜೊತೆಯಲ್ಲಿದ್ದು ಆನಂದಿಸುತ್ತೇನೆ. ಅದು ಮಾನವ ಸಹಜ ಲಕ್ಷಣ, ಅಷ್ಟೆ. ನಿರ್ಬಂಧದಿಂದ ಜೊತೆಯಲ್ಲಿರುವುದಲ್ಲ. ಹಾಗೆ ಒಂದು ದಿನ ಕುಂಬಳಕಾಯಿ ಸಹ ಬೆಳೆಯಬಹುದು. ಅದು ಮತ್ತು ಸಂಗಡಿಗರೊಂದಿಗಿನ ಆನಂದ ಒಂದೇ ರೀತಿಯವು.

ರಾಜಕೀಯ ಬದಲಾವಣೆಗಳಿಗೆ ಮಾನವ ಸೌಹಾರ್ದತೆ ಅವಶ್ಯಕ. ಆದರೆ ಸೌಹಾರ್ದತೆಗೆ ಸೌಹಾರ್ದಕ್ಕಿಂತಲೂ ಬೇರೊಂದು ಕಾರಣ ಅನವಶ್ಯಕ. ಮಾರ್ಕ್ಸ್ ತನ್ನ ಆರ್ಥಿಕ ಮತ್ತು ತತ್ತ್ವಶಾಸ್ತ್ರೀಯ ಹಸ್ತಪ್ರತಿಗಳು ಎಂಬ ಗ್ರಂಥದಲ್ಲಿ ಬರೆದ ಆಹ್ಲಾದಕರ ಮಾತುಗಳನ್ನು ನೋಡಿ : ''ಕಮ್ಯುನಿಸ್ಟ್ ದುಡಿಮೆಗಾರರು ಒಂದೆಡೆ ನೆರೆದಾಗ ಅವರ ತಕ್ಷಣದ ಉದ್ದೇಶ ಬೋಧನೆ, ಪ್ರಚಾರ, ಇತ್ಯಾದಿ. ಆದರೆ ಅದರಿಂದ ಹೊಸದೊಂದು ಅಗತ್ಯದ ಅರಿವು ಅವರಿಗುಂಟಾಗುತ್ತದೆ, ಅದು ಸಮಾಜದ ಅಗತ್ಯ ಎಂಬುದು. ಮೊದಲಿಗೆ ಒಂದು ಸಾಧನ, ಆಮೇಲೆ ಅದು ಗುರಿ. ತಿನ್ನುವುದು, ಕುಡಿಯುವುದು, ಧೂಮಪಾನ, ಇವೆಲ್ಲಾ ಕ್ರಮೇಣ ಜನರನ್ನು ಒಟ್ಟಾಗಿ ತರುವ ಸಾಧನಗಳಾಗಿರದೆ ಬೇರೆಯೇ ಆಗುತ್ತವೆ. ಜೊತೆಗಾರಿಕೆ, ಸಂಘಟನೆ, ಸಂಭಾಷಣೆ, ಎಲ್ಲಕ್ಕೂ ಸಾಮಾಜಿಕ ಗುರಿ ಯುಂಟು; ಆದರೆ ಅವು ಕ್ರಮೇಣ ಅವಕ್ಕಾಗಿಯೇ ವಿನಾ ಬೇರೇನೋ ಗುರಿ ಸಾಧಿಸಲು ಅಲ್ಲ ಎಂಬಂತಾಗುತ್ತವೆ. ಮಾನವ ಸೋದರಿಕೆ ಎಂಬುದು ಕೇವಲ ಬಾಯಿಮಾತಿನ ನೀರಸ ಪದಗುಚ್ಛವಲ್ಲ, ಅದೊಂದು ಸತ್ಯ; ಅದರಲ್ಲಿ ಮಾನವನ ಔನ್ನತ್ಯ ತೋರಿಬರುತ್ತದೆ.''

ಹಾಗಿದ್ದರೆ ಉತ್ಪಾದನೆಯೆಂದರೇನು ? ಅಸ್ತಿತ್ವದಲ್ಲಿ ಇರುವುದನ್ನು, ಅಂದರೆ ''ಸತ್''ಅನ್ನು, ಬದಲಾಯಿಸುತ್ತಾ ಮಾನವ ತನ್ನ ಸ್ವಂತದ ಅಭೂತಪೂರ್ವ ಶಕ್ತಿಯನ್ನು ಅಭಿವ್ಯಕ್ತಗೊಳಿಸುವುದು ಉತ್ಪಾದನೆ. *ಗ್ರುಂಡ್ರಿಸ್* ಗ್ರಂಥದಲ್ಲಿ ಮಾರ್ಕ್ಸ್ ಹೇಳುತ್ತಾನೆ, ''ಮಾನವನ ಸೃಷ್ಟ್ಯಾತ್ಮಕ ಅಂತಶ್ಶಕ್ತಿಗೆ ಪೂರ್ಣ ಅಭಿವ್ಯಕ್ತಿ ನೀಡುವುದೇ ನೈಜ ಸಂಪತ್ತು. ...ಅದರಲ್ಲಿ ಮಾನವ ಶಕ್ತಿಯ ಎಲ್ಲ ಬೆಳವಣಿಗೆಯೂ, ಬೇರಾವುದೇ ಮಾಪನಕ್ಕೆ ಹೊರತಾಗಿ, ತನ್ನ ಅಭಿವ್ಯಕ್ತಿಗಾಗಿಯೇ ಇರುತ್ತದೆ.'' ಅದಕ್ಕೆ ಬೇರೊಂದು ಗುರಿ ಅನಗತ್ಯ. ತನ್ನ ಕ್ಯಾಪಿಟಲ್‌ನಲ್ಲಿ ಅವನು ಬರೆಯುತ್ತಾನೆ : ''ಇದು ಆಗಿಬರಲು ಸಾಧ್ಯವಾಗುವುದು ವರ್ಗ ಸಮಾಜವು ಅಂತ್ಯಗೊಂಡಾಗ. ಆಗ ಮಾನವ ಶಕ್ತಿಯ ಬೆಳವಣಿಗೆಯು ಸ್ವೋಪಜ್ಞತೆಯ ಅಭಿವ್ಯಕ್ತಿ, ಅಷ್ಟೆ; ಸ್ವಾತಂತ್ರ್ಯದ ನಿಜವಾದ ಶಕೆ ಆರಂಭಗೊಳ್ಳುವುದು ಆಗಲೇ.''

ಅಂದರೆ, ಮಾರ್ಕ್ಸ್‌ನ ಪ್ರಕಾರ 'ಉತ್ಪಾದನೆ' ಎಂಬುದು ಸ್ವಯಂ ಸಂತೃಪ್ತಿಯ ನೂರಾರು ಕ್ರಿಯೆಗಳಷ್ಟು ವ್ಯಾಪಕವಾದ್ದು: ಕೊಳಲು ನುಡಿಸುವುದು, ಹಲಸಿನ ಹಣ್ಣು ತಿನ್ನುವುದು, ವ್ಯಾಸ ಭಾರತದ ಬಗ್ಗೆ ಚರ್ಚಿಸುವುದು, ಒಂದು ಬುಗುರಿ ಮಾಡುವುದು, ಅತ್ತಕಲರಿ ನಾಟ್ಯ ಮಾಡುವುದು, ಗೀತೆಯನ್ನು ಕುರಿತು ಭಾಷಣ ಮಾಡುವುದು, ರಾಜಕೀಯದಲ್ಲಿ ಭಾಗ ವಹಿಸುವುದು, ಮಕ್ಕಳೊಡನೆ ಆಟವಾಡುವುದು, ಹೀಗೆ ಯಾವುದೂ ಆಗಬಹುದು. ಉತ್ಪಾದನೆಗೆ ಮಾಂಸಖಂಡಗಳ ಪ್ರಯೋಗ ಇರಲೇಬೇಕೆಂದೇನೂ ಇಲ್ಲ. ಹೋಟೇಲಿನಲ್ಲಿ ಕೆಲಸ ಮಾಡುತ್ತಾ ಮಸಾಲೆ ದೋಸೆ ಕಟ್ಟಿಕೊಡುವುದಷ್ಟೇ ದುಡಿಮೆಯಲ್ಲ, ಅದೇ ಸ್ವಯಂ ಸಂತೃಪ್ತಿಯ ಅಭಿವ್ಯಕ್ತಿಯಲ್ಲ. ಪ್ರಾಚೀನ ಗ್ರೀಕ್ ಭಾಷೆಯಲ್ಲಿ ''ಪ್ರಾಕ್ಸಿಸ್'' ಎಂಬ ಪದವಿದೆ. ಅದರರ್ಥ ಮುಕ್ತವಾಗಿ, ಸ್ವಯಂಸಿದ್ಧಿಗಾಗಿ ಕ್ರಿಯಾಶೀಲ ವಾಗುವುದು, ಎಂದು. ಸಾಮಾನ್ಯವಾಗಿ ಬಳಸಲಾಗುವ ಪದ ''ದುಡಿಮೆ'' ಎಂಬುದರಲ್ಲಿ ಈ ಅಂಶವಿರುವುದಿಲ್ಲ. ಒಬ್ಬ ಗುಲಾಮನು ಮಾಡುತ್ತಿದ್ದ ಕೆಲಸಕ್ಕೆ ಭಿನ್ನವಾಗಿ ''ಸ್ವಯಂ ಸಿದ್ಧಿಯ ಕ್ರಿಯೆ'' ಎಂಬರ್ಥದಲ್ಲಿ 'ಪ್ರಾಕ್ಸಿಸ್' ಬಳಕೆಯಾಗು ತ್ತಿತ್ತು. ಅದು ಒಬ್ಬ ಸ್ವತಂತ್ರನಾದ ವ್ಯಕ್ತಿಯ ಚಟುವಟಿಕೆ.

ಆದರೆ ಇಲ್ಲೊಂದು ವಿಚಿತ್ರವಿದೆ : ಸಂಕುಚಿತಾರ್ಥದ ಆರ್ಥಿಕ ಕ್ರಿಯೆಗಳಲ್ಲಿ ತೊಡಗಿಯೇ ನಾವು ಆರ್ಥಿಕತೆಯನ್ನು ಮೀರಿ ಪಾರಾಗಲು ಸಾಧ್ಯ. ಕೃಷಿ ಮಾಡದೆ ಕಾಲಿದಾಸನನ್ನು ಸವಿಯುವುದು ಅಸಾಧ್ಯ. ಬಂಡವಾಳಶಾಹಿಯು ಕಲೆ ಹಾಕಿಕೊಂಡಿರುವ ಸಂಪನ್ಮೂಲಗಳನ್ನೆಲ್ಲಾ ಬೇರೆ ರೀತಿಯಲ್ಲಿ ತೊಡಗಿಸುವ ಮೂಲಕ ಸಮಾಜವಾದವು ಆರ್ಥಿಕತೆಯನ್ನು ಗೌಣಗೊಳಿಸುತ್ತಾ ಸಾಗುತ್ತದೆ. ಆರ್ಥಿಕತೆಯು ಇಲ್ಲವಾಗು ವುದಿಲ್ಲ, ಆದರೆ ಎಲ್ಲೆಲ್ಲೂ ಅದು ಮೂಗು ತೂರಿಸುವುದಿಲ್ಲ. ಉತ್ಪಾದಿತ ಸರಕುಗಳು ಸಮೃದ್ಧವೆನಿಸುವುದು ಯಾವಾಗ ಸಾಧ್ಯ ? ನಿರಂತರವಾಗಿ ಹಣದ ಯೋಚನೆಯನ್ನೇ ಮಾಡುತ್ತಿರಬೇಕಾದ ಸಂಭವವು ಇಲ್ಲದಾದಾಗ. ಆಗ ಭಾರ ಎನಿಸುವ ಕೆಲಸದ ಬೆನ್ನತ್ತಿಹೋಗಬೇಕಾಗಿಲ್ಲ, ಖುಷಿಯೆನಿ ಸಿದರೆ ಉಪನಿಷತ್ತುಗಳನ್ನು ಓದುತ್ತಾ ಹರ್ಷಿಸಬಹುದು. ಇದು ಮಾರ್ಕ್ಸ್‌ನ ನಿಜವಾದ ದೃಷ್ಟಿ: ಆರ್ಥಿಕತೆಗೆ ಬೇತಾಳದಂತೆ ಅಂಟಿಕೊಂಡಿರುವವನು ಅವನಲ್ಲ, ಅದು ಬಂಡವಾಳಶಾಹಿಯ ಪ್ರವೃತ್ತಿ. ಮಾರ್ಕ್ಸ್ ಅದನ್ನು ಮಾನವ ಸಾಧ್ಯತೆಗಳ ಕುಬ್ಜೀಕರಣವೆಂದು ಭಾವಿಸಿದ್ದ. ಆರ್ಥಿಕತೆಗೆ ಅಷ್ಟೊಂದು ಸಮಯ ಮತ್ತು ಶಕ್ತಿಯನ್ನು ವ್ಯಯಿಸುವ ಅಗತ್ಯ ಇರದಂತಹ ಸಮಾಜವನ್ನು ಮಾರ್ಕ್ಸ್ ಪರಿಭಾವಿಸಿಕೊಂಡ.

ನಮ್ಮ ಪೂರ್ವಜರು ಭೌತಿಕ ವಿಷಯಗಳ ಬಗ್ಗೆ ಸದಾ ಕಾತುರತೆಯಿಂದ ತಲ್ಲೀನರಾಗಬೇಕಾಗಿದ್ದುದು ಅನಿವಾರ್ಯ ವಾಗಿತ್ತು. ನಮ್ಮ ಉತ್ಪಾದನೆಯಲ್ಲಿ ಮಿಗುತಾಯವು ತೀರಾ ನಗಣ್ಯ ಪ್ರಮಾಣದಲ್ಲಿದ್ದಾಗ, ಅಥವಾ ಮಿಗುತಾಯವೇ ಇಲ್ಲದಂತಿದ್ದರೆ, ಕಠಿಣಶ್ರಮವೊಂದರಲ್ಲೇ ಮುಳುಗಿರ ಬೇಕಾದ್ದು ಅಪರಿಹಾರ್ಯ. ಹಾಗೆ ಶ್ರಮಿಸದಿದ್ದರೆ ವ್ಯಕ್ತಿಯ ನಾಶ, ಅಷ್ಟೆ. ಬಂಡವಾಳಶಾಹಿಯ ಹುಳುಕುಗಳೇನೇ ಇರಲಿ, ದುಡಿಯುವವರ ಶ್ರಮದಿಂದ, ಸಂಪನ್ಮೂಲಗಳ ವೃದ್ಧಿಯಿಂದ, ಮತ್ತು ತಂತ್ರಜ್ಞಾನದ ಅಪಾರ ಬೆಳವಣಿಗೆಯಿಂದ, ಅದು ಹೇರಳವಾಗಿ ಮಿಗುತಾಯವನ್ನು ಸೃಷ್ಟಿಸುವ ಹಂತವನ್ನು ಮುಟ್ಟಿದೆ. ಅದರಿಂದಾಗಿ ಸಾಕಷ್ಟು ಹೆಚ್ಚಿನ ವಿರಾಮ ದೊರಕಲು ಸಾಧ್ಯವಿದೆ. ಆದರೆ ಅದು ಸಂಪತ್ತನ್ನು ಸೃಷ್ಟಿಸುವ ವಿಧಾನದಲ್ಲಿ ಒಂದು ವ್ಯಂಗ್ಯವಿದೆ : ಅದಕ್ಕೆ ಸದಾ ಕೂಡಿ ಹಾಕಿಕೊಳ್ಳುವ, ವರ್ಧಿಸುತ್ತಿರಬೇಕಾದ, ಲಕ್ಷಣಗಳು ಅಂಟಿ ಕೊಂಡಿವೆ. ಆದ್ದರಿಂದ ದುಡಿಮೆಯೂ ಸದಾ ಇರಬೇಕು, ಹೆಚ್ಚಿನ ಮಟ್ಟದಲ್ಲಿರಬೇಕು. ಇನ್ನೂ ದೊಡ್ಡ ವ್ಯಂಗ್ಯವೆಂದರೆ, ಅಪಾರ ಸಂಪತ್ತನ್ನು ಸೃಷ್ಟಿಸುವ ಬಂಡವಾಳಶಾಹಿಯು ಅಪಾರ ಬಡತನ ಮತ್ತು ಸಂಕಟಗಳನ್ನು ಸೃಷ್ಟಿಸುತ್ತಿರುತ್ತದೆ. ಅದು ತನಗೆ ತಾನೇ ತೊಡರುಂಟುಮಾಡಿಕೊಳ್ಳುವಂತಹ ವ್ಯವಸ್ಥೆ. ಹಲವು ಶತಮಾನಗಳ ಹಿಂದೆ ಮಾನವ ಬೇಟೆಯಾಡಿ ಜೀವನ ಹೊರೆಯುತ್ತಿದ್ದ. ಆಮೇಲೆ ಗುಲಾಮರು, ಊಳಿಗದವರು, ಎಲ್ಲಾ ಬಂದರು. ಅವರಾರಿಗೂ ಮಿಗುತಾಯವು ಗುಡ್ಡೆ ಗುಡ್ಡೆಯಾಗಿ ಬಿದ್ದಿರುವ ಸಂದರ್ಭ ವಿರಲಿಲ್ಲ, ಶ್ರೀಮಂತಿಕೆಯ ಸಾಂದ್ರತೆಯಲ್ಲಿ ಬದುಕುವ ಅನುಕೂಲವಿರಲಿಲ್ಲ. ಆಧುನಿಕ ಮಾನವರಿಗೆ ಅಂತಹ ಸನ್ನಿವೇಶದ ಹೊರೆಯಿಲ್ಲ. ಆದರೂ ಇಂದಿನ ದುಡಿಮೆಗಾರ ಅವನ ಹಿಂದಿನ ದುಡಿಮೆಗಾರರಂತೆ ಶ್ರಮದ ಹೊರೆ ಹೊತ್ತಿದ್ದಾನೆ, ಸಂಕಟದ ಮಡುವಿನಲ್ಲಿ ಸಿಕ್ಕಿಬಿದ್ದಿದ್ದಾನೆ. ಮಹಿಳಾ ದುಡಿಮೆಗಾರರಿಗೆ ಹೊರೆಯು ಇನ್ನೂ ಅಧಿಕ ಮತ್ತು ದುಷ್ಕರ.

ಮಾರ್ಕ್ಸ್ ತನ್ನ ಚಿಂತನೆಯನ್ನು ಹರಿಸಿದ್ದು ಮಾನವ ಸುಖಿಸುವುದನ್ನು ಕುರಿತಂತೆ. ಅವನಿಗೆ ಒಳ್ಳೆಯ ಜೀವನ ವೆಂದರೆ ದುಡಿಮೆರಹಿತವಾದುದಲ್ಲ, ದುಡಿಮೆ ಇರುತ್ತದೆ, ಆದರೆ ಅದಕ್ಕಿಂತಲೂ ಹೆಚ್ಚಾಗಿ ವಿರಾಮವಿರುತ್ತದೆ. ಪ್ರತಿಯೊಬ್ಬರೂ ತಮ್ಮ ಸಿದ್ಧಿಯನ್ನು ಸ್ವತಂತ್ರವಾಗಿ ರೂಪಿಸಿಕೊಳ್ಳುತ್ತಾರೆ. ಅದೂ ''ಉತ್ಪಾದನೆಯ'' ಒಂದು ಮಾದರಿಯೇ; ಆದರೆ ಅದರಲ್ಲಿ ಬಲವಂತದ ಭರಾಟೆ ಇಲ್ಲ. ಪುರುಷರು ಮತ್ತು ಮಹಿಳೆಯರು ತಮ್ಮ ತಮ್ಮ ಆಸಕ್ತಿಗಳನ್ನು ಮುಕ್ತವಾಗಿ ಮುಂದುವರಿಸಿಕೊಂಡು ಹೋಗಲೆಂದು ತಮ್ಮ ಸಮಯವನ್ನು ತಾವೇ ನಿಯಂತ್ರಿಸಿಕೊಳ್ಳುವಂತಿರ ಬೇಕಾದರೆ ವಿರಾಮವು ಮೂಲ ಅವಶ್ಯಕ. ಅದರ ಸಿದ್ಧಿಯು ಮಾನವ ಹಕ್ಕೆಂಬುದು ಮಾರ್ಕ್ಸ್‌ವಾದದ ಮೂಲಸಾರ. ಆದರೆ ನೋಡಿ, ಅಂತಹ ವಿರಾಮ ದೊರೆಯಬೇಕಾದರೆ ನಾವು ಕೆಲಸ ಮಾಡುತ್ತಿರಬೇಕಲ್ಲ! ಸಂಘಟನೆಯ ಕೆಲಸ, ಹೋರಾಟದ ಕೆಲಸ, ಪ್ರಜ್ಞೆ ಬೆಳೆಸಿಕೊಳ್ಳುವ ಕೆಲಸ, ಇವೆಲ್ಲಾ ನಾಳಿನ ಶ್ರೇಯಸ್ಕರ ವಿರಾಮಕ್ಕಾಗಿ.

**ಡಾ|| ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಮಹಮೂದ ಗವಾನನಿಗೆ ಸಿಗದ ಗೌರವ!

**ಕ**ರ್ನಾಟಕ ತುದಿಯಲ್ಲಿರುವ ಬೀದರ ಬೇಸಿಗೆಯಲ್ಲಿ ಕಾದ ಹಂಚು, ಆದರೆ ಇಲ್ಲಿದ್ದ ಮಹಮೂದ ಗವಾನನನ್ನು ನೆನೆದರೆ ಮನಸ್ಸು ತಂಪಾಗಿ ಅರಳುತ್ತದೆ. ಅಂತಹ ಬೆಂಕಿಯಲ್ಲಿ ಹೂವಿನಂತೆ ಅರಳಿ ಜಗತ್ತಿನ ಗಮನವನ್ನು ಸೆಳೆದ ಬಹುಮನಿ ರಾಜ್ಯದ ಮಹಮೂದ ಗವಾನನ ಹೆಸರು ಚಿರಸ್ಥಾಯಿಯಾಗಿದೆ. ಈತನು ಬಹುಮನಿ ರಾಜ್ಯದ ಪ್ರಧಾನ ಮಂತ್ರಿಯಾಗಿ, ಸೈನಿಕನಾಗಿ, ಆ ರಾಜರ ಆಪ್ತಸೇವಕನಾಗಿ ಅವರ ಉನ್ನತಿಗಾಗಿ ಪ್ರಾಮಾಣಿಕವಾಗಿ ದುಡಿದ ಧೀಮಂತ ವ್ಯಕ್ತಿ.

ಬೀದರನ್ನು ನೋಡಿದವರಿಗೆ ಈತನ ನಿಷ್ಠೆ ಮನದಲ್ಲಿ ಸುರುಳಿ ಸುರುಳಿಯಾಗಿ ಕಣ್ಮುಂದೆ ಸುಳಿಯುತ್ತದೆ. ಬಿಜ್ಜಳನ ಮಂತ್ರಿ ಬಸವಣ್ಣನಂತೆ, ಬಹುಮನಿ ಅರಸರ ಮಂತ್ರಿಯಾಗಿ, ಆ ಮಂತ್ರಿಗಿರಿಯನ್ನು ತಲೆಗೇರಿಸಿಕೊಳ್ಳದೆ ಸರಳವಾಗಿ ಬದುಕಿದ ಪ್ರತಿಭಾ ಸಂಪನ್ನ. ಇರಾನ್‌ನಿಂದ ಬೀದರಿಗೆ (ಕ್ರಿ. ಶ. ೧೪೧೧) ಬಂದದ್ದು ವ್ಯಾಪಾರಕ್ಕಾದರೂ ಉದ್ದೇಶವು ಬೇರೆಯಾಗಿತ್ತು. ಆಗ ಬೀದರಿನಲ್ಲಿ ಶಹಮುಜೀಬುಲ್ಲಾ ಕಿರಮಾನಿ ಎಂಬ ಹೆಸರಾಂತ ಧಾರ್ಮಿಕ ವ್ಯಕ್ತಿ ಇದ್ದನು. ಅವನನ್ನು ಕಾಣಲು ಬಂದರೂ, ಕನ್ನಡ ನೆಲದ ನೀರು,ಗಾಳಿ ಅವನ ವ್ಯಕ್ತಿತ್ವವನ್ನೆ ಬದಲುಮಾಡಿತು. ಅದು ಕ್ರಿ. ಶ. ೧೪೪೫ರಲ್ಲಿ ಎರಡನೆಯ ಬಹುಮನಿ ಸುಲ್ತಾನ ಅಲ್ಲಾವುದ್ದೀನನಲ್ಲಿ ನಂಬಿಗಸ್ಥ ಅದ್ವಿತೀಯ ವಜೀರ(ಮಂತ್ರಿ)ನನ್ನಾಗಿ ರೂಪಿಸಿತು. ಬೀದರಿನ ರಾಜ್ಯದ ವಿಸ್ತರಣೆಯಲ್ಲಿ ಬಹಳಷ್ಟು ಶ್ರಮಿಸಿ, ಈ ಬಹುಮನಿಯ ಅರಸರಿಂದ ಖ್ವಾಜಾ-ಇ-ಜಹಾನ್, ಲಷ್ಕರಿಯಂತಹ ಬಿರುದುಗಳನ್ನು ಪಡೆದಿದ್ದನು.

ವಿದೇಶಿಗ ಫೆರಿಸ್ತಾನ ''ಭಾರತದಲ್ಲಿ ಬೀದರ ಅತ್ಯಂತ ಸುಂದರ ನಗರ'' ಎಂದಿದ್ದಾನೆ. ಇಂತಹ ಸುಂದರ ಬೀದರ ನಗರದಲ್ಲಿ ಶಿಕ್ಷಣ ಪ್ರೇಮಿಯಾದ ಗವಾನನು ಕ್ರಿ.ಶ. ೧೪೭೨ರಲ್ಲಿ ಬಹುದೊಡ್ಡ ವಿಶ್ವವಿದ್ಯಾಲಯವನ್ನು ಕಟ್ಟಿಸಿದನು. ಆ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಇಂತಹ ವಿದ್ಯಾಲಯವೇ ಇರಲಿಲ್ಲ. ಇದನ್ನು ವಿದೇಶಿ ಪ್ರವಾಸಿಗರು ಮನದುಂಬಿ ಹೊಗಳಿದ್ದಾರೆ. ೨೪೨ x ೨೨೨ ಅಡಿ ವಿಸ್ತಾರವುಳ್ಳ ಇದನ್ನು ಕಟ್ಟಲು ಪರ್ಷಿಯಾ ದೇಶಗಳಿಂದ ಶಿಲ್ಪಿಗಾರರನ್ನು ಕರೆಯಿಸಿದ್ದನು. ಗಟ್ಟಿಯಾದ ತಳಪಾಯವನ್ನು ಹೊಂದಿರುವ ಈ ಕಟ್ಟಡವನ್ನು ಮೂರು ಅಂತಸ್ತುಗಳಲ್ಲಿ ಕಟ್ಟಲಾಗಿದೆ. ಇದರಲ್ಲಿ ಸುಂದರವಾದ ಉಪನ್ಯಾಸ ಮಂದಿರ, ವಸತಿಗೃಹಗಳಿದ್ದವು. ಮುಂಭಾಗದಲ್ಲಿ ಎತ್ತರವಾದ ಮುಗಿಲಿಗೆ ಮುತ್ತಿಡುವ ಎರಡು ಮಿನಾರುಗಳನ್ನು ನಿರ್ಮಿಸಲಾಗಿತ್ತು. ಅದರ ಮುಂಭಾಗದ ಗೋಡೆಗಳ ಮೇಲೆ ಚೀಣಿ ಕಲೆಯ ತಿಳಿಹಸಿರು, ಹಳದಿ ಮತ್ತು ಬಿಳಿ ಬಣ್ಣದ ಕಲಾಕೃತಿಗಳನ್ನು, ಪವಿತ್ರ ಕುರಾನಿನ ಕೆಲವು ಉಕ್ತಿಗಳನ್ನು ಕೆತ್ತಲಾಗಿದೆ. ಈ ಕಲೆಯು ಗಾಳಿ ಮಳೆಗೆ ಸಿಲುಕಿದ್ದರೂ ಇಂದಿಗೂ ಮಾಸದೇ ಉಳಿದಿದೆ.

ಇದು ಇಂದಿನ ಯಾವ ವಿಶ್ವವಿದ್ಯಾಲಯಕ್ಕೂ ಕಡಿಮೆ ಇಲ್ಲದಂತಿತ್ತು. ಇಲ್ಲಿ ಅರಬಿಕ್, ಉರ್ದು ಮತ್ತು ಪರ್ಷಿಯನ್ ಭಾಷೆಗಳಲ್ಲಿ ತರ್ಕಶಾಸ್ತ್ರ, ಗಣಿತ, ವೈದ್ಯಶಾಸ್ತ್ರ ವಿಷಯಗಳನ್ನು ಕಲಿಸಲಾಗುತ್ತಿತ್ತು. ಅವುಗಳನ್ನು ಬೋಧಿಸಲು ಜಗತ್ತಿನ ಹೆಸರಾಂತ ತತ್ವಶಾಸ್ತ್ರ, ಗಣಿತಶಾಸ್ತ್ರ, ಖಗೋಳಶಾಸ್ತ್ರಗಳ ಮಹಾ ಮೇಧಾವಿಗಳು ಹಾಗೂ ವಿಜ್ಞಾನಿಗಳು ಇದ್ದರು. ಇಲ್ಲಿನ ವಿದ್ಯಾರ್ಥಿಗಳಿಗೆ ಮತ್ತು ಮೇಧಾವಿ ಅಧ್ಯಾಪಕರಿಗೆ ಪುಕ್ಕಟೆ ವಸತಿ, ಊಟಗಳೊಂದಿಗೆ ಹಲವಾರು ಸೌಕರ್ಯಗಳನ್ನು ನೀಡುತ್ತಿದ್ದರು. ಶಿಕ್ಷಣ ಕಲಿಯಲು ವಿದ್ಯಾರ್ಥಿಗಳು ಯಾವ ಬಗೆಯ ಶುಲ್ಕವನ್ನೂ ಕೊಡುತ್ತಿರಲಿಲ್ಲ. ಹೊರಗಿನಿಂದ ಬರುವ ಧಾರ್ಮಿಕ ವ್ಯಕ್ತಿಗಳಿಗೂ, ಸಾಧು ಸತ್ಪುರುಷರಿಗೂ ಕೂಡ ವಸತಿ ವ್ಯವಸ್ಥೆಯನ್ನು ಮಾಡಲಾಗಿತ್ತು. ಇದರಲ್ಲಿಯೇ ಒಂದು ಮಸೀದೆ ಮತ್ತು ಅದ್ಭುತವಾದ ಗ್ರಂಥಾಲಯ ಇದ್ದವು. ಅದರಲ್ಲಿ ಸುಮಾರು ೩೦೦೦ ಕೈಬರಹದ ಪ್ರತಿಗಳು ಇದ್ದವೆಂದು ವಿದೇಶಿ ಪ್ರವಾಸಿಗರು ಹೇಳುತ್ತಾರೆ. (ನಂತರ ಅವೆಲ್ಲಾ ಕಾಲನ ದಾಳಿಗೆ ಸಿಕ್ಕಿ ನಾಶವಾದವು). ಈ ಕಾರಣದಿಂದ ಇದು ಆ ದಿನಗಳಲ್ಲಿ ಆದರ್ಶ ಶಿಕ್ಷಣ ಸಂಸ್ಥೆಯಾಗಿ ಪ್ರಸಿದ್ಧಿ ಪಡೆದಿತ್ತು. ಕವಿ ಹೃದಯದ ಗವಾನನು 'ಮಾನುಜಿರುಲ್ ಇನ್‌ಷಾ, ದಿವಾನ್-ಇ-ಆಷರ್ ಮತ್ತು ರಿಯಾಜ್-ಎಲ್-ಇನ್ಷಾ' ಎಂಬ ಕೃತಿಗಳನ್ನು ರಚಿಸಿದ್ದಾನೆ. ಗವಾನನು ಸ್ವತಃ ಗಣಿತ ಮತ್ತು ತತ್ವಶಾಸ್ತ್ರದ ಮೇಧಾವಿಯಾಗಿದ್ದರಿಂದ ಬಹುಮನಿ ಅರಸರ ಮಂತ್ರಿಯಾದರೂ ತನ್ನ ವಿಶ್ರಾಂತಿಯ ವೇಳೆಯಲ್ಲಿ ಈ ವಿದ್ಯಾಲಯದಲ್ಲಿ ವಿದ್ವಾಂಸರೊಂದಿಗೆ ಮತ್ತು ಮಸೀದೆಯಲ್ಲಿ ಕಾಲಕಳೆಯುತ್ತಿದ್ದನು. ಇಂತಹ ಮೇರುಸದೃಶ ವಿಶ್ವವಿದ್ಯಾಲಯವು ಕ್ರಿ. ಶ. ೧೬೯೬ರಲ್ಲಿ ಸಿಡಿಲಿಗೆ ಸಿಲುಕಿ ನಾಶವಾಯಿತು. ಮುಂಭಾಗದಲ್ಲಿರುವ ಎರಡು ಮಿನಾರುಗಳಲ್ಲಿ ಒಂದು ನೆಲ ಕಚ್ಚಿತು. ಇನ್ನೊಂದು ಮಿನಾರು ಅಂದಿನ ಐತಿಹಾಸಿಕ ಶ್ರೀಮಂತಿಕೆಯನ್ನು,

**ಡಾ॥ ಮಲ್ಲಿಕಾರ್ಜುನ ಕುಂಬಾರ**



ಮದರಸಾದ ಮಹಾದ್ವಾರ



ಮಹಮೂದ ಗವಾನನು ನಿರ್ಮಿಸಿದ ಮದರಸಾ (ಬಿ.ಬಿ)

ಮಹಮೂದ ಗವಾನನ ಶಿಕ್ಷಣ ಪ್ರೇಮವನ್ನು ಸಾರುತ್ತಾ ಅದರ ಪ್ರತೀಕವಾಗಿ ಗಗನವನ್ನು ಚುಂಬಿಸುತ್ತಾ ಹಾಗೇ ಅಳಿದುಳಿದು ನಿಂತಿದೆ. ಇದನ್ನು ಅಂದು ರಿಚರ್ಡ್ ಟೆಂಪಲ್ ಎಂಬುವರು 'ದಖ್ಖನ್ನಿನಲ್ಲೇ ಅದ್ವಿತೀಯ ಕಟ್ಟಡ' ಎಂದು ಕರೆದಿದ್ದಾರೆ.

ಬಹುಮನಿ ರಾಜ್ಯದ ಮಂತ್ರಿ ಮತ್ತು ದಂಡನಾಯಕ, ದೊರೆಯ ಅಪ್ರತಿಮ ನಿಷ್ಠಾವಂತ ಸೇವಕನಾಗಿ ಸೇವೆಯನ್ನು ಸಲ್ಲಿಸಿದ, ಬೀದರಿನ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಿದ ಗವಾನನ ರುಂಡವನ್ನು ಅರಸರ ಅರೆಬುದ್ಧಿಯಿಂದ, ಅವನ ಆಸ್ಥಾನದಲ್ಲಿದ್ದ ಮಲ್ಲಿಕ್ ಹಸನ್ ಎಂಬ ಚಾಡಿಕೋರನ ಕಿವಿಮಾತಿನಿಂದ, ದೇಶದ್ರೋಹದ ಆಪಾದನೆಯನ್ನು ಹೊರಿಸಿ ದೊರೆಯ ಎದುರಿನಲ್ಲಿಯೇ ಕ್ರಿ.ಶ. ೧೪೮೧ ಏಪ್ರಿಲ್, ೧೫ರಂದು ಕತ್ತರಿಸಲಾಯಿತು. ಅರಸರ ಜೋಳವಾಳಿ, ವೇಳೆವಾಳಿಯಾಗಿದ್ದ ಮಹಮೂದ ಗವಾನನ ದೇಹವನ್ನು ಬೀದರಿನಿಂದ ಮೂರು ಮೈಲು ದೂರದಲ್ಲಿರುವ ಗೋರನಹಳ್ಳಿಯಲ್ಲಿ ಹೂಳಲಾಯಿತು. ನಂತರ ಅವನು ಅಪರಾಧಿಯಲ್ಲವೆಂದು ರಾಜನಿಗೆ ಅರಿವಾದಾಗ ಕಾಲ ಮಿಂಚಿತ್ತು. ಮೂರನೆಯ ದೊರೆ ಮಹಮ್ಮದ್ ಷಾನು ನೊಂದು ಅದೇ ದುಃಖದಲ್ಲಿ ಮರಣವನ್ನಪ್ಪಿದನು. ಅದರೊಂದಿಗೆ ಬೀದರಿನ ಅವನತಿಯೂ ಆಯಿತು.

ಮಂತ್ರಿಯಾದರೂ ಬಹು ಸರಳ ಜೀವನವನ್ನು ನಡೆಸಿದ ಗವಾನನ ಕೊಲೆಯ ನಂತರ ಅವನು ವಾಸಿಸುತ್ತಿದ್ದ ಮನೆಯನ್ನು ತನಿಖೆ ಮಾಡಿದಾಗ ಸಿಕ್ಕಿದ್ದೇನು?, ಮಣ್ಣಿನ ಮಡಿಕೆ-ಕುಡಿಕೆ, ಹಾಸಿಕೊಳ್ಳಲು ಬಳಸುತ್ತಿದ್ದ ಚಾಪೆ, ಮತ್ತು ಕುರಾನಿನ ಕೆಲವು ಹಾಳೆಗಳು, ವಿದ್ವಾಂಸರಿಗೆ ಬರೆದ ಪತ್ರಗಳು, ಕೆಲವು ಚಿಲ್ಲರೆ ಹಣ ಮಾತ್ರ! ಭ್ರಷ್ಟಾಚಾರದ ಕಡುವೈರಿಯಾದ ಆತನು ವೈಭವ ಜೀವನವೇ ಗೊತ್ತಿಲ್ಲವೆಂಬಂತೆ ಬದುಕಿ ಬಾಳಿದ ಆದರ್ಶ ವ್ಯಕ್ತಿ. ದೀನದಲಿತರ ಗೆಳೆಯನಾಗಿ ಆತನು ಪ್ರತಿ ಶುಕ್ರವಾರ ಬೀದರಿನ ರಸ್ತೆಗಳಲ್ಲಿ ಸಾಮಾನ್ಯ ನಾಗರಿಕರಂತೆ ಜನರ ಸ್ಥಿತಿಗತಿಗಳನ್ನು ತಿಳಿಯಲು ಅಡ್ಡಾಡುತ್ತಿದ್ದನು. ತಾನು ಅನ್ನವನ್ನುಂಡ ರಾಜ್ಯದ ನಿಜವಾದ ಸೇವಕನಂತೆ ಬಾಳಿ, ಕೊನೆಗೆ ನಿರಪರಾಧಿಯಾದರೂ ತನ್ನ ಪ್ರಾಣವನ್ನೇ ಧಾರೆಯೆರೆದನು. ತಾನು ಸಾಯುವಾಗಲೂ ಸಹ ಬಹುಮನಿ ರಾಜ್ಯದ ಹಿತಚಿಂತನೆಯನ್ನೆ ಮಾಡಿದನು.

ಬೀದರಿನ ಅದ್ಭುತ ಚರಿತ್ರೆಯನ್ನು ಬರೆದ ಈತನ ಗೋರಿಯು ಇಂದು ಗೋರನಹಳ್ಳಿಯಲ್ಲಿ ಮಳೆ, ಬಿಸಿಲಿನಲ್ಲಿ ನಿಂತಿದೆ. ಜೀವಂತವಿರುವಾಗ ಎಲ್ಲವನ್ನೂ ತ್ಯಾಗ ಮಾಡಿದ ಅನನ್ಯ ಜೀವಿಯ ಸಮಾಧಿಗಾದರೂ ನೆರಳು ಬೇಡವೆ? ಅದು ಬಯಲಿನಲ್ಲಿ ನಿಂತು, ಇದು ಪ್ರಾಮಾಣಿಕತೆಗೆ ಸಿಕ್ಕ ಪ್ರತಿಫಲವೆಂದು ಸಾರುವಂತಿದೆ, ಏಕೆಂದರೆ ಆತನ ಗೋರಿಕಲ್ಲಿನ ಮೇಲೆ, 'ಇನ್ನೊಸೆಂಟ್ ಮಹಮೂದ್ ಗವಾನ್ ವಾಸ್ ಮರ್ಡರ್ಡ್' ಎಂದು ಬರೆಯಲ್ಪಟ್ಟಿದೆ!



*ಗಾಳಿ ಮಳೆಯಲ್ಲಿ ನಿಂತ ಮಹಮೂದ ಗವಾನನ ಸಮಾಧಿ*

**ಡಾ॥ ಮಲ್ಲಿಕಾರ್ಜುನ ಕುಂಬಾರ**
'ವಚನ', ರಾಜೂರ - ೫೮೨ ೨೩೦, ರೋಣ ತಾಲೂಕು, ಗದಗ ಜಿಲ್ಲೆ

## ಹಸುವೊಂದು...

ರಸ್ತೆ ಬದಿಯಲ್ಲಿ ಹಸುವೊಂದು
ಕಂಬಕ್ಕೊರಗಿ ಮಲಗಿದೆ
ಯಾರದೋ ತಪ್ಪಿಗೆ, ಶಿಕ್ಷೆಗೆ ಗುರಿಯಾಗಿ
ನಿಷ್ಕ್ರಿಯವಾಗಿ ಸತ್ತು ಬಿದ್ದಂತಿದೆ.

ಕಣ್ಣು ಹಾಯುವಷ್ಟು ಉದ್ದಕ್ಕೂ
ಹಸುರು ಹುಲ್ಲುಗಳಿಗೆ ಬೇಲಿಯ ಕಾವಲು
ಹಸುವಿನ ಕಣ್ಣು ಹುಲ್ಲು
ಮೇಯುದಿಲ್ಲವಲ್ಲ...

ನಡೆದು ಸವೆದ ಹುಲ್ಲ
ಚಿಗುರುಗಳ ಮೇಲೆ ಬಾಯಾಡಿಸಿದ್ದಷ್ಟೇ
ಅಷ್ಟರಲ್ಲಿ...! ಇಂಥದೇ ಕಪ್ಪು ಹಸುವಿನ
ಬಿಳಿ ಹಾಲು ಕುಡಿದವರೊಬ್ಬರು
ಪ್ರಮಾದವಶಾತ್ ಡಿಕ್ಕಿ ಹೊಡೆದುಬಿಟ್ಟಿದ್ದಾರೆ.

ಹಸು ವಿಲ ವಿಲ ಒದ್ದಾಡುತ್ತಿದೆ
ಪಾಪ! ಏ.ಸಿ. ಕಾರಿನೊಳಗಿರುವವರಿಗೆ
ತುರ್ತು ಕಾರ್ಯ ಬಾಹುಳ್ಯ
ಎಕ್ಸ್‌ಲೇಟರ್ ಮೇಲೆ ಕಾಲು
ತುಸು ಬಿರುಸಾಗಿಯೇ ಇಟ್ಟಿದ್ದಾರೆ.

ಒದ್ದಾಡಿ ಒದ್ದಾಡಿ ಸುಸ್ತಾದ
ಹಸುವ, ಕಾಗೆ ನೊಣ ಮುತ್ತಿವೆ
ಜಿನುಜಿನುಗಿ ಸುರಿವ ರಕ್ತದಲ್ಲಿ
ಸ್ನಾನ ಮಾಡತೊಡಗಿವೆ.

ಹೃದಯವಂತರು ಅತ್ತಿಂದಿತ್ತ
ಹೋಗುತ್ತಿದ್ದಾರೆ
ಅವರ ಕಣ್ಣು ಕುರುಡಾಗಿಬಿಟ್ಟಿದೆ
ಆದರೆ ಹಸುವಿನ ಹೃದಯ
ಕಲ್ಲಾಗಿ ಬಿಟ್ಟಿದೆ.





**ಸ್ಮಿತ ಅಮೃತರಾಜ್ ಸಂಪಾಜೆ**
'ಹಸಿರು', ಬಾಲಂಬಿ ಅಂಚೆ, ಚೆಂಬು ಗ್ರಾಮ, ಮಡಿಕೇರಿ ತಾಲೂಕು, ಕೊಡಗು - ೫೭೪ ೨೩೪

## ಎಂ. ವಿ. ಮಂಜುನಾಥ್

# ಮೇಷ್ಟ್ರು...!

ಎಲ್ಲರೂ ಬೆಟ್ಟ ಹತ್ತೋದನ್ನ ನೋಡಿ ನನಗೂ ಬೆಟ್ಟ ಹತ್ತಬೇಕು ಅಂತ ಅನ್ನಿಸಿದ್ದು ಅಸಹಜವಾಗಿರಲಿಲ್ಲ...! ಮನೆ-ಶಾಲೆ-ಮಕ್ಕಳು- ಪಾಠ-ಪುಸ್ತಕ-ಪತ್ರಿಕೆ, ಇವೆಲ್ಲದರ ಮಧ್ಯೆ ನನ್ನನ್ನೇ ನಾನು ಮರೆತುಬಿಡೋದು ಒಂದು ಕಡೆಯಾದರೆ; ಯಾರೋ ಕುಹಕಿಗಳು ನನ್ನ ವ್ಯಕ್ತಿತ್ವ ಮತ್ತು ವೃತ್ತಿಗೆ ಕಪ್ಪು ಚುಕ್ಕೆಗಳನ್ನಿಡುವ ಕುತಂತ್ರ ಗಳಲ್ಲಿ ತೊಡಗಿದ್ದಾರೆ, ಅನ್ನೋ ಅನುಮಾನ ಮತ್ತೊಂದು ಕಡೆ. ಇಂತಹ ಒಂದು ಹಿನ್ನೆಲೆ ನನ್ನನ್ನು ಬೆಟ್ಟಕ್ಕೆ ಹತ್ತುವ ಉತ್ಸಾಹದಲ್ಲಿ ತೊಡಗಿಸಿತ್ತಾ...? ಒಂದಂತೂ ನಿಜ. ಚಿಕ್ಕಂದಿನಿಂದಲೂ ಅಷ್ಟೇ...; ಬೆಟ್ಟವನ್ನ ಕಂಡರೆ ನನಗೆ ಎಲ್ಲಿಲ್ಲದ ಅದಮ್ಯ ಪ್ರೀತಿ, ಆಪ್ಯಾಯಮಾನತೆ. ಅಂದು ಅಂಥದ್ದೇ ಒಂದು ಒಲವು ನನ್ನಂತರಾಳದಿಂದ ಒತ್ತರಿಸಿ ಬಂದು ಎಲ್ಲರೊಟ್ಟಿಗೆ ನನ್ನನ್ನೂ ಮೆಟ್ಟಿಸಿತ್ತೋ... ಏನೋ...! ಅವತ್ತಿನ ದಿನಗಳಲ್ಲಾದರೆ ನಿರಾತಂಕವಾಗಿ ನನ್ನೆಲ್ಲಾ ಆತ್ಮವಿಶ್ವಾಸಗಳನ್ನ ಒಗ್ಗೂಡಿಸಿಕೊಂಡು ಜಿಂಕೆಯಂತೆ ಬೆಟ್ಟಕ್ಕೆ ಜಿಗಿದುಬಿಡುತ್ತಿದ್ದೆ. ಆದರೆ ಅಂದು ಯಾಕೋ ಹತ್ತುವ ಉತ್ಸಾಹ ಚಿಮ್ಮುತ್ತಿದ್ದರೂ... ಯಾವುದೋ ವಿಚಿತ್ರ ಅನುಮಾನಗಳು ಮನದಲ್ಲಿ ತುಂಬಿಕೊಂಡು ಕುಸಿದುಬೀಳುತ್ತಿದ್ದೆ. ಬೆಟ್ಟಕ್ಕೆ ಹತ್ತುತ್ತಿದ್ದ ಭಕ್ತಾದಿಗಳೆಲ್ಲಾ, ನನ್ನನ್ನೂ ಅವರ ಆಕಾಂಕ್ಷೆಗಳಲ್ಲೇ ತೇಲಿಸಿಕೊಂಡು 'ದೇವರನ್ನು ನೆನೆಸಿಕೊಂಡು ಹತ್ತಿ, ಏನೂ ಆಗೋದಿಲ್ಲ' ಎನ್ನುವಂತೆ ಮುನ್ನುಗ್ಗುತ್ತಿದ್ದರು. ನನ್ನೊಳಗಿನ ಸಂದಿಗ್ಧತೆಗಳು, ದಿಗ್ಭ್ರಮೆಗಳು ಅವರಿಗೆ ತಾನೆ ಹೇಗೆ ಅರ್ಥವಾಗ್ಬೇಕು...! ಅಥವಾ ದೇವರನ್ನು ನೋಡುವ ಅವರೆಲ್ಲರ ಅದಮ್ಯ ಆಕಾಂಕ್ಷೆಗಳು, ಅವರ ಮನಗಳಲ್ಲಿ ಬೆಟ್ಟವನ್ನು ಭೇದಿಸುವ ಚೈತನ್ಯಗಳನ್ನು ಚಿಗುರಿಸಿದ್ದವು ಅಂತಲೇ ನನ್ನ ಭಾವನೆ.

ಬೆಟ್ಟವನ್ನು ಹತ್ತಹೊರಟ ನನ್ನ ಮನದಾಳದ ಇಂಗಿತವೇ ಬೇರೆಯದಾಗಿತ್ತು. ನನ್ನಂತರಾಳದ ಎಲ್ಲಾ ಉದ್ವಿಗ್ನತೆಗಳನ್ನು ಗೆಲ್ಲುವುದೇ ನನ್ನ ಆತ್ಯಂತಿಕ ನಿಲುವಾಗಿತ್ತು.

ನನ್ನಲ್ಲಿ ಒಮ್ಮೊಮ್ಮೆಗೆ ಚಿಮ್ಮುತ್ತಿದ್ದ ಆತ್ಮವಿಶ್ವಾಸ ಕೆಲವೇ ಕ್ಷಣಗಳಲ್ಲಿ ಕುಗ್ಗಿ ಕುಸಿಯುತ್ತಿತ್ತು; ಯಾವುದೋ ವಿಚಿತ್ರ ರಾಗಗಳಲ್ಲಿ ಮುಳುಗಿ ಕಸಿವಿಸಿ ಗೊಳ್ಳುತ್ತಿತ್ತು. ದಿನದಿನದ ಗೊಂದಲಗಳು, ಅನಾಥ ಪ್ರಜ್ಞೆಗಳು, ಅನುಮಾನಗಳು ಸಮುದ್ರದಲೆಗಳಂತೆ ಅಪ್ಪಳಿಸುತ್ತಿದ್ದವು.

ಈ ಎಲ್ಲಾ ಪರಿಪಾಟಲುಗಳ ನಡುವೆಯೇ, ನನ್ನಲ್ಲಿ ಹೊಸದೊಂದು ಆಲೋಚನೆ ಚಿಗುರಿಕೊಂಡಿತ್ತು. ನಾನೇನೋ ಬೆಟ್ಟ ಹತ್ತಿ ನನ್ನ ಉದ್ವಿಗ್ನತೆಗಳನ್ನ ಗೆಲ್ಲಬೇಕು ಅಂತ ಹೊರಟಿದ್ದೀನಿ. ಆದರೆ ಈ ಬೆಟ್ಟ ಎಷ್ಟೊಂದು ಪ್ರಶಾಂತ ಚಿತ್ತದಿಂದ ಕೂತಿದೆಯಲ್ಲಾ...! ಅಂದರೆ ಇದಕ್ಕೂ ಮನಸ್ಸಿದ್ದಿದ್ದರೆ ನನ್ನ ಥರಾನೆ... ಆಗಿಬಿಡುತ್ತಿತ್ತೋ... ಏನೋ...! ಅಂತ ಅಂದುಕೊಳ್ಳುತ್ತಿದ್ದ ಹಾಗೆ; ಆಕಾಶದಲ್ಲಿ ನಿರುಮ್ಮಳವಾಗಿ, ಲೀಲಾಜಾಲವಾಗಿ, ಹಾರುತ್ತಿರುವ ಹಕ್ಕಿಗಳ ಗುಂಪೊಂದು ಕಣ್ಣಿಗೆ ಬಿತ್ತು. ಯಾಕೋ ನನ್ನ ಅಸಹಾಯಕತೆಗಳನ್ನ ಮೀರಲಾಗದೆ, ಆತ್ಮಸಾಕ್ಷಿಗಳನ್ನ ಪ್ರತಿಕ್ಷಣವೂ ಕೊಂದುಕೊಂಡೇ ಬದುಕುವ; ಆತ್ಮ ಸಂಸ್ಕಾರಗಳ ರೆಕ್ಕೆಗಳನ್ನು ಬಿಚ್ಚಲಾಗದೆಯೇ ಮುದುರಿ, ಕಮರಿಸಿಕೊಂಡು ಕಾಲದ ಜೊತೆಗೇ, ನಿರ್ಲಿಪ್ತವಾಗಿ ಕದಲಿಹೋಗುತ್ತಿರುವ ಬದುಕು ನೆನಪಾಗಿ ರಕ್ತ ಕುದಿಯ ತೊಡಗಿತ್ತು. ಹಕ್ಕಿಗಳಷ್ಟು ಮುಕ್ತವಾದ ಅಂತಃಸತ್ವಗಳೊಡಗೂಡೇ ಬದುಕನ್ನು ಮೀಯಲಾಗದ ತಹ-ತಹಿಕೆಗೆ ನನ್ನಂತರಾಳದಲ್ಲೊಂದು ದಳ್ಳುರಿಯೇ ಎದ್ದಿತ್ತು. ಇಂತಹ ಮಿದುಳುಗಳನ್ನು ಚಿಗುರಿಸುವ, ಅಂತಃಸತ್ವಗಳನ್ನು ಕದಲಿಸುವ ಪ್ರಯತ್ನ ಮಾಡಿದ ಭಾಷಣದ ಸನ್ನಿವೇಶವೊಂದು ನೆನಪಿನಾಳದಿಂದ ತೇಲಿಬರತೊಡಗಿತ್ತು...

ನಿಜಕ್ಕೂ ಅದೊಂದು ರೋಮಾಂಚನಕಾರಿ, ಅವಿಸ್ಮರಣೀಯ ಘಟನೆಯೆಂದೇ ಹೇಳಬೇಕು. ಸಭಾಂಗಣದ ತುಂಬ ವಿದ್ಯಾರ್ಥಿಗಳು, ಪೋಷಕರು, ನುರಿತ ಶಿಕ್ಷಕರ ಸಮೂಹವೇ ನೆರೆದಿತ್ತು. ಅಂದು ನನಗೆ ಮಾತನಾಡಲು ದೊರೆತ ವಿಷಯ 'ಆಧುನಿಕ ಶಿಕ್ಷಣ ಪದ್ಧತಿ ಮತ್ತು ವಿದ್ಯಾರ್ಥಿಗಳ ದೃಷ್ಟಿಕೋನ' ಎಂಬುದಾಗಿತ್ತು. ವೇದಿಕೆಯ ಮೇಲೇರಿ ನನ್ನ ಕಿರು ಪರಿಚಯದೊಂದಿಗೆ ಪ್ರಾರಂಭಿಸಿದ್ದೆ. ನಾನು ಒಳಪ್ರವೇಶಿಸುವಾಗಲೇ ಆಕಾಶವು ದಟ್ಟವಾದ ಕಾರ್ಮೋಡಗಳಿಂದ ತುಂಬಿಹೋಗಿ ಗುಡುಗಿನ ತನನ ಶುರುವಾಗಿತ್ತು. ಇಲ್ಲಿಯೂ ಸೌಮ್ಯದಿಂದಲೇ ಪ್ರಾರಂಭವಾದ ನನ್ನ ಮಾತಿನ ಧಾಟಿಗಳು ಗುಡುಗಲು ಪ್ರಾರಂಭಿಸಿದಾಗ, ನೆರೆದಿದ್ದ ಜನಮನದ ಅಂತರಾಳದ ಬೇರುಗಳನ್ನು ಕದಲಿಸುವಲ್ಲಿ ಚುರುಕಾಗುತ್ತಿವೆ ಅಂತ ಮುಖಗಳನ್ನು ನೋಡಿದರೇನೆ ಹೇಳಬಹುದಿತ್ತು. ಎಲ್ಲರ ಕಣ್ಣುಗಳು ಕೆಂಪೇರಿರುವುದು ಸ್ಪಷ್ಟವಾಗಿ ಗೋಚರಿಸುತ್ತಿತ್ತು. ತೀಕ್ಷ್ಣವಾದ ಮಾತುಗಳು, ಜನಸ್ತೋಮಕ್ಕೆ ಹೊಡೆವ ಕಲ್ಲುಗಳಂತೆ ರಾಚುತ್ತಿದ್ದವು. ಹೊರಗೆ ಮಂದಗತಿಯಿಂದ ಪ್ರಾರಂಭವಾದ ಮಳೆ ಸುಶ್ರಾವ್ಯ ರಾಗವನ್ನು ಲಕ್ಷಿಸದ ಜನಸ್ತೋಮ ನನ್ನ ಮಾತಿನ ಅಂತಃಸತ್ವಗಳ ಶೋಧನೆಯಲ್ಲಿ ಲೀನವಾಗಿ ಹೋಗಿತ್ತು. ನಾನು ಸ್ವಲ್ಪ ಅನ್ಯಮನಸ್ಕನಾದೆ. ಆಗ ಎಲ್ಲರೂ ತಮ್ಮ ಗಾಂಭೀರ್ಯತೆಯನ್ನು ಸ್ವಲ್ಪ ಕಳೆದುಕೊಂಡು ವಾಸ್ತವಕ್ಕೆ ಮರಳುವ ಸೂಚನೆಗಳು ಕಂಡುಬಂದವು. ಕೂಡಲೇ ನಾನು ನೇರವಾಗಿಯೇ, ''ನೋಡೀ... ಹೊರಗಡೆ ಧಾರಾಕಾರವಾಗಿ ಮಳೆ ಸುರೀತಾ... ಇದೆ. ಅದರಿಂದ ನಾನೊಂದು ಶಿಕ್ಷಣ ಪಡೆಯಬೇಕಿದೆ. ಅದಕ್ಕೇನೆ ತಾವೆಲ್ಲರೂ ನನಗೆ ಮಳೆಯಲ್ಲಿ ನೆನೆಯುವ ಅವಕಾಶ ಕೊಡ್ಬೇಕು. ನನ್ನ ಮಾತುಗಳನ್ನು ಕೇಳಬೇಕು ಅಂತ ಇಷ್ಟಪಡೋರು ಇಲ್ಲೇ



ಕೂತಿರಬಹುದು...!'' ಎಂದು ವೇದಿಕೆಯಿಂದಿಳಿದು ಹೊರಗೆ ಓಡಿಹೋಗಿದ್ದೆ...!

ಹೊರಗೆ ಹೋದವನೇ ಎರಡೂ ಕೈಗಳನ್ನು ಉದ್ದಕ್ಕೆ ಚಾಚಿ, ಆಕಾಶಕ್ಕೆ ಮುಖ ಮಾಡಿ ನಿಂತೆ. ನನ್ನ ದೇಹ ಮನಸ್ಸುಗಳೆಲ್ಲವೂ ಪ್ರಕೃತಿಯ ಆ ಕ್ರಿಯೆಯಲ್ಲಿ ಲೀನವಾಗಿ, ದಿವ್ಯಾನಂದದಲ್ಲಿ ಮುಳುಗಿಹೋದವು...

ಮಳೆಯಲ್ಲಿ ನೆನೆಯುತ್ತಾ ಹೋದಂತೆ ನನ್ನ ಮನಸ್ಸೂ ಸಹ ನಾನು ಮಾತನಾಡ ಬೇಕಾಗಿದ್ದ ವಿಚಾರಗಳಲ್ಲಿ ಕೇಂದ್ರೀಕೃತವಾಗಿ, ಮತ್ತೂ ಹೊಸ-ಹೊಸ ಒಳಹುಗಳನ್ನು ಸೃಷ್ಟಿಸುತ್ತಾ, ಚಿಗುರಿಸುತ್ತಾ ಹೋಯಿತು. ನಿಜಕ್ಕೂ ಆ ಸಭಾಂಗಣದಲ್ಲಿ ನೆರೆದಿರುವಂತಹ ಎಲ್ಲಾ ಮನಸ್ಸುಗಳು ನನ್ನಲ್ಲಿ ಮಿಳಿತವಾಗಿ ಆಗಸಕ್ಕೆ ರೆಕ್ಕೆ ಬಿಚ್ಚಿ ಹಾರುತ್ತಿವೆಯೇನೋ ಎನ್ನುವಷ್ಟು ಆತ್ಮ ಚೈತನ್ಯ ಚುರುಕಾಯಿತು. ಮಳೆ ಧಾರಾಕಾರವಾಗಿ ಸುರಿಯುತ್ತಲೇ... ಇತ್ತು. ನನ್ನ ಮನದಾಳದ ಇಂಗಿತಗಳನ್ನು, ಇರಾದೆಗಳನ್ನು ವ್ಯಕ್ತಪಡಿಸುವ ಪರಿ; ಈಗ ಎಂತೆಂಥವೋ ದಿವ್ಯ ಸೌಂದರ್ಯಗಳನ್ನು ಮೆತ್ತಿಕೊಂಡು ಚಿಲುಮೆಯಂತೆ ಚಿಮ್ಮುತ್ತಿತ್ತು.

ಹೀಗೆ ಅರ್ಧ ಗಂಟೆ ಮಳೆಯಲ್ಲೇ... ತಪಸ್ವಿಯಾಗಿ ನಿಂತಿದ್ದೆ... ಯಾವಾಗ ಪ್ರಜ್ಞೆ ತಪ್ಪಿ ಬಿದ್ದೆನೋ...! ನನ್ನನ್ನು ಒಳಗಡೆ ಕರೆತಂದು ಎಚ್ಚರಿಸಿದಾಗಲೇ...; ಅಲ್ಲಿ ನೆರೆದಿದ್ದವರೆಲ್ಲಾ ನನ್ನ ಹುಚ್ಚುತನವನ್ನೇ ವೀಕ್ಷಿಸುತ್ತಿದ್ದರೆಂದು ಅರಿವಿಗೆ ಬಂದದ್ದು.

ಕೂಡಲೇ ಒದ್ದೆ ಮೈಯಲ್ಲೇ... ವೇದಿಕೆಯ ಮೇಲೆ ನಿಂತಿದ್ದೆ...! ಆಗ ಮಾತು ನಡುಗುವ ಧ್ವನಿಯಲ್ಲಿ ಪ್ರಾರಂಭವಾದರೂ ತುಂಬ ಸ್ಪಷ್ಟವಾಗಿತ್ತು. ಕೂತಿದ್ದವರೆಲ್ಲಾ ಈಗ ನಿಂತೇ ನನ್ನ ಅವಸ್ಥೆಯನ್ನು ಬೆರಗುಗಣ್ಣುಗಳಿಂದ, ವಿಕ್ಷಿಪ್ತ ಮನಸ್ಸುಗಳಿಂದ ನೋಡುತ್ತಿದ್ದರು.

''ನೋಡಿ... ನಾನೊಬ್ಬ ಮೇಷ್ಟ್ರಾಗಿ ನನ್ನ ವಿದ್ಯಾರ್ಥಿಗಳಿಗೆ ಇಂತಹ ಶಿಕ್ಷಣವನ್ನು ಕೊಡ್ಬೇಕು ಅನ್ನೋ ದೃಷ್ಟಿಕೋನವನ್ನು ಇಟ್ಟುಕೊಂಡೋನು. ನೀವು ನಂಬ್ತೀರೋ... ಬಿಡ್ತೀರೋ. ಇವತ್ತಿನ ವಿದ್ಯಾರ್ಥಿಗಳಿಗೆ ತಮ್ಮ ಅಂತರಾಳದ ಚೈತನ್ಯಗಳನ್ನ ಚಿಗುರಿಸಿ ಕೊಳ್ಳುವ ಶಿಕ್ಷಣ ಸಿಕ್ತಾ ಇಲ್ಲ. ಕೇವಲ ಶವಸಂಸ್ಕಾರ ಸಂದರ್ಭದ ರೀತಿಯ ಶೃಂಗಾರದ ಶಿಕ್ಷಣವನ್ನು ನೀಡ್ತಾ ಇದ್ದೀವಿ. ಇದಕ್ಕೆ ನಾವೆಲ್ಲರೂ ಕಾರಣ. ಇಂತಹ ಅಸಹಾಯಕತೆಗಳನ್ನು ಮೀರಲಾಗದ, ವಿದ್ಯಾರ್ಥಿಗಳಲ್ಲಿನ ಆತ್ಮಚೈತನ್ಯಗಳನ್ನು ಕೊಂದುಹಾಕುತ್ತಿರುವುದರ ಬಗ್ಗೆ ನನ್ನಲ್ಲೂ ತೀವ್ರವಾದ ಆಕ್ರೋಶ ಇದೆ. ದಳ್ಳುರಿ ಇದೆ. ಮೂಕಯಾತನೆ ಇದೆ. ಪ್ರತಿಕ್ಷಣವೂ ನನ್ನಲ್ಲಿ ಇಂತಹ ಮೂಕಯಾತನೆಯ ವೇದನೆಗಳು ಭೋರ್ಗರೆಯುತ್ತಿವೆ. ಅಂತಹವುಗಳಲ್ಲಿ ನಾನಿಂದು ಒಂದೇ ಉದಾಹರಣೆಯನ್ನು ಮಾತ್ರ ತೋರಿಸಲಿಕ್ಕಾಯಿತು. ಇದಕ್ಕೆ ತಮ್ಮೆಲ್ಲರಲ್ಲಿ ಕ್ಷಮೆ ಯಾಚಿಸುತ್ತೇನೆ.'' ಎಂದು ಗದ್ಗದಿತ ಧ್ವನಿಯಲ್ಲಿ ಹೇಳುತ್ತಿದ್ದ ಹಾಗೆ ಯಾಕೋ ದುಃಖ ಒತ್ತರಿಸಿ ಬಂದು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ್ದೆ.

ವೇದಿಕೆಯ ಮೇಲಿದ್ದ ಅತಿಥಿ ಯಾರೋ ನನ್ನನ್ನು ಎಚ್ಚರಿಸಿದಾಗ, ಕೇವಲ ಎರಡೂ ಕೈಗಳನ್ನು ದೈನ್ಯತೆಯಿಂದ ಜೋಡಿಸಿ, ಜನಸ್ತೋಮಕ್ಕೆ ಧನ್ಯವಾದಗಳನ್ನು ಅರ್ಪಿಸಿದವನೇ... ವೇದಿಕೆಯಿಂದಿಳಿದು ದೌಡಾಯಿಸಿದ್ದೆ. ಹೊರಗೆ ಬಂದಾಗ ಪರಿಶುಭ್ರವಾದಂತಹ ನಿರ್ಮಲ ಆಕಾಶವನ್ನು ಕಂಡು ಪುಳಕಿತನಾಗಿದ್ದೆ...

ನನ್ನ ಅಂದಿನ ಹುಚ್ಚುತನಕ್ಕೆ ಮುಗುಳ್ನಗುತ್ತಾ ಬೆಟ್ಟ ಹತ್ತುವ ಪ್ರಯತ್ನದಲ್ಲಿ ತೊಡಗಿದೆ. ಆಗ ಮನಸ್ಸು ಸ್ವಲ್ಪ ಸ್ಥಿಮಿತತೆಗೆ ಬಂದು ಸೌಮ್ಯವಾದಂತೆ ಭಾಸವಾಗುತ್ತಿತ್ತು. ಸ್ವಲ್ಪ ಸ್ವಲ್ಪವೇ ಮೇಲೇರುತ್ತಾ ಹೋದಂತೆ ಎಂತೆಂಥವೋ ಕುತೂಹಲಕಾರಿ ಪ್ರಕೃತಿ ದೃಶ್ಯಗಳು ನನ್ನಲ್ಲಿ ಮತ್ತಷ್ಟು ಚೈತನ್ಯ ತುಂಬಿದವು...

ಕೊನೆಗೆ ಹೇಗೋ ಬೆಟ್ಟದ ತುದಿಯನ್ನು ತಲುಪಿದ್ದೆ. ಭಕ್ತಾದಿಗಳೆಲ್ಲಾ ದೇವಾಲಯದ ನೂಕುನುಗ್ಗಲುಗಳಲ್ಲಿ ತೊಡಗಿದ್ದರೆ, ನನ್ನ ಮನಸ್ಸು ಅವುಗಳಿಗೆ ಒಗ್ಗಿಕೊಳ್ಳದೆ, ಬೇರೊಂದು ಪ್ರಶಾಂತ ವಾತಾವರಣವನ್ನೇ ಬಯಸುತ್ತಿತ್ತು. ಅಷ್ಟರಲ್ಲೇ ನನ್ನ ಕಣ್ಣುಗಳು ದೇವಾಲಯದಿಂದ ತುಸು ದೂರದಲ್ಲಿ ಒಂದು ಹಚ್ಚ ಹಸಿರಾದ ಮರವೊಂದನ್ನು ಹುಡುಕಿದ್ದವು. ಸಹಜವಾಗಿಯೇ ನಾನು ಆ ಕಡೆಗೆ ಧಾವಿಸಿ 'ಉಸ್ಸಪ್ಪಾ...' ಎನ್ನುತ್ತಾ ಮರದಡಿಯಲ್ಲಿ ಕುಳಿತೆ. ಆಗಲೇ ಮಧ್ಯಾಹ್ನ ಹನ್ನೆರಡಾಗಿತ್ತು. ಸ್ವಲ್ಪ ಆಯಾಸವಾದಂತೆ ಭಾಸವಾಗಿ ಮರದಡಿಯಲ್ಲೇ ಹವಾ ಸೇವಿಸುತ್ತಾ ತಲೆ ಕೆಳಗೆ ಮಾಡಿದೆ. ಕಣ್ಣು ಮಂಪರು ಹತ್ತಿದ ಹಾಗಾಗಿ, ನಿದ್ದೆಯೂ ಬಂದು, ಒಂದು ದೀರ್ಘವಾದ ವಿಶ್ರಾಂತಿ ಪಡೆದಿದ್ದೆ.

ಅಷ್ಟರಲ್ಲಿ ಯಾರೋ ವಿದ್ಯಾರ್ಥಿಗಳು ಆ ಕಡೆಗೆ ಧಾವಿಸಿ ಬಂದು ''ಯಾಕೆ ಸಾರ್, ಇಲ್ಲಿ ಕೂತು ಬಿಟ್ರಿ... ಅದೂ... ಒಬ್ರೇ...!'' ಎಂದು ರಾಗ ತೆಗೆದರು.

''ಹೌದು ಕಣ್ರೋ. ಯಾಕೋ ಬೆಟ್ಟ ಹತ್ತಿ ಆಯಾಸವಾದಂತಿತ್ತು. ಅದಕ್ಕೆ ಮರದಡೀಲಿ ಕೂತು ಸ್ವಲ್ಪ ವಿಶ್ರಾಂತಿ ಪಡೆಯೋಣ ಅಂತ ಬಂದೆ. ಅದಿರಲಿ ನೀವೇನಿಲ್ಲಿ...?'' ಎಂದು ಕುತೂಹಲಭರಿತನಾಗಿ ಕೇಳಿದ್ದೆ. ''ಏನೂ ಇಲ್ಲ ಸಾರ್, ಯಾಕೋ ಆ ದೇವಾಲಯದ ಹತ್ತಿರ ಗಲಾಟೆ-ಕಿರುಚಾಟದಲ್ಲಿ ದೇವರನ್ನು ನೋಡ್ಬೇಕು ಅನ್ನೋ ಆಸೇನೇ ಹೊರಟುಹೋಯ್ತು. ಅದಕ್ಕೆ ಈ ಕಡೆಗೆ ಬಂದ್ವಿ'', ಎಂದು ತಮ್ಮ ನೀರಿನ ಬಾಟಲಿಯನ್ನು ಕೈಗಿತ್ತರು. ''ತುಂಬ ಧನ್ಯವಾದಗಳು ಕಣ್ರಪ್ಪಾ...'' ಎಂದು ನೀರು ಕುಡಿದೆ. ಆಗ ಮನಸ್ಸು ಸ್ವಲ್ಪ ಪ್ರಶಾಂತತೆಯನ್ನು ಪಡೆದುಕೊಂಡಿತ್ತು...

ವಿದ್ಯಾರ್ಥಿಗಳು, ''ನಿಮ್ಮದೇನೂ ಅಭ್ಯಂತರ ಇಲ್ಲ ಅಂದ್ರೆ... ನಾವು ಸ್ವಲ್ಪ ಹೊತ್ತು ಇಲ್ಲೇ... ನಿಮ್ಮ ಜೊತೆ ಕೂತು, ವಿಶ್ರಾಂತಿ ಪಡಿತೀವಿ ಸಾರ್'' ಎಂದಿದ್ದರು.

''ಅಭ್ಯಂತರ ಎಂಥದ್ದು..., ನನ್ನ ಥರಾನೇ ನೀವು ಏಕಾಂತ ಬಯಸಿ ಬಂದವರು ಅಂತಾನೇ ಕಾಣುತ್ತೆ... ಧಾರಾಳವಾಗಿ ಕೂತ್ಕೊಳ್ಳಿ. ಯಾಕೆ ಅಂದ್ರೆ ಪ್ರಕೃತಿ ಯಾರಿಗೂನು 'ನಾನು ನಿನಗೋಸ್ಕರ ಇದ್ದೀನಿ !' ಅಂತ ಯಾವೊತ್ತೂ... ಹೇಳೋದಿಲ್ಲ. ಮುಕ್ತವಾಗಿ ಬದುಕುವ ಸ್ವಾತಂತ್ರ್ಯವನ್ನು ಎಲ್ಲರಿಗೂ ಕಲ್ಪಿಸಿಕೊಟ್ಟಿದೆ ಅಂತಾನೆ ನನ್ನ ಅನಿಸಿಕೆ'' ಎಂದಿದ್ದೆ.

ಸ್ವಲ್ಪ ಹೊತ್ತು ನಾವು ನಮ್ಮ ಚಿಂತನಾಲಹರಿಗಳಲ್ಲೇ ಮುಳುಗಿ ಮೌನವಾಗಿದ್ದೆವು. ನಾನು ಬೆಟ್ಟದ ತಪ್ಪಲಿನಲ್ಲಿ ಕಾಣುತ್ತಿದ್ದ ಪ್ರಕೃತಿ ಸೌಂದರ್ಯವನ್ನು ನೋಡಿ ಕಲ್ಪನೆಗಳನ್ನು ಕೆತ್ತಿಕೊಳ್ಳುತ್ತಿದ್ದೆ. ಸಪ್ತ ಸಾಗರಗಳಾಚೆಗಿನ ರಹಸ್ಯಗಳನ್ನು ಭೇದಿಸಹೊರಟ ಮನಸ್ಸು, ತನ್ನ ಚೈತನ್ಯಹೀನತೆಯನ್ನು ಕಳೆದುಕೊಂಡು ಹಿಮ್ಮೆಟ್ಟುತ್ತಿತ್ತು...

ಈ ಮಧ್ಯೆ ವಿದ್ಯಾರ್ಥಿಗಳು ತಮ್ಮ ತಮ್ಮಲ್ಲೇ ಪಿಸುಮಾತನಾಡಲು ಶುರು ಮಾಡಿದ್ದರು...

ಮಾತುಗಳು ಮತ್ತೂ ಗಟ್ಟಿಯಾಗಿ, ಒಬ್ಬ ವಿದ್ಯಾರ್ಥಿ, ''ಇಲ್ಲಿ ಪರಿಸರ ತುಂಬ ಸೊಗಸಾಗಿದೆ ಅಲ್ವಾ ಸಾರ್...?'' ಎಂದವನೇ, ''ಇಂತಹ ಸೊಗಸಾದ ಪರಿಸರದಲ್ಲಿ, ನೀವು ಒಂದು ಹಾಡನ್ನೋ... ಕತೆಯನ್ನೋ... ಹೇಳಿದ್ರೆ ಸೊಗಸಾಗಿರತ್ತೆ ಸರ್...'' ಎಂದು ಮುಗುಳ್ನಕ್ಕ...

ನನಗೆ ಹಾಡು, ಹಾಡುವ ಯಾವುದೇ ಧಾಟಿಗಳು ತಿಳಿಯದಿದ್ದರೂ... ಅವೊತ್ತು ನನ್ನಲ್ಲಿ ಸುಪ್ತವಾಗಿದ್ದ ರಾಗಲಹರಿ ರೆಕ್ಕೆ ಬಿಚ್ಚಿಕೊಂಡಿತ್ತು, ''ಎಲ್ಲಿ ಜಾರಿತೋ ಮನವು..., ಎಲ್ಲೆ ಮೀರಿತೋ..., ಎಲ್ಲಿ ಅಲೆಯುತಿಹುದೋ ಮನವು ಕಾಣದಾಯಿತೋ...'' ಎಂದು.

ಇಷ್ಟಕ್ಕೆ ಮುಗಿದಿಲ್ಲವೆಂಬಂತೆ ಮತ್ತೊಬ್ಬ ವಿದ್ಯಾರ್ಥಿ, ''ಸರ್, ಮಧ್ಯಾಹ್ನದ ಉರಿಬಿಸಿಲು ಇನ್ನೂ ಕಡಿಮೆ ಆಗೋ ಹಾಗೆ ಕಾಣಿಸ್ತಿಲ್ಲಾ, ನಾವೆಲ್ಲರೂ ಒಟ್ಟಿಗೆ ಸಂಜೆ ಹಾಯಾಗಿ

ಬೆಟ್ಟ ಇಳಿದು ಹೋಗೋಣ. ದಯವಿಟ್ಟು ಯಾವುದಾದರೊಂದು ಒಳ್ಳೆ ಕಥೆ ಹೇಳಿ ಸಾರ್'' ಎಂದ. ''ಉರಿಬಿಸಿಲು ಎಂದೆಯಲ್ಲಾ... ಹಾಗಾದರೆ ಉರಿಬಿಸಿಲಲ್ಲಿ ನಡೆಯೋದ ನಿಮಗೆ ಗೊತ್ತಿಲ್ಲ, ಅದನ್ನನುಭವಿಸಿ ಬನ್ನಿ, ಅದೇ ನಿಮಗೆ ಒಂದು ಕಥೆಯನ್ನ ಹೇಳುತ್ತೆ'' ಎಂದೆ. ಎಲ್ಲರೂ ''ಸಾರ್ ಸಾರ್, ದಯವಿಟ್ಟುಕಥೆ...'' ಎಂದು ಗಟ್ಟಿಯಾಗೇ ಕೂಗಿದರು. ನನ್ನ ಮನಸ್ಸೂ ಸ್ಥಿಮಿತದಲ್ಲಿದ್ದುದರಿಂದ, ''ನಾನು ಕತೆ ಏನೋ ಹೇಳ್ತೀನಿ. ಆದ್ರೆ, ಅದ್ರಿಂದ ನೀವು ಏನು ಕಲ್ತುಕೊಂಡ್ರಿ ಅನ್ನೋದನ್ನ ನಾಳೆ ಸ್ಕೂಲಿಗೆ ಬಂದಾಗ ಹೇಳ್ಬೇಕು...'' ಎಂದೆ. ಎಲ್ಲರೂ 'ಗುಂಪಲಾ ಗೋವಿಂದ' ಎಂದರು.

ನನಗೆ ಕಥೆ ಹೇಳೋದು ಅಂದರೆ, ಅದರಲ್ಲಿ ಭಾವನೆಗಳನ್ನ ತುಂಬಿ ಹೇಳುವುದು, ನಮ್ಮ ಮೇಷ್ಟ್ರಿಂದ ಕಲಿತ ಅಭ್ಯಾಸವಾಗಿತ್ತು. ಅಂದೂ ಹಾಗೆಯೇ ತುಂಬ ಭಾವಪರವಶನಾಗಿ ವಿದ್ಯಾರ್ಥಿಗಳನ್ನು ಎದುರಿಗೇ ಕೂರಿಸಿಕೊಂಡು ಅವರ ಕಣ್ಣಿನಾಳಗಳಲ್ಲಿ ಒಂದಾಗಿ, ಮನದಾಳಗಳನ್ನು ಭೇದಿಸುವ ಛಲದಿಂದ ಪ್ರಾರಂಭಿಸಿದೆ...

''ಯಾವುದೋ... ದಿವ್ಯಾಲೋಚನೆಯೊಂದಿಗೆ ಮುದುಕನೊಬ್ಬ ಸೇತುವೆಯ ಮೇಲೆ ನಡೆಯುತ್ತಿದ್ದನಂತೆ. ಹೀಗೆ ನಡೆದು ನಡೆದು ದಣಿವಾದಾಗ ನೀರು ಕುಡಿಯಬೇಕೆನ್ನಿಸಿ, ಸೇತುವೆಯಿಂದಿಳಿದು ನದಿಯ ದಡಕ್ಕೆ ಬಂದನಂತೆ. ನದಿಯಲ್ಲಿ ನೀರು ಕುಡಿದು ದಣಿವಾರಿಸಿಕೊಳ್ಳ ಹೊರಟ ಮುದುಕನಿಗೆ ನೀರಿನಲ್ಲಿ ತನ್ನ ಪ್ರತಿಬಿಂಬ ಕಾಣಿಸಿತು. ಅದನ್ನು ಕಂಡು ದಿಗ್ಭ್ರಾಂತನಾಗಿಹೋದ. ಏಕೆಂದರೆ ತಾನು ಕಂಡ ಬಿಂಬದಲ್ಲಿ ಮುಖದ ತುಂಬ ಬರಿಯ ಸುಕ್ಕುಗಳೇ ತುಂಬಿಹೋಗಿದ್ದವು. ಅದು ತುಂಬ ವಿಕಾರವಾಗಿ ಕಂಡಿತು. ನದಿಯ ನೀರನ್ನು ಮುಖಕ್ಕೆ ಎರಚಿಕೊಂಡು ಚೆನ್ನಾಗಿ ತೊಳೆದು ಕೊಂಡ. ಆಗಲೂ ಗೊಂದಲ ನಿವಾರಣೆಯಾಗಲಿಲ್ಲ. ತನ್ನ ಮುಖವನ್ನೊಮ್ಮೆ ನೀರಿನ ಹತ್ತಿರಕ್ಕೆ ತಂದುಕೊಂಡು ಮುಖದಲ್ಲಿನ ಸುಕ್ಕು ಗಳನ್ನೆಲ್ಲಾ ಮುಟ್ಟಿ-ಮುಟ್ಟಿ ಅಳಿಸಲಾರಂಭಿಸಿದ. ಅವು ಅಳಿಸಿ ಹೋಗದೆ ಹಾಗೆಯೇ ಉಳಿದುಬಿಟ್ಟಾಗ ಮುದುಕ ಹುಚ್ಚನಾಗಿಹೋದ. ಈ ಹುಚ್ಚಿನ ಮಧ್ಯೆಯೇ..., ಇನ್ನು ಮುಂದೆ ಎಂದೂ ತನ್ನ ಪ್ರತಿಬಿಂಬವನ್ನು ನೋಡದಿರುವುದೇ ಲೇಸೆಂದು ತೀರ್ಮಾನಿಸಿ, ಅನ್ಯಮನಸ್ಕನಾಗಿಯೇ ಪಯಣಿಸಿದ...

ಮುಂದೆ ಸಾಗುತ್ತಾ ಹೋದಂತೆ, ಅಲ್ಲೆಲ್ಲೋ... ದೂರದಲ್ಲಿ ಒಂದು ಹುಲ್ಲಿನ ಮೆದ್ದೆಯ ಗುಡಿಸಲಿರುವುದನ್ನು ಕಂಡ. ಅವನು ನಡೆಯುತ್ತಿದ್ದ ಹಾದಿಯು ದಟ್ಟವಾದ ಅರಣ್ಯದಿಂದ ಆವೃತವಾಗಿ, ಎಂತಹ ಧೀರನಲ್ಲೂ ಅಳುಕನ್ನು ಮೂಡಿಸುವಂಥದ್ದೇ. ಆದರೆ ಆ ಮುದುಕನಿಗೆ ಆ ಪ್ರಕೃತಿಯು ಸಹಜವಾಗಿಯೇ ಲೀನತೆಯನ್ನು ಪಡೆಯುವ ಅಂತಃಶಕ್ತಿಯನ್ನು ನೀಡಿರಬಹುದು! ಅವನು ಸಹಜವಾಗಿ ಯಾವುದೇ ಆತಂಕಗಳಿಗೆ ಒಳಗಾಗದೆ, ಮ್ಲಾನತೆಯಿಂದ ಮುನ್ನುಗ್ಗುತ್ತಿದ್ದ...

ಗುಡಿಸಲನ್ನು ಕಂಡ ಮುದುಕನಲ್ಲಿ ಅಲ್ಲಿಗೆ ಭೇಟಿ ನೀಡುವ ಬಯಕೆ ಹೊಮ್ಮಿಬಂದು ಕಾಲ್ನಡಿಗೆಯನ್ನು ಆ ಕಡೆಗೆ ತಿರುಗಿಸಿದ. ಗುಡಿಸಲ ಸಮೀಪಕ್ಕೆ ಬರುತ್ತಿದ್ದ ಹಾಗೆ ತನ್ನ ಪ್ರತಿಬಿಂಬದ ನೆನಪು ಬಂದು ಕಸಿವಿಸಿಯಾದ. ಅಂತಹ ಸನ್ನಿವೇಶವೇನಾದರೂ ಇಲ್ಲಿ ಸೃಷ್ಟಿಯಾದರೆ ಕೂಡಲೇ ಇಲ್ಲಿಂದ ದೌಡಾಯಿಸುವುದು ಎಂದು ತೀರ್ಮಾನಿಸಿ ಗುಡಿಸಿಲ ಒಳಹೊಕ್ಕ...

ತಕ್ಷಣವೇ ಅಲ್ಲೊಂದು ಹಣ್ಣು-ಹಣ್ಣು ಮುದುಕಿ, ತಲೆತುಂಬ ಶುಭ್ರವಾದ ಕಪ್ಪು ಕೂದಲನ್ನು ತುಂಬಿಕೊಂಡು, ಶಾಂತಚಿತ್ತದಿಂದ ಏನನ್ನೋ ಧೇನಿಸುತ್ತಿದ್ದುದನ್ನು ಕಂಡ. ಆ ಕ್ಷಣದಲ್ಲಿ ಅವನಿಗೆ ಸ್ವಲ್ಪ ಅಳುಕೆನಿಸಿದರೂ... ಸಮಾಧಾನಚಿತ್ತದಿಂದ ಅವಳ ಧ್ಯಾನಸ್ಥ ಅಸ್ತಿತ್ವವನ್ನೇ ಅವಲೋಕಿಸುತ್ತಾ ನಿಂತ...

ಅವರ ಮಧ್ಯೆ ಸುಮಾರು ೨೫ ವರ್ಷಗಳ ಅಂತರವಿರಬೇಕು. ಪರಿಶುಭ್ರವಾದಂತಹ ಅಗಲ ಕಣ್ಣುಗಳನ್ನು ತೆರೆದಳು. ಅವಳು ಕಣ್ಣು ತೆರೆಯುತ್ತಿದ್ದಂತೆ, ಗುಡಿಸಲೆಲ್ಲಾ ಬೆಳದಿಂಗಳಂತಾಗಿ ಹೋಯಿತು; ಅಷ್ಟು ಪ್ರಕಾಶಮಾನವಾಗಿ ಹೊಳೆಯುತ್ತಿದ್ದವು ಆಕೆಯ ಕಣ್ಣುಗಳು...

ಇದರಿಂದ ಆಶ್ಚರ್ಯಚಕಿತನಾದರೂ... ಮುದುಕನಲ್ಲಿ, ತನ್ನ ಪ್ರತಿಬಿಂಬದ ಆತಂಕ ಕಾಡುತ್ತಲೇ ಇತ್ತು. ಮುದುಕನ ಕಸಿವಿಸಿಯನ್ನು ಅರಿತವಳಂತೆ ಮುದುಕಿ, ''ಮಗೂ... ನಿನ್ನ ಮುಖದಲ್ಲಿ ಅಂತಹ ಯಾವ ಸುಕ್ಕುಗಳೂ ಇಲ್ಲ, ಕಳವಳ ಪಡಬೇಡ'' ಎಂದವಳೇ ಒಂದು ದೊಡ್ಡ ಕನ್ನಡಿಯನ್ನು ಅವನ ಮುಂದಿಟ್ಟಳು. ಆ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡುವ ಬಯಕೆ ಒತ್ತರಿಸಿಬಂದರೂ..., ಯಾಕೋ ಧೈರ್ಯ ಸಾಲಲಿಲ್ಲ. ಮತ್ತೆ ಆ ಮುದುಕಿ, ''ಮಗೂ... ನಿನ್ನ ಪ್ರತಿಬಿಂಬವನ್ನು ನದಿಯಲ್ಲಿ ನೋಡಿದ್ದರಲ್ಲಿ ನಿನ್ನ ತಪ್ಪೇನೂ ಇಲ್ಲ, ಆದರೆ ಪ್ರತಿಬಿಂಬವನ್ನು ನದಿ ತೋರಿಸಿದ್ದು ತಪ್ಪು. ಅವು ನದಿಯ ಸುಕ್ಕುಗಳೇ ಹೊರತು, ನಿನ್ನವಲ್ಲ ನೋಡು... ಧೈರ್ಯ ತಂದುಕೊಂಡು, ಒಮ್ಮೆ ಪ್ರಶಾಂತಚಿತ್ತದಿಂದ ನಿನ್ನ ಮುಖವನ್ನೊಮ್ಮೆ ಕನ್ನಡಿಯಲ್ಲಿ ನೋಡಿಕೋ...'' ಎಂದಾಗ, ಸ್ವಲ್ಪ ಸಮಾಧಾನಿತನಾದವನಂತೆ ತಲೆಯನ್ನು ಸ್ವಲ್ಪ ಸ್ವಲ್ಪವೇ ಮೇಲಕ್ಕೆತ್ತಿ ನೋಡಿದಾಗ ದಿಗ್ಭ್ರಮೆ ಗೊಂಡವನಂತೆ ಮೊದಲಿಗೆ ಮೂಕವಿಸ್ಮಿತ ನಾದ. ತನ್ನ ಮುಖದಲ್ಲಿ ಅಂತಹ ಯಾವ ಸುಕ್ಕುಗಳೂ ಇಲ್ಲದಿರುವುದು ಖಾತರಿ ಯಾದಾಗ ಹೊರಗಡೆ ಬಂದವನೇ ಜೋರಾಗಿ ಒಮ್ಮೆ 'ಓ'... ಎಂದು, ಕಿರುಚಿ ತನ್ನ ಅದಮ್ಯ ಉತ್ಸಾಹಗಳನ್ನು ಪ್ರದರ್ಶಿಸಿದ...

ಇಂತಹ ಉತ್ಸಾಹ ಸ್ಫೂರ್ತಿ ತುಂಬಿಕೊಂಡು ತನ್ನ ಗೊಂದಲ ಗಳಿಂದ ಹೊರಬಂದಂತಹ ಮುದುಕನನ್ನು ಕಂಡು, ''ಮಗೂ ... ಇಂದು ನಾನು, ನಿನ್ನ ದರ್ಶನದಿಂದ ಪುನೀತಳಾದೆ'' ಎಂದು ಕಣ್ಣಲ್ಲಿ ನೀರು ತುಂಬಿಕೊಂಡವಳೇ ಮುದುಕಿ ತನ್ನ ಕೊನೆಯುಸಿರೆಳೆದಳಂತೆ. ಆ ಮುದುಕ ಮುದುಕಿಯ ಎಲ್ಲಾ ಅಂತ್ಯಸಂಸ್ಕಾರಗಳನ್ನು ಮುಗಿಸಿ, ಅಲ್ಲಿಯೇ ತನ್ನ ಜೀವನ ಅಸ್ತಿತ್ವಗೊಳಿಸಿಕೊಂಡನಂತೆ...!

''ಇದು ನಮ್ಮ ಮೇಷ್ಟ್ರು ನಾನು ವಿದ್ಯಾರ್ಥಿಯಾಗಿದ್ದ ಕಾಲದಲ್ಲಿ ನನಗೆ ಹೇಳಿದ ಕಥೆ ಕಣ್ರೋ...,'' ಎಂದಾಗ ವಿದ್ಯಾರ್ಥಿಗಳು ಮೈ ಮುರಿದು ಎದ್ದು, ''ಕತೆ ಏನೋ ಸೊಗಸಾಗಿತ್ತು ಸಾರ್, ಆದ್ರೆ ಅರ್ಥಾ ಏನು ಅಂತಾ ಹೊಳೀಲೇ... ಇಲ್ಲಾ...'' ಎಂದರು.

''ಅದಕ್ಕೆ ಹೇಳಿದ್ದು; ನಾಳೆ ಸ್ಕೂಲಿಗೆ ಬರೋವರೆಗೂ ಯೋಚನೆ ಮಾಡಿ ಹೇಳಿ ಅಂತ'' ಎಂದಾಗ, ''ನೋಡೋಣಾ ಸಾರ್'' ಎಂದು ರಾಗ ತೆಗೆದವರೇ, ನನ್ನನ್ನೂ ಅವರ ಜೊತೆಗೆ ಹೊರಡಿಸಿಕೊಂಡು ಹೋದರು. ಅದೇ ಮರದಲ್ಲೇ ಕುಳಿತಿದ್ದಂತಹ ಪಕ್ಷಿಯೊಂದು ರಾಗವನ್ನು ಗುನುಗುತ್ತಾ ನನ್ನಂತರಾಳದ ಯಾವುದೋ ಸುಪ್ತವಾದ, ನವಿರಾದ ಭಾವನೆಗಳನ್ನು ನಯವಾಗಿ ಕೆರಳಿಸಿ ಬೀಳ್ಕೊಟ್ಟಿತ್ತು. ವಿದ್ಯಾರ್ಥಿಗಳನ್ನು ಉದ್ದೇಶಿಸಿ, ''ಹಕ್ಕಿ ಹಾಡುತಿದೆ ಕೇಳಿದಿರಾ...''! ಎಂದೆ. ''ಹೌದು ಕೇಳಿದೆವು...'' ಎಂದು ವ್ಯಂಗ್ಯವಾಗಿ ಗೋಣು ಮುರಿದರು.

ವಿದ್ಯಾರ್ಥಿಗಳು ತಮ್ಮ ತಮ್ಮ ಚರ್ಚೆಗಳಲ್ಲಿ ಮುಳುಗಿದ್ದರು...!

ನನ್ನ ಮನಸ್ಸು, ಆ ಪಕ್ಷಿಯ ನಾದದ ಅಲೆಗಳನ್ನೇ ತೇಲಿಸಿಕೊಂಡು ಮೌನವಾಗಿಯೇ ಕೆಳಕ್ಕಿಳಿಸಿ ತಂದಿತ್ತು.

**ಎಂ. ವಿ. ಮಂಜುನಾಥ್**
ಕನ್ನಡ ಉಪನ್ಯಾಸಕರು, ನಂ. ೪, ಬಸವರಾಜ್ ಬಿಲ್ಡಿಂಗ್, ಇಂಡ್ಲಬೆಲೆ ರಸ್ತೆ
ಅತ್ತಿಬೆಲೆ, ಬೆಂಗಳೂರು - ೫೬೨ ೧೦೭

# ಆತ್ಮಕಥನ ಆತ್ಮಪ್ರಶಂಸೆ ಆಗಬಾರದು

ನಮ್ಮ ಹಿರಿಯರು ತಮ್ಮ ಅನುಭವಗಳನ್ನು ನಮ್ಮೊಂದಿಗೆ ಹಂಚಿಕೊಳ್ಳುವಾಗ ನಮಗೆ ರೋಮಾಂಚನವಾಗುತ್ತದೆ. ಅವು ಜೀವನದ ರಸಾನುಪಾಕಗಳು. ಅಂಥ ಅನುಭವಗಳು ಸಹ ನಮ್ಮ ಜೀವನದಲ್ಲಿ ಒಮ್ಮೊಮ್ಮೆ ಘಟಿಸಬಹುದು. ಅಂಥ ಜೀವನಾನುಭವಗಳನ್ನು ಅಕ್ಷರ ರೂಪದಲ್ಲಿ ಇಳಿಸಿದಾಗ ಶಾಶ್ವತವಾಗಿ ಮುಂದಿನ ಜನಾಂಗಕ್ಕೆ ಮಾರ್ಗದರ್ಶಿಯಾಗಬಹುದು. ದಾರಿದೀಪವಾಗಬಹುದು. ಇಂಥ ಸಾಹಿತ್ಯ ಪ್ರಕಾರವೇ ಆತ್ಮಚರಿತ್ರೆ. ಆತ್ಮಚರಿತ್ರೆ, ಆತ್ಮನಿಷ್ಠೆ ವ್ಯಕ್ತಿನಿಷ್ಠವಾಗಿರಬೇಕು. ಇಡೀ ಬದುಕನ್ನು, ತನ್ನ ಅನುಭವಗಳನ್ನು ತಾನೇ ತೆರೆದು ತೋರಿಸುವ ಕಥನವೇ ಆತ್ಮಕಥನ. ಈಗಾಗಲೇ ಅನೇಕ ಸಾಧಕರ, ಸಾಹಿತಿಗಳ, ಕವಿಗಳ, ರಾಜಕೀಯ ವ್ಯಕ್ತಿಗಳ, ಹೋರಾಟಗಾರರ ಆತ್ಮಕಥನಗಳು ಬಂದಿವೆ. ಬರುತ್ತಲಿವೆ. ಇದರಲ್ಲಿ ಎರಡು ಪ್ರಕಾರಗಳಿವೆ. ಒಂದು ತಮ್ಮ ಕಥನವನ್ನು ತಾವೇ ಬರೆಯುವುದು. ಇದು ಆತ್ಮಕಥನ ಎನಿಸಿದರೆ, ಅತ್ಯಂತ ಸನಿಹವಾಗಿ ಗೊತ್ತಿರುವ ವ್ಯಕ್ತಿಯ ಬಗ್ಗೆ ಇನ್ನೊಬ್ಬ ವ್ಯಕ್ತಿ ಆತನ ಕಥನವನ್ನು ಬರೆಯುವುದು ಜೀವನ ಚರಿತ್ರೆ ಎನಿಸುವುದು. ಆತ್ಮಕಥೆಯಲ್ಲಿ ಎಲ್ಲವೂ ಸ್ಪಷ್ಟವಾಗಿ ಇರುವುದರಿಂದ, ಅದನ್ನು ಆ ಸಾಧಕರ ಜೀವನವನ್ನು ಕಾಣಲು ಇರುವ ಬೆಳಕಿಂಡಿ ಎನ್ನಬಹುದು.

ಆತ್ಮಕಥೆ ತೀರ ಪ್ರಾಚೀನವಲ್ಲ. ೧೮ನೇ ಶತಮಾನದಲ್ಲಿ ಪ್ರಸಿದ್ಧ ಚಿಂತಕ ರೂಸೋ ಬರೆದ ಆತ್ಮವೃತ್ತಾಂತ ಪ್ರಸಿದ್ಧವಾಗಿತ್ತು. ಜಗತ್ತಿನ ಹಿರಿಯ ಚಿಂತಕ ಬರ್ಟ್ರಂಡ್ ರಸೆಲ್, ಪ್ರಸಿದ್ಧ ನಟ ಚಾರ್ಲಿ ಚಾಪ್ಲಿನ್, ಸರ್ವಾಧಿಕಾರಿ ಹಿಟ್ಲರ್ (ಮೇನ್ ಕೆಂಫ್) ಇವರು ಆತ್ಮಕಥೆ ರಚಿಸಿದ್ದವರಲ್ಲಿ ಪ್ರಮುಖರಾದರೆ, ಮಹಾತ್ಮ ಗಾಂಧಿಯವರ ಆತ್ಮಕಥೆ 'ಸತ್ಯಕ್ಕಾಗಿ ನಾನು ನಡೆಸಿದ ಪ್ರಯೋಗಗಳು', ಜವಾಹರಲಾಲ್ ನೆಹರೂ ಅವರ 'ನನ್ನ ಆತ್ಮಕಥೆ' ಹಾಗೂ ಡಾ|| ಅಬ್ದುಲ್ ಕಲಾಂ ಅವರ 'ಅಗ್ನಿಯ ರೆಕ್ಕೆಗಳು' ಈಗ ಜಗತ್‌ಪ್ರಸಿದ್ಧವಾಗಿವೆ. ಹಾಗೆ ಕನ್ನಡದಲ್ಲಿಯೂ ಆತ್ಮಕಥೆಗಳು, ಸ್ಮೃತಿಗಳು, ಕಥಾನಕಗಳು ಪ್ರಕಟವಾಗಿವೆ. ಕುವೆಂಪು ಅವರ 'ನೆನಪಿನ ದೋಣಿಯಲ್ಲಿ', ಕಾರಂತರ 'ಹುಚ್ಚುಮನಸ್ಸಿನ ಹತ್ತು ಮುಖಗಳು', ಜಿ. ಎಸ್. ಶಿವರುದ್ರಪ್ಪನವರ 'ಚದುರಂಗ', ಲಂಕೇಶ್ ಅವರ 'ಹುಳಿ ಮಾವಿನ ಮರ', ಎ. ಎನ್. ಮೂರ್ತಿರಾವ್ ಅವರ 'ಸಂಜೆಗಣ್ಣಿನ ಹಿನ್ನೋಟ', ಬೀಚಿ ಅವರ 'ಭಯಾಗ್ರಫಿ', ಡಾ|| ಎಸ್. ಎಲ್. ಭೈರಪ್ಪನವರ 'ಭಿತ್ತಿ', ಡಾ|| ರಾಜ್‌ಕುಮಾರ್ ಅವರ 'ಕಥಾನಾಯಕನ ಕಥೆ', ಸ. ಜ. ನಾಗಲೋಟಿ ಮಠ ಅವರ 'ಬಿಚ್ಚಿದ ಜೋಳಿಗೆ', ಕುಂ. ವೀರಭದ್ರಪ್ಪನವರ 'ಗಾಂಧಿ ಕ್ಲಾಸು' ಪ್ರಮುಖವಾದ ಆತ್ಮಕಥೆಗಳು. ಮಾಸ್ತಿ, ರಾಜರತ್ನಂ, ದೇಜಗೌ, ಎಚ್.ಎಸ್.ವಿ. ಅವರ ಕೃತಿಗಳು ಗಮನಾರ್ಹ. ಇನ್ನು ಇಲ್ಲಿಯ ಕೆಲವು ಕೃತಿಗಳು ವಿವಿಧ ಭಾಷೆಗಳಲ್ಲಿ ಅನುವಾದಿತವಾಗಿವೆ. ಇವುಗಳಲ್ಲಿಯ ಸತ್ಯತೆ, ಗಾಂಭೀರ್ಯ ನಿರೂಪಣೆ, ಸರಳ ಕಥನ ಶೈಲಿ ಎಲ್ಲರ ಮನ ಸೆಳೆದಿವೆ.

ಮನಸ್ಸು ಮಾಗಿದಾಗ, ಅನುಭವದ ಗಣಿ ಆದಾಗ, ಬದುಕಿನಲ್ಲಿ ತಾನು ಕಂಡ-ಉಂಡ ನೋವು-ನಲಿವು, ಎಡರು-ತೊಡರು, ಕಷ್ಟ-ಸುಖಗಳನ್ನು ಅನುಭವಿಸಿ, ಅವುಗಳನ್ನೆಲ್ಲ ಮೆಟ್ಟಿನಿಂತು ಜೀವನದಲ್ಲಿ ಯಶಸ್ಸುಗಳಿಸಿ ಒಂದು ನಿರ್ದಿಷ್ಟ ಗುರಿ ತಲುಪಿದಾಗ, ಮಾಗಿದ ಜೀವನದ ಸಂಧ್ಯಾ ಸಮಯದಲ್ಲಿ ಆತ್ಮಚರಿತ್ರೆ ಬರೆಯುವುದು ಸೂಕ್ತ. ಆದರೆ ಅನುಭವ ಪಕ್ವವಾದಾಗ ಯಾವ ಸಮಯವಾದರೂ ಬರೆಯಬಹುದು. ಆತ್ಮಕಥೆ ಸಮಾಜಕ್ಕೆ ಧನಾತ್ಮಕವಾದ ಸಂದೇಶವನ್ನು ಕೊಡಬೇಕು. ಆತ್ಮಕಥೆ ಬರೆಯುವ ವ್ಯಕ್ತಿಯ ಜೀವನ ಸಿದ್ಧಾಂತ ಮಾದರಿಯದಾಗಿರಬೇಕು. ಗಾಂಧೀಜಿ ತಮ್ಮ ಆತ್ಮಚರಿತ್ರೆಯಲ್ಲಿ ತಮ್ಮ ಕಳ್ಳತನ, ಸುಳ್ಳತನ, ಲೈಂಗಿಕತೆ ಎಲ್ಲವನ್ನು ಬಚ್ಚಿಡದೇ ಬಿಚ್ಚಿಟ್ಟಿದ್ದಾರೆ. ತಮ್ಮ ತಂದೆಯ ಸಾವಿನ ಸಂದರ್ಭದಲ್ಲಿ ತಾವು ರತಿಕ್ರೀಡೆಯಲ್ಲಿ ತೊಡಗಿದ್ದು, ಪತ್ನಿ ಗರ್ಭಿಣಿಯಾಗಿದ್ದಾಗ ಅತಿ ಕಾಮದಾಹದಿಂದ ಗರ್ಭದಲ್ಲಿಯ ಮಗುವಿನ ಸಾವಿಗೆ ಕಾರಣವಾಗಿದ್ದು, ಮುಂದೆ ಇಂದ್ರಿಯನಿಗ್ರಹವನ್ನು ಕೈಗೊಂಡಿದ್ದು, ಎಲ್ಲವೂ ಜಗತ್ತಿಗೆ ಪಾಠ ಎನಿಸೀತು. ಇದೇ ರೀತಿಯಲ್ಲಿ ಬಡತನದ ದೆಸೆಯಿಂದ ಪೇಪರ್ ಮಾರುತ್ತಿದ್ದ ಹುಡುಗ, ಬಾಲ್ಯದಲ್ಲಿ ಹಿಂದೂ ಧರ್ಮ ಗುರುಗಳಿಂದ ಪ್ರಭಾವಿತನಾಗಿ, ಮುಂದೆ ಈ ದೇಶದ ರಾಷ್ಟ್ರಪತಿ ಆದ ಡಾ|| ಅಬ್ದುಲ್ ಕಲಾಂ ಅವರ ಜೀವನ ಸಹ ಇತರರಿಗೆ ಅದರಲ್ಲೂ ಯುವಜನತೆಗೆ, ಮಾದರಿಯಾಗಿದೆ.




ಆತ್ಮಕಥನ ಬರೆಯುವವರಿಗೆ ತಮ್ಮ ಸಾಮರ್ಥ್ಯಗಳ ಬಗ್ಗೆ ಪರಿಪೂರ್ಣ ಅರಿವು ಇರಬೇಕು. ತಮ್ಮ ಜೀವನದ ಘಟನೆಗಳ ನಿರೂಪಣೆ ಮಾಡುವಾಗ ವಿಶೇಷ ಭಾವೋದ್ರೇಕವಾಗಬಾರದು. ಆತ್ಮಕಥೆಯಲ್ಲಿ ಬರುವ ವಿವಿಧ ಘಟನೆಗಳು ಅಂಕಿ-ಅಂಶಗಳು ಕಾಲಾನುಕ್ರಮದಲ್ಲಿರಬೇಕು. ಕೆಲವರು ಆತ್ಮಕಥೆಯಲ್ಲಿ ಕೇವಲ ಸ್ಮರಣೆಗಳನ್ನು ಉಲ್ಲೇಖಿಸುವುದುಂಟು. ಸರ್ ಎಂ. ವಿಶ್ವೇಶ್ವರಯ್ಯನವರ ಉದ್ಯೋಗಜೀವನದ ಸ್ಮರಣೆಗಳು ಮತ್ತು ರವೀಂದ್ರನಾಥ ಟಾಗೋರ್ ಅವರ ನೆನವರಿಕೆಗಳು ಸ್ಮರಣೆಗಳಿಗೆ ಉತ್ತಮ ಗ್ರಂಥಗಳು.

''ಬೇರೆಯವರ ಬಗ್ಗೆ ಸುಳ್ಳನ್ನು ನನ್ನ ಬಗೆಗಿನ ಎಲ್ಲ ನಿಜವನ್ನು ನನಗೆ ಹೇಳಲು ಇಷ್ಟವಿಲ್ಲ. ಆದ್ದರಿಂದಲೇ ನಾನು ಆತ್ಮಚರಿತ್ರೆ ಬರೆಯುವುದಿಲ್ಲ'' ಎಂದಿದ್ದಾರೆ ವಾಜಪೇಯಿಯವರು. ಆದರೆ ರಾಜಕೀಯದ ಘಟನೆಗಳ ಕುರಿತು ವಾಜಪೇಯಿ, ಅದ್ವಾನಿ ಅವರು ಸ್ಮರಣಗ್ರಂಥ ರಚಿಸಿದ್ದಾರೆ. ಎಸ್. ನಿಜಲಿಂಗಪ್ಪನವರ ಆತ್ಮಚರಿತ್ರೆ 'ನನ್ನ ರಾಜಕೀಯ ಜೀವನ' ಪ್ರಕಟವಾಗಿದೆ. ಇತ್ತೀಚೆಗೆ ಮಾಜಿ ಪ್ರಧಾನಿ ದೇವೇಗೌಡರು ಆತ್ಮಚರಿತ್ರೆ ಬರೆಯುತ್ತಿದ್ದಾರೆ.

ಬೀಚಿಯವರ 'ಭಯಾಗ್ರಫಿ' ಅತಿ ವಿಶಿಷ್ಟವಾಗಿದ್ದು, ತನಗೆ ಹೇಗೆ ಬೇಕೆನ್ನಿಸಿತೋ ಹಾಗೆ ಬಾಳಿದರು ಬೀಚಿ. ಅವರಿಗೆ ೫೬ ವರ್ಷವಾದಾಗ ತಮಗೆ ಬೇಕೆನಿಸಿದ್ದನ್ನು ಓದಿದರು, ಬರೆದರು. 'ಮರಳಿ ಮಣ್ಣಿಗೆ' ಓದಲಿಲ್ಲ. ಜಾತಿಗೆ ನಿಷಿದ್ಧವಾದ ಮಾಂಸಾಹಾರ ಸೇವಿಸಿದರು. ಗಾಂಧಿ ಜಯಂತಿ ದಿನ ಪಾನಪ್ರಿಯರಾದರು. ಲಂಪಟ ಮಠಾಧೀಶರ ಬಗ್ಗೆ ಬರೆದರು.

ಲಂಕೇಶರು ತಮ್ಮ 'ಹುಳಿ ಮಾವಿನ ಮರ'ದಲ್ಲಿ ತಮ್ಮ ವೈಯಕ್ತಿಕ ವಿಷಯಗಳನ್ನು ಅಮೂರ್ತವಾದ ಕಾವ್ಯಶೈಲಿಯಲ್ಲಿ ಹೇಳಿದ್ದಾರೆ. ಇಂಥ ಆತ್ಮಚರಿತ್ರೆಗಳಲ್ಲಿ ಮನುಷ್ಯನ ದೌರ್ಬಲ್ಯ, ಲೋಲುಪತೆಗಳು ಹೆಚ್ಚು ಆಕರ್ಷಕವಾಗಿರುತ್ತವೆ. ಕೆಲವೊಂದು ಆತ್ಮಕಥೆಗಳಲ್ಲಿ ಆತ್ಮರತಿ ಇರುತ್ತದೆ. ಇಲ್ಲಿ ರಾಷ್ಟ್ರಕವಿ ಗೋವಿಂದ ಪೈ ಅವರ ಈ ಮಾತು ಪ್ರಸ್ತುತ ಎನಿಸುವುದು. ''ಮನುಷ್ಯನ ಹುಟ್ಟು ಅಶ್ಲೀಲತೆಯಿಂದ ಕೂಡಿದೆ. ಆದ ಕಾರಣ ಅದು ಸಾಹಿತ್ಯದಲ್ಲಿ ಇರಬಾರದೆಂದಲ್ಲ, ಆದರೆ ಅದಕ್ಕೆ ನೈತಿಕ ಗೆರೆ ಇರಬೇಕು.''

ಆತ್ಮಕಥನ ಆತ್ಮಪ್ರಶಂಸೆ ಆಗಬಾರದು. ಆದಷ್ಟು ಮಟ್ಟಿಗೆ ಮೌಲ್ಯಯುತ ಘಟನೆಗಳ, ಮೌಲ್ಯದಿಂದ ಕೂಡಿದ ವ್ಯಕ್ತಿಗಳ ನಿರೂಪಣೆ ಅವಶ್ಯ. ಸಾಹಿತ್ಯಿಕ ಭಾಷೆ ರಸವತ್ತಾಗಿರಬೇಕು. ಆಗ ಆತ್ಮಕಥನಗಳು ಐತಿಹಾಸಿಕ, ಸಾಮಾಜಿಕ ಸಾಂಸ್ಕೃತಿಕ ಪರಿಭಾವನೆಗಳಾಗುತ್ತವೆ.

**ಯು. ಎನ್. ಸಂಗನಾಳಮಠ**
ವಿಶ್ರಾಂತ ಉಪನ್ಯಾಸಕರು - ಲೇಖಕರು,
'ಜ್ಯೋತಿರ್ಲಿಂಗ', ೧ನೇ ತಿರುವು, ಹೈಸ್ಕೂಲ್ ಬಡಾವಣೆ
ಶಿವಮೊಗ್ಗ ರಸ್ತೆ, ಹೊನ್ನಾಳಿ - ೫೭೭ ೨೧೭, ದಾವಣಗೆರೆ ಜಿಲ್ಲೆ

**ಕೆ. ಎಸ್. ಪಾರ್ಥಸಾರಥಿ**

ರಿಸರ್ವ್ ಬ್ಯಾಂಕು ವರ್ಷದಲ್ಲಿ ಎಂಟು ಬಾರಿ, ೪೫ ದಿವಸಗಳಿಗೊಮ್ಮೆ ತನ್ನದೇ ಆರ್ಥಿಕ ಸಮೀಕ್ಷೆ ನಡೆಸುತ್ತದೆ. ಆ ಸಮೀಕ್ಷೆಯನ್ನು ಆಧರಿಸಿ, ಬಡ್ಡಿಯ ದರವನ್ನು ಹೆಚ್ಚಿಸುವುದು - ಇಳಿಸುವುದು, ಬ್ಯಾಂಕುಗಳು ತಮ್ಮ ಠೇವಣಿಯ ಇಂತಿಷ್ಟನ್ನು (ಸಿಆರ್‌ಆರ್) ರಿಸರ್ವ್ ಬ್ಯಾಂಕಿನಲ್ಲಿ ಠೇವಣಿ ಇಡಬೇಕು, ಅದೆಷ್ಟಿರಬೇಕು, ಅದಕ್ಕೆ ತಾನು ಎಷ್ಟು ಬಡ್ಡಿ ನೀಡುತ್ತೇನೆ, ಹಾಗೂ ಬ್ಯಾಂಕುಗಳು ರಿಸರ್ವ್ ಬ್ಯಾಂಕಿನಿಂದ ಪಡೆಯುವ ಸಾಲಕ್ಕೆ ಬಡ್ಡಿ ದರ ಎಷ್ಟು ಎಂದು ತನ್ನ ನೀತಿಯನ್ನು ಪರಿಷ್ಕರಿಸುತ್ತದೆ. ಹಾಗೆಯೇ ಬ್ಯಾಂಕುಗಳು ಸಾಲಕ್ಕೆ ಒತ್ತೆ ಇಟ್ಟುಕೊಂಡ ಆಸ್ತಿಗಳ ಮೌಲ್ಯ ಸಮರ್ಪಕವೆ, ನೀಡಿದ ಸಾಲವು, ಠೇವಣಿಯ ಶೇಕಡ ಎಷ್ಟಿರಬೇಕು (ಸಿಸಿಆರ್), ಇಲ್ಲದಿದ್ದರೆ ಏನು ಮಾಡಬೇಕು ಎನ್ನುವ ಎಚ್ಚರಿಕೆಯನ್ನು ನೀಡುತ್ತದೆ. ಬ್ಯಾಂಕುಗಳು ಸಾಲ ನೀಡಿದಾಗ, ರಾಜಕೀಯ ಒತ್ತಡದಿಂದ ಅಥವಾ ಬಡ್ಡಿಯ ಆಸೆಗೆ ಕೆಟ್ಟ ಸಾಲಗಳನ್ನು ಅಂದರೆ, ಸಾಕಷ್ಟು ಆಧಾರವೂ ಇಲ್ಲದೆ, ವಸೂಲಿ ಮಾಡಲಾಗದ ಸಾಲಗಳನ್ನು ನೀಡುವ, ದಳ್ಳಾಳಿ ಪೇಟೆಯ ಜೂಜಾಟಕ್ಕೆ ಯದ್ವಾತದ್ವಾ ಹಣ ನೀಡುವ ಪ್ರವೃತ್ತಿ ಇವುಗಳನ್ನೆಲ್ಲಾ ಗಮನಿಸಿ, ಟೀಕಿಸಿ, ಎಚ್ಚರಿಕೆ ನೀಡುತ್ತದೆ. ಬ್ಯಾಂಕುಗಳು ನೀಡಿದ ಸಾಲದ ಒಂದಂಶವನ್ನು ಸವಕಲು ನಿಧಿಯಂತೆ ಕಾದಿರಿಸಲು, ಅದು ಎಷ್ಟಿರಬೇಕೆಂದು ನಿಗದಿಪಡಿಸಲೂ ನೀತಿ ನಿರೂಪಿಸುತ್ತದೆ. ಈ ಯಾವ ಮಾನಿಟರಿ ನೀತಿಯನ್ನೂ ಸರ್ಕಾರ ಮಾಡುವ ಫಿಸ್ಕಲ್ ಹಣಕಾಸು ನೀತಿಗಳೊಡನೆ ಸಮೀಕರಿಸಬಾರದು. ಈ ಎರಡೂ ನೀತಿಗಳ ಉದ್ದೇಶವೇ ಬೇರೆ ಬೇರೆ. ಅವೆರಡೂ ಒಮ್ಮೊಮ್ಮೆ ಸಹಕರಿಸಿದಂತೆ ಅಥವಾ ವಿರೋಧಿಸಿದಂತೆ ಕಂಡುಬಂದರೂ ಅದು ಸಾಂದರ್ಭಿಕವೇ ವಿನಾ ಉದ್ದೇಶಿತವೇ ಆಗಬೇಕಿಲ್ಲ. ರಿಸರ್ವ್ ಬ್ಯಾಂಕಿನ ಮುಖ್ಯ ಕೆಲಸ ಆರ್ಥಿಕ ಮತ್ತು ಸಾಧಾರಣ ವ್ಯವಹಾರಗಳಿಗೆ ಅಗತ್ಯವಾದ ಹಣವನ್ನು – ಅಂದರೆ ನೋಟು ನಾಣ್ಯ - ಕರೆನ್ಸಿಯನ್ನು ಕಾಲಕಾಲಕ್ಕೆ ಸಾಕಷ್ಟು ಪ್ರಮಾಣದಲ್ಲಿ, ಅಂದರೆ ಅಗತ್ಯಕ್ಕೆ ಮೀರದೆ, ಅಗತ್ಯಕ್ಕೆ ಸಾಕಾಗುವಷ್ಟು ಒದಗಿಸುವುದು.

ಪ್ರಸಕ್ತ ವರ್ಷದಲ್ಲಿ ಸರ್ಕಾರ ತನ್ನ ಬಜೆಟ್ ಕೊರತೆ ನೀಗಿಸಿಕೊಳ್ಳಲು ಸಾರ್ವಜನಿಕ ಕ್ಷೇತ್ರದ ಆಸ್ತಿಯನ್ನು ಮಾರಿ ಸುಮಾರು ೪೦,೦೦೦ ಕೋಟಿ ರೂ. ಗಳಿಸಲು ಮುಂದಾಗಿದೆ. ಗ್ಯಾಸ್, ಪೆಟ್ರೋಲ್, ಡೀಸಲ್ ಬೆಲೆ ಏರಿಸಿದೆ. ರಸಗೊಬ್ಬರದ ಬೆಲೆ ಏರಿಸಿದೆ. ಆದರೆ ಶೇಕಡ ೫.೮ರಷ್ಟಿನ ಬಜೆಟ್ಟಿನ ಕೊರತೆ ನೀಗಿಸಲು ಇದು ಯಾತಕ್ಕೂ ಸಾಲದು. ಧನಿಕರಿಂದ ಹೆಚ್ಚು ತೆರಿಗೆ ವಸೂಲಿ, ರಕ್ಷಣಾ ಕ್ಷೇತ್ರದ ದುಂದುವೆಚ್ಚದ ಕಡಿತ, ಹಲವು ಹೆಸರುಗಳ ತೆರಿಗೆಗಳ ವಿನಾಯ್ತಿ ಮುಂತಾದುವುಗಳನ್ನು ಸರಿಪಡಿಸದೆ, ಭಾರತದಲ್ಲೂ, ಅಮೆರಿಕದಲ್ಲೂ ಯೂರೋಪಿನಲ್ಲೂ ಬಜೆಟ್ ತೂಗಿಸಲು ಸಾಧ್ಯವಿಲ್ಲ. ಹೀಗೆ ತೂಗಿಸದೆ ಪ್ರಜಾಕ್ಷೋಭೆ ತಡೆಯಲಾಗುವುದಿಲ್ಲ. ಚೀನಾದಲ್ಲಿ ಈಗ ಹಣದುಬ್ಬರ ಶೇಕಡ ೨ಕ್ಕಿಂತ ಕಡಿಮೆಯಾಗಲು ಮುಖ್ಯ ಕಾರಣ ಅದು ಸರ್ಕಾರದ ಆಂತರಿಕ ವೆಚ್ಚವನ್ನು ಹೆಚ್ಚಿಸಿ, ಜನರ ಆದಾಯ ಹೆಚ್ಚಿಸಲು ಮುಂದುವರಿದಿರುವುದು. ಆದರೆ ನಾವು ರಸ್ತೆ ನಿರ್ಮಾಣ, ಶಿಕ್ಷಣ ಕ್ಷೇತ್ರ ಇವಕ್ಕೆಲ್ಲಾ ವಿದೇಶೀ ಹಣಕ್ಕೆ ಕಾಯ್ದು ಕುಳಿತಿರುವುದು ನಾಚಿಕೆಗೇಡು. ಖಾಸಗಿ ಕ್ಷೇತ್ರದಂತೆಯೇ, ಸರ್ಕಾರವೂ ಈ ಕ್ಷೇತ್ರಗಳಲ್ಲಿನ ತನ್ನ ಪಾಲಿನ ಕರ್ತವ್ಯ ನಿರ್ವಹಿಸುವುದು ಸಮಾಜವಾದವೇನೂ ಅಲ್ಲ. ಅದು ಸಾಂಪ್ರದಾಯಿಕ ಬಂಡವಾಳದ್ದೇ ಮಾರ್ಗ. ಆದರೆ ಇಂದು ನಮಗೆ ಸಿಕ್ಕಿರುವುದು ದರೋಡೆಕೋರ ದಗಲ್‌ಬಾಜಿ ಕಾಳಸಂತೆಯ ಕ್ರೋನಿ ಕ್ಯಾಪಿಟಲಿಸಂ.

# ಚಿದಂಬರಂ ಮತ್ತು ಗ್ಯಾಂಗಿನ ನಡೆ ಏಕಾಂಗಿಯದಲ್ಲ, ಏಕಮುಖವಾದುದು






ಇಲ್ಲಿ ಅತಿ ಹೆಚ್ಚು ಅಥವಾ ಅತಿ ಕಡಿಮೆ ಪೂರೈಕೆ ಹಣದ ಮೌಲ್ಯಅಪಮೌಲ್ಯವಾಗಿ ಪರಿಣಮಿಸಿ, ಅದು ಆರ್ಥಿಕತೆಗೆ ಪೆಟ್ಟು ನೀಡುತ್ತದೆ. ಹೀಗಾಗಿ, ಸರ್ಕಾರದ ಆರ್ಥಿಕ ಇಲಾಖೆಗೂ, ರಿಸರ್ವ್ ಬ್ಯಾಂಕಿಗೂ ಒಂದು ಸಾವಯವ ಸಂಬಂಧವಿದೆ. ಆದರೆ ರಿಸರ್ವ್ ಬ್ಯಾಂಕು ಸ್ವಾಯತ್ತ; ಯಾರ ಅಧೀನದಲ್ಲೂ ಇಲ್ಲ; ಸರ್ಕಾರ ಅದನ್ನು ಹೀಗೆಯೇ ಮಾಡು ಅಂತ ನಿರ್ದೇಶನ ನೀಡುವಂತಿಲ್ಲ. ಈ ಹಿಂದೆ ಒಮ್ಮೆ 'ಹೊಸತು' ರಿಸರ್ವ್ ಬ್ಯಾಂಕಿನ ಕಾರ್ಯಭಾರ ಕುರಿತಂತೆ ಲೇಖನ ಪ್ರಕಟಿಸಿದೆ. ಈಗ ಇದರ ಪುನಃಚರಣಕ್ಕೆ ಸಂದರ್ಭವೆಂದರೆ ಈಗಷ್ಟೆ ಪ್ರಕಟವಾದ ರಿಸರ್ವ್ ಬ್ಯಾಂಕ್ ನೀತಿ, ಅದನ್ನು ಕುರಿತು ಸರ್ಕಾರದಿಂದ, ವಾಣಿಜ್ಯ ಲೋಕದಿಂದ ಬಂದ ಕೆಲವು ಟೀಕೆ, ಕಟು ವಿಮರ್ಶೆಗಳು. ರಿಸರ್ವ್ ಬ್ಯಾಂಕ್ ಸರ್ಕಾರಕ್ಕೆ ಸೆಡ್ಡು ಹೊಡೆದಿದೆ. ಬಡ್ಡಿ ದರ ಇಳಿಸಿದೆ ಎಂಬ ಭಾವನೆ ಮತ್ತು ನಮ್ಮಲ್ಲಿ ಕೆಲವರಿಗೆ ಇದರಿಂದ ಚಿದಂಬರಂಗೆ ಆದ ಮುಖಭಂಗ ಎಂದು ಭಾವಿಸಿ, ಉಂಟಾಗಿರುವ ಸಂತೋಷ! ವಾಸ್ತವವೆಂದರೆ ಈ ತಿಳಿವಳಿಕೆ ಸರಿಯಲ್ಲ. ಈಗ ಪ್ರಕಟವಾಗಿರುವ ಅಭಿಪ್ರಾಯ ಭೇದ ಬೂರ್ಷ್ವಾ ವ್ಯವಸ್ಥೆಯೊಳಗಿನ, ಮನೆಯೊಳಗಿನ ಭಿನ್ನಾಭಿಪ್ರಾಯವೇ ವಿನಾ ಇದರಲ್ಲಿ ಯಾವುದೇ ತಾತ್ವಿಕತೆ ಇಲ್ಲ. ಬಹುಶಃ ಮುಂದೆ ಜನವರಿಯಲ್ಲಿ ರಿಸರ್ವ್ ಬ್ಯಾಂಕ್ ಬಡ್ಡಿ ದರವನ್ನು ಇಳಿಸುತ್ತದೆ. ಈ ಮಧ್ಯೆ ಸರ್ಕಾರ ಏನು ಮಾಡುತ್ತದೆ, ಅಂತರರಾಷ್ಟ್ರೀಯ ವಾಣಿಜ್ಯ ಪರಿಸ್ಥಿತಿ ಯಾವ ನಿಟ್ಟಿನಲ್ಲಿ ಹೊರಗೆಡವುತ್ತದೆ ಎನ್ನುವುದನ್ನು ರಿಸರ್ವ್ ಬ್ಯಾಂಕ್ ಗಮನಿಸಬೇಕೇ ವಿನಾ, ತನ್ನ ನೀತಿಯಿಂದ ಆಳುವ ಪಕ್ಷಕ್ಕೆ ಯಾವ ರಾಜಕೀಯ ಲಾಭ, ನಷ್ಟ ಆಗುತ್ತದೆ ಎಂದು ನೋಡತಕ್ಕದ್ದಲ್ಲ. ಇಂದಿನ ಗವರ್ನರ್ ಆ ಸ್ವಾಯತ್ತತೆಯ ಛಲವನ್ನು ಉಳಿಸಿಕೊಳ್ಳುವವರಂತೆ ಇಲ್ಲಿಯವರೆಗೂ ಕಂಡುಬಂದಿದೆ. ಅದು ಅರ್ಥಶಾಸ್ತ್ರಿಗಳ ಮೆಚ್ಚುಗೆಯನ್ನು ಪಡೆದಿದೆ. ಎಡಪಂಥೀಯ ಚಿಂತನೆಗೆ ಈ ಬೆಳವಣಿಗೆಯಿಂದ ಯಾವ ಪರಿಣಾಮವೂ ಇಲ್ಲ. ಕಾರಣ ಅದಕ್ಕೆ ಈ ರೀತಿಯ ವ್ಯವಹಾರದ ಮೇಲೆಯೇ ಮೂಲ ಭಿನ್ನಾಭಿಪ್ರಾಯವಿರುವುದು. ಈಗ ಏನಿದ್ದರೂ ಬೂರ್ಷ್ವಾ ವರ್ಗದೊಳಗಿನ ಈ ಚರ್ಚೆಯನ್ನು ಅವರದೇ ನಿಲುವಿನಲ್ಲಿ ಚರ್ಚಿಸಬಹುದು, ಅಷ್ಟೆ.

ರಿಸರ್ವ್ ಬ್ಯಾಂಕುಗಳು ಐಎಂಎಫ್ - ಅಂತರ ರಾಷ್ಟ್ರೀಯ ಹಣಕಾಸು ಸಂಸ್ಥೆ ಕಾಲಕಾಲಕ್ಕೆ ನೀಡುವ ಸಲಹೆಗಳನ್ನು ಸ್ವೀಕರಿಸುತ್ತಾ ಬೆಳೆಯುತ್ತವೆ. ಅದರಲ್ಲಿ ಬಂಡವಾಳದ ಪರ ಚಿಂತನೆ ಇರುತ್ತದೆಯಷ್ಟೆ. ಸರ್ಕಾರಗಳು ಬಂಡವಳಿಗ ಸ್ವರೂಪದವೇ ಆದರೂ, ರಾಜಕೀಯದಿಂದಾಗಿ, ತಾವು ಜನಪರ ಎಂದು ಬಿಂಬಿಸಿ ಕೊಳ್ಳುತ್ತವೆ. ಹಾಗಾಗಿ ಅವುಗಳು ಅನುಸರಿಸುವ, ಅವರದೇ ಆರ್ಥಿಕತೆಯಲ್ಲಿ ಸಮರ್ಥನೀಯವಲ್ಲದ, ಆದರೆ ಜನಪ್ರಿಯವಾದ ನೀತಿಗಳನ್ನು ಆಗಾಗ್ಗೆ ಸ್ವೀಕರಿಸುತ್ತವೆ. ಅವುಗಳು ಬಂಡವಾಳದ ಪರವಾದ ಆರ್ಥಿಕತೆಯನ್ನು ಏರುಪೇರು ಮಾಡಿ, ಹಣಕಾಸಿನ ನೀತಿ, ಹಣದ ಚಲಾವಣೆಯನ್ನು ತೀವ್ರವಾಗಿ ಪ್ರಭಾವಿಸುತ್ತವೆ. ಈ ಚಲಾವಣೆಯ ಆರೋಗ್ಯದ ಹೊಣೆ ಹೊತ್ತ ರಿಸರ್ವ್ ಬ್ಯಾಂಕ್, ಅದನ್ನು ಆದಷ್ಟೂ ಸರಿದೂಗಿಸಲು ತನ್ನದೇ ಹಣದ ನೀತಿಯನ್ನು - ಮಾನಿಟರಿ ಪಾಲಿಸಿ - ನಿರೂಪಿಸ ಬೇಕಾಗುತ್ತದೆ. ಅದು ಬಹಳ ಕಷ್ಟವಾದಾಗ, ರಿಸರ್ವ್ ಬ್ಯಾಂಕ್ ಸರ್ಕಾರದ ನೀತಿಯನ್ನು ಸಲಹಾ ರೂಪದಲ್ಲಿ ವಿಮರ್ಶಿಸಿ ಟೀಕಿಸುವುದು ಅನಿವಾರ್ಯವಾಗುತ್ತದೆ. ಸರ್ಕಾರ ತನ್ನ ವೆಚ್ಚಗಳಿಗೆ ಆದ್ಯತೆ ನಿರ್ಧರಿಸದೆ ಹೋಗುವುದು, ಆದಾಯವನ್ನು ರೂಢಿಸಿಕೊಳ್ಳದೆ ಹೋಗುವುದು, ಆದಾಯಕ್ಕೆ ಮಿತಿಮೀರದ ಹಣವನ್ನು ಅನುತ್ಪಾದಕವಾಗಿ ವೆಚ್ಚ ಮಾಡುವುದು, ಇವೆಲ್ಲಾ ಮಾನಿಟರಿ ಪಾಲಿಸಿ ಮಾಡುವ ರಿಸರ್ವ್ ಬ್ಯಾಂಕಿಗೆ ಮುಜುಗರ ಉಂಟು ಮಾಡುತ್ತವೆ. ಅವುಗಳ ಪರಿಣಾಮ ಹಣದುಬ್ಬರ, ಸಾರ್ವಜನಿಕರಿಗೆ ಬೆಲೆ ಏರಿಕೆ ಮತ್ತು ಅವುಗಳ ಸಾಮಾಜಿಕ ದುಷ್ಪರಿಣಾಮ ಗಳಾಗುತ್ತವೆ. ಹಾಗೆಯೇ ಕೆಲವೊಮ್ಮೆ ಹಣದ ಕೊರತೆ, ಹೂಡಿಕೆಗೆ ಲಭ್ಯತೆ ಕಡಿಮೆ, ಉತ್ಪಾದನೆಯಲ್ಲಿ ಕಡಿತ ಆದರೂ ಬೆಲೆಯಲ್ಲಿ ಲಾಭ ನೀಡಿದಷ್ಟು ಕುಸಿತವೂ ಆಗಬಹುದು. ರಿಸರ್ವ್ ಬ್ಯಾಂಕು ಈ ಸಂದರ್ಭಗಳನ್ನು ಸಂಶೋಧಿಸಿ, ವಿಶ್ಲೇಷಿಸಿ, ತನ್ನ ಅಭಿಪ್ರಾಯವನ್ನು ಪದೇ ಪದೇ ಹೇಳುತ್ತಲೇ ಇರುತ್ತದೆ. ಹಾಗೂ ತನಗೆ ಲಭ್ಯವಿರುವ ಬಡ್ಡಿ ಕಡಿತ, ಏರಿಕೆ ಮುಂತಾದ ಹಲವು ಸಾಧನಗಳನ್ನು ಬಳಸಿ ತನ್ನ ಪಾಲಿನ ಕೆಲಸ ಮಾಡುತ್ತದೆ. ಆದರೆ ಸರ್ಕಾರ ತನ್ನ ಪಾಲಿನ ನೀತಿ ಪರಿಷ್ಕರಣೆ ಮಾಡದಿದ್ದರೆ ಅದು ಆರ್ಥಿಕತೆಗೆ ದುಷ್ಪರಿಣಾಮ ವಾಗುವುದು ಖಂಡಿತ. ಇಂದಿನ ವಿಷಯವೆಂದರೆ ಸರ್ಕಾರ ತನ್ನ ಪಾಲಿನ ಕೆಲಸ ಮಾಡದೆ, ರಿಸರ್ವ್ ಬ್ಯಾಂಕ್ ಬಡ್ಡಿ ದರವನ್ನು ಇನ್ನೂ ಇಳಿಸಲು ಸಾಧ್ಯವಿಲ್ಲ ಎಂದು ರಿಸರ್ವ್ ಬ್ಯಾಂಕ್ ಸೂಚ್ಯವಾಗಿ ಹೇಳಿದ್ದು, ಅದರ ವಿರುದ್ಧ ಚಿದಂಬರಂ ಕೆಂಡ ಕಾರಿರುವುದು ತಮಾಷೆ ಯಾಗಿದೆ. ತಮಾಷೆ ಏಕೆ ಅಂದರೆ ಉದ್ಯಮಿಗಳ ಸಂಘಗಳು ಅದೇ ದಿನ ಆ ನೀತಿಗೆ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿವೆ.

ಇಷ್ಟಕ್ಕೂ ಚಿದಂಬರಂ ವಾದ ಏನು? ಸರ್ಕಾರ ತನ್ನ ಪಾಲಿನ ಕೆಲಸ ಮಾಡಿದೆ ಎಂದು ಹೇಳುತ್ತಾರೆ ಅವರು. ಅದೇನು? ಚಿಲ್ಲರೆ ವ್ಯಾಪಾರದಲ್ಲಿ ವಿದೇಶೀ ಬಂಡವಾಳಕ್ಕೆ ಆಹ್ವಾನ, ಪಿಂಚಣಿ ಫಂಡು, ವಿಮಾ ಕ್ಷೇತ್ರ, ವಿಮಾನ ಯಾನಗಳಲ್ಲಿ ವಿದೇಶೀ ಬಂಡವಾಳಕ್ಕೆ ಅವಕಾಶ ಕಲ್ಪಿಸಿರುವುದು; ಇವೆಲ್ಲ ಸರಿಯೇ ತಪ್ಪೇ ಎನ್ನುವ ವಿಷಯ ಬೇರೆ. ಇಲ್ಲಿ ಈ ಕ್ಷೇತ್ರಗಳಿಗೆ ವಿದೇಶೀ ಬಂಡವಾಳ ಹರಿದುಬರಲು ಅನೇಕ 'ರೆ'ಗಳಿವೆ. ಮೊದಲಿಗೆ ಪಾರ್ಲಿಮೆಂಟ್‌ನಲ್ಲಿ ಇವೆಲ್ಲಾ ಚರ್ಚಿತವಾಗುವವೇ? ಚಿಲ್ಲರೆ ವ್ಯಾಪಾರದ ದೊರೆ ವಾಲ್‌ಮಾರ್ಟ್ ಭಾರತದಲ್ಲಿ ಎಲ್ಲ ನೀತಿಗಳೂ ನಿರೂಪಿತವಾದ ಮೇಲೆ, ಮೊದಲನೆಯ ಅಂಗಡಿ ತೆರೆಯಲು ಎರಡು ವರ್ಷಗಳಾದರೂ ಬೇಕು ಅನ್ನುತ್ತಾನೆ. ಅಂತರರಾಷ್ಟ್ರೀಯವಾಗಿ ಹೂಡಿಕೆಗೆ ಅವಕಾಶ ಇಲ್ಲದಷ್ಟು ಬಂಡವಾಳವಿದೆ ಎನ್ನುವ ಗ್ರಹಿಕೆ ೨೦೦೮-೧೦ ರಲ್ಲಿತ್ತು. ಆದರೆ ಈಗ ಅಮೆರಿಕವೂ ಸೇರಿದಂತೆ ಬಂಡವಾಳ ಲೋಕ ಸ್ವಲ್ಪ ಪುನರ್ಜೀವ ಪಡೆಯುತ್ತಿದ್ದು, ಇರುವ ಬಂಡವಾಳಕ್ಕೆ ಅಲ್ಲೇ ಹೂಡಿಕೆಗೆ ಅವಕಾಶವಿದೆ. ಆಂತರಿಕವಾಗಿ ಹೂಡಿಕೆಗೆ ಬ್ಯಾಂಕುಗಳು ಸಾಕಷ್ಟು ಬಂಡವಾಳ ಒದಗಿಸುತ್ತಿವೆ. ಈ ಸಾರಿಯೂ ಬ್ಯಾಂಕು ಸಿಸಿಆರ್ ಲೆಕ್ಕ ಪರಿಷ್ಕರಿಸಿ, ೧೭,೫೦೦ ಕೋಟಿ ರೂ. ಗಳಷ್ಟು ನಗದು ಹಣ ಒದಗಿಸಿದೆ ಹೂಡಿಕೆಗೆ. ಆರ್ಥಿಕತೆಯ ಬಹುಮುಖ್ಯ ಅಂಗವಾದ ರಿಯಲ್



*ನಾನಿರುವಾಗ ಪಾರ್ಲಿಮೆಂಟ್ ಬೇರೆ ಏಕೆ!*

ಎಸ್ಟೇಟ್ ಕಂಪನಿಗಳ ವ್ಯವಹಾರಕ್ಕೆ ಯಾವುದೇ ಬಂಡವಾಳದ ಕೊರತೆ ಉಂಟಾಗಿಲ್ಲ. ಬಹುಶಃ ಇಂದು ಕೈಗೊಂಡ ವಿದೇಶೀ ಹೂಡಿಕೆಯ ನೀತಿಯನ್ನು ಸರ್ಕಾರ ೨೦೦೮ರಲ್ಲೇ ಕೈಗೊಂಡಿದ್ದರೆ ಬಂಡವಾಳ ವಿದೇಶದಿಂದ ಹರಿದುಬರಬಹುದಿತ್ತು. ಆದರೆ ಬಂಡವಳಿಗರ ಪರವಾದ ಈ ನೀತಿಗಳನ್ನು ಮುಂದಿಟ್ಟುಕೊಂಡು, ಚುನಾವಣೆ ಗೆಲ್ಲುವ ಧೈರ್ಯವಿಲ್ಲದ ರಾಜಕೀಯ ಪಕ್ಷ ಆ ತೀರ್ಮಾನವನ್ನು ಮುಂದೂಡುತ್ತಾ ಬಂತು. ಜಿ-೨೦ ಸಭೆಗಳಲ್ಲಿ ವಿದೇಶೀ ಬಂಡವಾಳಕ್ಕೆ ಬಾಗಿಲು ತೆರೆಯುವ ಒತ್ತಾಯಕ್ಕೆ ಮಣಿದು, ನಿಧಾನಿಸಿ, ನಿಧಾನಿಸಿ, ಈಗಲೂ, ರಾಜಕೀಯವಾಗಿ ತನ್ನ ಪಕ್ಷಕ್ಕೆ ತೊಂದರೆಯುಂಟು ಮಾಡುವ ಈ ನೀತಿಗಳನ್ನು ಈ ಅಲ್ಪಸಂಖ್ಯಾತ ಸರ್ಕಾರ ಕೈಗೊಳ್ಳಲು ಅಂತರರಾಷ್ಟ್ರೀಯ ಒತ್ತಡವೇ ಪ್ರಮುಖ ಕಾರಣವೆನಿಸುತ್ತದೆ.

ಇಂದಿನ ಆಂತರಿಕ ಬಂಡವಳಿಗರು, ಬೆಳವಣಿಗೆಯ ದರಕ್ಕೆ ಕಾರಣಕರ್ತರು, ಹೇಳುವುದು ಏನೆಂದರೆ ಆಂತರಿಕ ಆರ್ಥಿಕ ಬೆಳವಣಿಗೆಯ ದರ ಕಡಿಮೆಯಾಗಲು ಮುಖ್ಯ ಕಾರಣ ಅಂತರರಾಷ್ಟ್ರೀಯ ಆರ್ಥಿಕ ಕುಸಿತ ಹಾಗೂ ನಮಗೆ ಅತ್ಯವಶ್ಯವಾದ ಮೂಲಭೂತ ಸೌಕರ್ಯಗಳಲ್ಲಿ ಹೂಡಿಕೆ ಬರದಿರಲು ಸರ್ಕಾರದ ಅಡಚಣೆಯ ನೀತಿ, ಅದರ ಆಡಳಿತ ವೈಖರಿ ಕಾರಣ ಅಂತ. ಈ ಕ್ಷೇತ್ರದ ಮುನ್ನಡೆಯಿಲ್ಲದೆ ಆರ್ಥಿಕ ಬೆಳವಣಿಗೆಯ ದರ ಏರುವುದು ಸಾಧ್ಯವಿಲ್ಲ. ಇದನ್ನೆಲ್ಲಾ ಅರಿತ ರಿಸರ್ವ್ ಬ್ಯಾಂಕ್ ಹೇಳುತ್ತದೆ : ಈ ವರ್ಷದ ಆರಂಭದಲ್ಲೇ ಶೇಕಡ ೦.೭೫ ಬಡ್ಡಿ ದರ ಕಡಿಮೆ ಮಾಡಿದೆವು. ಹಾಗೂ ಪದೇ ಪದೇ ಸಿಆರ್‌ಆರ್ ಪರಿಷ್ಕರಿಸಿ, ಹೂಡಿಕೆಗೆ ಬೇಕಾದಷ್ಟು ನಗದು ಬಿಡುಗಡೆ ಮಾಡಿದ್ದೇವೆ. ಆದರೂ ವಿದೇಶಿ ಬಂಡವಾಳ ಬರದಿರಲು, ಹಲವಾರು ಕ್ಷೇತ್ರಗಳು ನಿರೀಕ್ಷಿಸಿದಂತೆ ಬೆಳೆಯದಿರಲು, ನಿರುದ್ಯೋಗ ಕಡಿಮೆ ಯಾಗದಿರಲು, ಸರ್ಕಾರದ ನೀತಿಗಳು ಕಾರಣ; ಅದರ ಬಜೆಟ್ಟನ್ನು ಸರಿದೂಗಿಸದೆ ಹಣದುಬ್ಬರ, ಬೆಲೆ ಏರಿಕೆ ಸಮಾಧಾನ ಪರಿಸ್ಥಿತಿಗೆ ಬರುವುದಿಲ್ಲ ಎಂದು. ರಿಸರ್ವ್ ಬ್ಯಾಂಕ್ ಐಎಂಎಫ್ ದಾಸನಾಗಿ ಹೇಳುವ ಮತ್ತೊಂದು ಮಾತು ಸರ್ಕಾರ ನೀಡುವ ಸಹಾಯಧನಗಳು, ಬೆಂಬಲ ಬೆಲೆ, ಸಾಮಾಜಿಕ ಕ್ಷೇತ್ರದ ವೆಚ್ಚಗಳು ಬಜೆಟ್ಟಿನ ಕೊರತೆಗೆ ಕಾರಣವೆಂದು; ಅವನ್ನು ನಿಲ್ಲಿಸಲು ರಿಸರ್ವ್ ಬ್ಯಾಂಕ್ ಸೂಚ್ಯವಾಗಿ ಹೇಳುತ್ತದೆ. ಜಗತ್ತಿನ ಆದ್ಯಂತ ಸರ್ಕಾರಗಳು ತೆರಿಗೆಗಳನ್ನು ನೀಡಬಲ್ಲವರಿಂದ ಸಂಗ್ರಹಿಸದೆ, ಸರ್ಕಾರಗಳು ದಿವಾಳಿ ಎದ್ದಿರುವುದು ಸ್ಪಷ್ಟವಾಗಿರುವಾಗ, ನಿಜವಾದ ಆರ್ಥಿಕತೆಯಿಂದ ದೂರ ಸರಿದು, ಹಣಕಾಸು ಮಾರುಕಟ್ಟೆಯ ಬೆಳವಣಿಗೆಯ ದರವನ್ನೇ ಆರ್ಥಿಕತೆಯ ಬೆಳವಣಿಗೆಯೆಂದು ಬಣ್ಣಿಸುತ್ತಾ, ಅಪಾರ ನಿರುದ್ಯೋಗ, ಜನರ ಕಷ್ಟಾರ್ಪಣ್ಯ, ಅದರ ಪರಿಣಾಮವಾಗಿ ಸರಕುಗಳಿಗೆ ಬೇಡಿಕೆಯಿಲ್ಲದೆ ಉತ್ಪಾದನೆ ಕುಸಿದಿದ್ದೂ, ಬೇಡಿಕೆ ಇರುವ ಸರಕುಗಳ ಪೂರೈಕೆ ಇಲ್ಲದಿರುವುದು, ಬೆಲೆಯೇರಿಕೆ ಮುಂತಾದ ವೈಪರೀತ್ಯಗಳನ್ನು ಸೃಷ್ಟಿಸಿರುವ ಈ ಆರ್ಥಿಕತೆಯ ಷೇರುಪೇಟೆಯ ಪರ ಮೂಲತತ್ವ ಇಂದಿನ ಪರಿಸ್ಥಿತಿಗೆ ಕಾರಣ. ಇದನ್ನು ಕೇವಲ ರಿಸರ್ವ್ ಬ್ಯಾಂಕ್ ಸರಿಪಡಿಸಲಾಗುವುದಿಲ್ಲ. ರಾಜಕೀಯ ಪ್ರತಿರೋಧ ಗಳಿಂದ ರಕ್ಷಿಸಿಕೊಳ್ಳಲು, ನಿರುದ್ಯೋಗಿಗಳಿಗೆ ಭತ್ಯೆ

## ನೂರರ ಸಂಭ್ರಮದಲ್ಲಿರುವ ಇಗೋ ಕನ್ನಡ ಖ್ಯಾತಿಯ

# ಪ್ರೊ|| ಜಿ. ವೆಂಕಟಸುಬ್ಬಯ್ಯ

**ಅವರಿಗೆ ಸನ್ಮಾನ ಸಮಾರಂಭ**

**ಹಾಗೂ 'ಸಾಹಿತ್ಯ ಸಂಪದ' ಮಾಲೆಯ ಎಂಟು ಪುಸ್ತಕಗಳ ಲೋಕಾರ್ಪಣೆ**

ಕನ್ನಡ ಭವನ, 'ನಯನ ಸಭಾಂಗಣ'ದಲ್ಲಿ ದಿನಾಂಕ ೧೬-೧೨-೨೦೧೨ರಂದು ಬೆಳಗ್ಗೆ ೧೦ ಗಂಟೆಗೆ ನಡೆಯಲಿದೆ.

**ತಮಗೆಲ್ಲರಿಗೂ ಆದರದ ಸ್ವಾಗತ**

ನೀಡಬಹುದು, ತುಟ್ಟಿಭತ್ಯೆ ಹೆಚ್ಚಿಸಬಹುದು; ಆದರೆ ಅಪಮೌಲ್ಯವಾದ ಹಣದ ಈ ಪೂರೈಕೆಯಿಂದ ಸರಕುಗಳ ಬೇಡಿಕೆ ಹೆಚ್ಚುವುದಿಲ್ಲ; ಹಣದುಬ್ಬರವಾಗುತ್ತದೆ ; ಬೆಲೆ ಏರಿಕೆ ಆಗುತ್ತದೆ. ಹೀಗಾಗಿ ತಕ್ಷಣಕ್ಕೆ ರಿಸರ್ವ್ ಬ್ಯಾಂಕ್ ಕಾದು ಕುಳಿತಿರುವ ನೀತಿ ಅನುಸರಿಸಿದೆ. ಅದು ಬಡ್ಡಿದರ ಕಡಿಮೆ ಮಾಡಿದರೂ, ಈ ಹಿಂದಿನಂತೆಯೇ ಅದು ಹೂಡಿಕೆ ಯಾಗುವ ಪರಿಸ್ಥಿತಿ ಇಲ್ಲ; ಆದರೆ ಸಾಮಾನ್ಯ ಜನರ ಉಳಿತಾಯಕ್ಕೆ ಸಿಗುವ ಬಡ್ಡಿ ಕಡಿಮೆಯಾಗಿ, ಇನ್ನಷ್ಟು ಸಂಕಷ್ಟವಾಗುತ್ತದೆ ಅಷ್ಟೆ. ೧೯೯೧ರಿಂದ ನಿರಂತರ ಶ್ರೀಮಂತರ ತೆರಿಗೆ ದರವನ್ನು ಕಡಿಮೆ ಮಾಡುತ್ತಾ ಬಂದಿದೆ ಈ ವ್ಯವಸ್ಥೆ. ಅಮೆರಿಕದಲ್ಲಿ ಶೇಕಡ ೧೦ರಷ್ಟು ಶ್ರೀಮಂತರ ತೆರಿಗೆಯನ್ನು ಹೆಚ್ಚಿಸುವ ಸಂದರ್ಭ ಬಂದಿದೆ. ಕಳ್ಳಸಂತೆ, ಕಪ್ಪು ಹಣವಾದ ಸಂಪತ್ತು ಹೂಡಿಕೆಯಾಗಿ ಹೊರಬರದೆ ಈ ವ್ಯವಸ್ಥೆ ಜೀವ ತುಂಬಿಸಿಕೊಳ್ಳಲಾಗುವುದಿಲ್ಲ. ಅದರಿಂದ ಕ್ರೋನಿ ಕ್ಯಾಪಿಟಲಿಸಂನ ಪತನವಾಗುತ್ತದೆ. ಅದರ ಪರಿಣಾಮವನ್ನು ರಾಜಕೀಯ ತಪ್ಪಿಸಿಕೊಳ್ಳ ಬಲ್ಲುದೇ ? ಆ ಪತನವಾಗದೆ ಬಂಡವಾಳದ ಪುನರುಜ್ಜೀವನ ಸಾಧ್ಯವೇ ? ಚಿದಂಬರಂ ಮತ್ತು ಅವರ ಸಂತತಿಯವರು ೧೯೯೧ರಿಂದಲೂ ಅವರು ಮೊನ್ನೆ ಹೇಳಿದಂತೆ, ಏಕಾಂಗಿ ಯಾಗಿ ಅಲ್ಲ (ವಿ ವಿಲ್ ವಾಕ್ ಇಟ್ ಅಲೋನ್), ಏಕಮುಖವಾಗಿ, ಜನತೆಯ ಹಿತದ ವಿರುದ್ಧ ದಿಕ್ಕಿನಲ್ಲಿ ಹೆಜ್ಜೆ ಇಟ್ಟಿರುವುದು. ಅದರ ಬೆಲೆಯನ್ನು ಅವರಿಂದ ಕಕ್ಕಿಸುವ ಆಂದೋಳನ ಇಂದಿನ ಅಗತ್ಯ.

ಸರ್ಕಾರ ಪ್ರಸಕ್ತ ವರ್ಷದ ತನ್ನ ಬಜೆಟ್ ಕೊರತೆ ನೀಗಿಸಿಕೊಳ್ಳಲು ಸಾರ್ವಜನಿಕ ಕ್ಷೇತ್ರದ ಆಸ್ತಿಯನ್ನು ಮಾರಿ ಸುಮಾರು ೫೦,೦೦೦ ಕೋಟಿ ರೂ. ಗಳಿಸಲು ಮುಂದಾಗಿದೆ. ಗ್ಯಾಸ್, ಪೆಟ್ರೋಲ್, ಡೀಸಲ್ ಬೆಲೆ ಏರಿಸಿದೆ. ರಸಗೊಬ್ಬರದ ಬೆಲೆ ಏರಿಸಿದೆ. ಆದರೆ ಶೇಕಡ ೫.೮ರಷ್ಟಿನ ಬಜೆಟ್ಟಿನ ಕೊರತೆ ನೀಗಿಸಲು ಇದು ಯಾತಕ್ಕೂ ಸಾಲದು. ಧನಿಕರಿಂದ ಹೆಚ್ಚು ತೆರಿಗೆ ವಸೂಲಿ, ರಕ್ಷಣಾ ಕ್ಷೇತ್ರದ ದುಂದುವೆಚ್ಚದ ಕಡಿತ, ಹಲವು ಹೆಸರುಗಳಲ್ಲಿ ತೆರಿಗೆಗಳ ವಿನಾಯಿತಿ ಮುಂತಾದುವುಗಳನ್ನು ಸರಿಪಡಿಸದೆ, ಭಾರತದಲ್ಲೂ, ಅಮೆರಿಕದಲ್ಲೂ, ಯೂರೋಪಿನಲ್ಲೂ ಬಜೆಟ್ ತೂಗಿಸಲು ಸಾಧ್ಯವಿಲ್ಲ. ಹೀಗೆ ತೂಗಿಸದೆ ಪ್ರಜಾಕ್ಷೋಭೆ ತಡೆಯಲಾಗುವುದಿಲ್ಲ. ಚೀನಾದಲ್ಲಿ ಈಗ ಹಣದುಬ್ಬರ ಶೇಕಡ ೨ಕ್ಕಿಂತ ಕಡಿಮೆಯಾಗಲು ಮುಖ್ಯ ಕಾರಣ ಅದು ಸರ್ಕಾರದ ಆಂತರಿಕ ವೆಚ್ಚವನ್ನು ಹೆಚ್ಚಿಸಿ, ಜನರ ಆದಾಯ ಹೆಚ್ಚಿಸಲು ಮುಂದುವರಿದಿರುವುದು. ಆದರೆ ನಾವು ರಸ್ತೆ ನಿರ್ಮಾಣ, ಶಿಕ್ಷಣ ಕ್ಷೇತ್ರ ಇವಕ್ಕೆಲ್ಲಾ ವಿದೇಶೀ ಹಣಕ್ಕೆ ಕಾಯ್ದು ಕುಳಿತಿರುವುದು ನಾಚಿಕೆಗೇಡು. ಖಾಸಗಿ ಕ್ಷೇತ್ರದಂತೆಯೇ, ಸರ್ಕಾರವೂ ಈ ಕ್ಷೇತ್ರಗಳಲ್ಲಿನ ತನ್ನ ಪಾಲಿನ ಕರ್ತವ್ಯ ನಿರ್ವಹಿಸುವುದು ಸಮಾಜವಾದವೇನೂ ಅಲ್ಲ. ಅದು ಸಾಂಪ್ರದಾಯಿಕ ಬಂಡವಾಳದ ಮಾರ್ಗ. ಆದರೆ ಇಂದು ನಮಗೆ ಸಿಕ್ಕಿರುವುದು ದರೋಡೆಕೋರ ದಗಲ್‌ಬಾಜಿ ಕಾಳಸಂತೆಯ ಕ್ರೋನಿ ಕ್ಯಾಪಿಟಲಿಸಂ.

ಈ ತಿಂಗಳು ಪ್ರಕಟವಾದ ಉದಾರೀಕರಣವೆನ್ನುವ ನೀತಿಗಳು ಪ್ರಮುಖವಾಗಿ ಜಿ-೨೦ ಕೇಂದ್ರಿತ ವಿದೇಶೀ ಒತ್ತಡಕ್ಕೆ ಮಣಿದು ಆಗಿರುವುದು. ಬಹುಮತವಿಲ್ಲದೆ ಆಳುತ್ತಿರುವ, ಭ್ರಷ್ಟಾಚಾರದಲ್ಲಿ ಮುಳುಗಿರುವ ಪಕ್ಷ ಒಂದು ಕಡೆ, ಅದೇ ನಿಲುವಿನ ಅದಕ್ಕೂ ಮಿಗಿಲಾದ ಭ್ರಷ್ಟಾಚಾರದಲ್ಲಿ ಮುಳುಗಿದ ಒಡೆದು ಚೂರಾಗುತ್ತಿರುವ ವಿರೋಧ ಪಕ್ಷ – ಇವಕ್ಕೆ ಬರಲಿರುವ ಚುನಾವಣೆ ಸಿಂಹಸ್ವಪ್ನವಾಗಿದೆ. ಜನಪ್ರಿಯವಲ್ಲದ ನೀತಿ ರೂಪಿಸಿ, ಆದರೂ ಚುನಾವಣೆ ಗೆಲ್ಲುವುದು ಹೇಗೆ ಎಂದು ಕಾಂಗ್ರೆಸ್ ಪಕ್ಷ ಚರ್ಚಿಸುತ್ತಿದೆ. ಅದು ವಿರೋಧ ಪಕ್ಷಗಳು ದುರ್ಬಲ ವಾಗಿರುವಾಗ ಚುನಾವಣೆಯನ್ನು ಮುಂಚಿತವಾಗಿಯೇ ನಡೆಸಿದರೆ ಹೇಗೆ ಎಂದೂ ಚರ್ಚಿಸುತ್ತಿದೆ. ಅದಕ್ಕೇ ೬ ಸಿಲಿಂಡರ್ ಬದಲು ೯ ಸಿಲಿಂಡರಿನ ರಾಜಕೀಯ ಮಾಡುತ್ತಿದೆ. ಮತ್ತೊಂದು ಜನಪ್ರಿಯತೆ ಗಳಿಸುವಂಥ ಚುನಾವಣಾ ಘೋಷಣೆಯನ್ನು ನೆಯ್ಯುತ್ತಿದೆ. ಮೂರನೆಯ ಒಕ್ಕೂಟ ರಚಿಸುವವರಿಗೆ ಹೆಚ್ಚು ಸಮಯವಿಲ್ಲ. ತಮ್ಮ ಇತ್ತೀಚಿನ ಉದಾರೀಕರಣ ನೀತಿಗಳು ಜನರಿಗೆ ಕ್ಷೋಭೆ ಯಾಗಿ ಪರಿವರ್ತಿತವಾಗುವುದರೊಳಗೇ ಚುನಾವಣೆ ನಡೆಸಿಬಿಟ್ಟರೆ ಹೇಗೆ ಎಂದು ಕಾಂಗ್ರೆಸ್ ಯೋಚಿಸುತ್ತಲೂ ಇರಬಹುದು. ಭಾಜಪ ದುರ್ಬಲವಾಗಿರುವಾಗ,

ಕಾಂಗ್ರೆಸ್ಸಿಗೆ ಸವಾಲೆಸೆಯಬಲ್ಲ ಸಾಧ್ಯತೆ ಇರುವುದು ತತ್ವಾಧಾರಿತ ಕಾರ್ಯಕ್ರಮಗಳನ್ನೊಳಗೊಂಡ ಮೂರನೆಯ ಒಕ್ಕೂಟಕ್ಕೆ ಮಾತ್ರ. ಅಂಥ ಬೆಳವಣಿಗೆ ಆಗಲು ಜನಾಂದೋಳನಗಳ ಒತ್ತಾಯ ಇಂದಿನ ಅಗತ್ಯ ಆದರಿಂದಲೇ ರಾಷ್ಟ್ರದ ಏಕಮುಖಿ ನಡೆಗೆ ತಡೆ ಒಡ್ಡಲೇಬೇಕು.

ಈಗಾಗಲೇ ಸಾರ್ವಜನಿಕ ಬ್ಯಾಂಕುಗಳು ಲಕ್ಷಾಂತರ ಕೋಟಿ ಸಾಲವನ್ನು ಸೂಕ್ತ ಆಸ್ತಿಯ ಆಧಾರವಿಲ್ಲದೆ, ಹಲವಾರು ಒತ್ತಡಗಳಿಗೆ ಮಣಿದು ನೀಡಿವೆ. ಈ ಸಾಲಗಳು ವಸೂಲಿಯಾಗುತ್ತವೋ ಇಲ್ಲವೋ ಎನ್ನುವ ಸಂದೇಹ ರಿಸರ್ವ್ ಬ್ಯಾಂಕನ್ನು ಕಾಡಿದೆ. ಹೀಗಾಗಿ ಅದು ಬ್ಯಾಂಕುಗಳು ನೀಡುವ ಸಾಲದ ಲೆಕ್ಕದಲ್ಲಿ ಸಂಗ್ರಹಿಸಬೇಕಾದ ಸವಕಲು ನಿಧಿಯ ಪ್ರಮಾಣವನ್ನು ಈಗಿರುವ ಶೇಕಡ ೨.೦೦ರಿಂದ ೨.೭೫ಕ್ಕೆ ಹೆಚ್ಚಿಸಿದೆ. ವಾಣಿಜ್ಯಲೋಕ ಇದಕ್ಕೆ ಯಾವುದೇ ವಿರೋಧ ವ್ಯಕ್ತಪಡಿಸಿಲ್ಲ ಹಾಗೂ ೧೭,೫೦೦ ಕೋಟಿ ನಗದು ಲಭ್ಯವಾದುದನ್ನು ಸ್ವಾಗತಿಸಿದೆ. ರಿಸರ್ವ್ ಬ್ಯಾಂಕ್ ಗವರ್ನರ್ ಹೇಳುವುದೇಂದರೆ ಜಾಗತಿಕವಾಗಿ ಹಣದುಬ್ಬರ ಶೇಕಡ ೭ರ ಸುತ್ತ ಇರಲಾಗಿ, ಭಾರತದ್ದೂ ಅದೇ ಮಟ್ಟದಲ್ಲಿ ಇದ್ದರೆ ಅದು ನಮ್ಮ ರಫ್ತಿಗೆ ಅನುಕೂಲಕರವೇ, ಎಂದು. ಬರುವ ದಿನಗಳಲ್ಲಿ ಸರ್ಕಾರದ ಕ್ರಮಗಳಿಂದ ಬಜೆಟ್ ಕೊರತೆ ನೀಗಿ, ಬೆಲೆ ಏರಿಕೆ ಹತೋಟಿಗೆ ಬಂದರೆ ಆಗ ಬಡ್ಡಿ ದರ ಇಳಿಸುವುದನ್ನು ಚಿಂತಿಸಬಹುದು ಎನ್ನುವುದು. ಹಾಗಾಗಿ ಚಿದಂಬರಂ ಅಸಮಾಧಾನಕ್ಕೆ ಯಾರದೂ ಬೆಂಬಲವಿಲ್ಲವಾಗಿದೆ, ಅವರ ಕೆಲಸ ಅವರು ಸರಿಯಾಗಿ ಮಾಡಬೇಕು ಅಷ್ಟೆ.

ಸರ್ಕಾರ ಮಾಡಬೇಕಾದ್ದೆಲ್ಲವನ್ನು ಮಾಡಿಲ್ಲ ಅಂತ ರಿಸರ್ವ್ ಬ್ಯಾಂಕೂ, ಉದ್ಯಮಿಗಳೂ ಹೇಳುವುದರ ಅರ್ಥವೇನು ? ಪೆಟ್ರೋಲ್ - ಅನಿಲ ದರಗಳನ್ನು ಏರಿಸಿದ್ದರಿಂದ ಬಜೆಟ್ ಖೋತಾದಲ್ಲಿ ೦.೧೮ರಷ್ಟು ಮಾತ್ರ ಕಡಿಮೆಯಾಗಬಹುದು. ಸಾರ್ವಜನಿಕ ಕಂಪನಿಗಳ ಆಸ್ತಿ ಮಾರುವ ಪ್ರಯತ್ನ ಹೋದ ವರ್ಷವೂ ವಿಫಲವಾಯ್ತು. ಕುಸಿದಿರುವ ಮಾರುಕಟ್ಟೆಯಲ್ಲಿ ಇವನ್ನು ಕೊಳ್ಳುವ ದಾಹ ಇಲ್ಲ. ರಾಷ್ಟ್ರಗಳಲ್ಲಿ ಒಂದೇ ಗೂಡ್ಸ್ ಮತ್ತು ಸೇಲ್ಸ್ ಟ್ಯಾಕ್ಸ್ ವಿಧಿಸುವ ಕ್ರಮಕ್ಕೆ ಈಗಷ್ಟೆ ರಾಜ್ಯಗಳ ಸಮ್ಮತಿ ಬಂದಿದ್ದರೂ, ಅದು ಕಾರ್ಯಗತವಾಗಲು ಬಹಳ ಕಾಲ ಬೇಕು - ಮೊದಲಿಗೆ ಅದು ಕಾನೂನು ಆಗಬೇಕು. ಕೈಗಾರಿಕೆಗಳಿಗೆ ಭೂಮಿ ಒದಗಿಸಲು ಮಾಡಬೇಕಾದ ಕಾನೂನು ಇನ್ನೂ ನೆನೆಗುದಿಯಲ್ಲಿ ಬಿದ್ದಿದೆ. ಸಹಾಯಧನ ಇರುವ ಎಲ್ಲ ನೀತಿಗಳಲ್ಲೂ, ಅನುಭವಿಗಳಿಗೆ ನೇರ ಹಣ ಪಾವತಿ ಮಾಡಿದರೆ, ಸೋರಿಕೆ ಕಡಿಮೆಯಾಗಬಹುದು. ಆದರೆ ಇದು ಆಗಲು ಇನ್ನೂ ಬಹಳ ಕೆಲಸ ಬಾಕಿ ಇದೆ. ಆಧಾರ್ ಕಾರ್ಡ್ ಮುಂತಾದುವು ಇನ್ನೂ ಆಗಬೇಕಿದೆ. ರೂಪಾಯಿಯ ಮೌಲ್ಯ ಅಂತರರಾಷ್ಟ್ರೀಯ ಕಾರಣಗಳಿಂದಾಗಿ, ರಫ್ತು ಕುಸಿದಿರುವುದರಿಂದ ಮುಂತಾಗಿ, ಇನ್ನೂ ತುಂಬ ಕುಸಿದ ಮಟ್ಟದಲ್ಲಿದೆ. ಇದಲ್ಲದೆ ಬರಬೇಕಾದ ತೆರಿಗೆಯ ವಸೂಲಿಯಲ್ಲೂ ಬೇಕಾದಷ್ಟು ಕುಸಿತವಾಗಿದೆ. ಟೆಲಿಕಾಂ ಸ್ಪೆಕ್ಟ್ರಂ ಮಾಡಿ ದೊಡ್ಡ ಹಣ ಸಂಪಾದಿಸುವ ಉದ್ದೇಶ ಕೈಬಿಡಲಿಲ್ಲ, ಅದರ ಬೆಲೆಯೂ ಕುಸಿದಿದೆ. ಯೋಜನೆ ಮತ್ತು ಸರ್ಕಾರೀ ಹೂಡಿಕೆಗಳಲ್ಲಿ ಕಡಿತ ಮಾಡಿದರೂ ಹಲವು ಕ್ಷೇತ್ರಗಳಲ್ಲಿ ಅದಕ್ಕಿಂತ ಹೆಚ್ಚಿನ ಸಹಾಯಧನವೂ ಉಂಟಾಗಿದೆ. ಹೀಗೆ ಸರ್ಕಾರದ ಈ ಎಲ್ಲ ಕ್ರಮಗಳೂ ಆಗಿ, ಬಜೆಟ್ ಕೊರತೆ ಸಾಕಷ್ಟು ನೀಗಿ, ಅದು ಹಣದುಬ್ಬರ ಇಳಿತ ಮತ್ತು ಬೆಲೆ ಏರಿಕೆಯಲ್ಲಿ ಇಳಿತವಾಗಲು ಬಹಳ ಕಾಲವೇ ಬೇಕು. ಇದೆಲ್ಲ ನೆಚ್ಚಿಕೊಂಡು ಈಗಲೇ ಬಡ್ಡಿ ದರ ಕಡಿಮೆ ಮಾಡಲು ರಿಸರ್ವ್ ಬ್ಯಾಂಕು ಸಿದ್ಧವಿಲ್ಲ. ಹೂಡಿಕೆ ಹೆಚ್ಚದಿರುವುದಕ್ಕೆ ಬಡ್ಡಿ ದರ ಇಂದಿನ ಮಟ್ಟಿಗೆ ಕಾರಣವಲ್ಲ. ದೇಶದೊಳಕ್ಕೆ ವಾರ್ಷಿಕ ೭೦ ಬಿಲಿಯನ್ ಡಾಲರ್ ಹರಿದುಬರದೆ ಪರಿಸ್ಥಿತಿ ಉತ್ತಮವಾಗುವುದಿಲ್ಲ.

ಕೆ. ಎಸ್. ಪಾರ್ಥಸಾರಥಿ
೨೫೭, 'ಬೆಳಕು', ವನಸಿರಿ ಬಡಾವಣೆ, ವಿದ್ಯಾನಗರ, ಬೆಟ್ಟಹಲಸೂರು ಅಂಚೆ
ಬೆಂಗಳೂರು - ೫೬೨ ೧೫೭

## ಹೊಸತು ಚಂದಾದಾರ / ಓದುಗರಿಗೆ ಮಾಹಿತಿ

ಜನವರಿ ೨೦೧೩ರ 'ಹೊಸತು' ಎಂದಿನಂತೆ ವಾರ್ಷಿಕ ವಿಶೇಷ ಸಂಚಿಕೆಯಾಗಿದ್ದು ಓದುಗರಿಗೆ ಸಾಹಿತ್ಯದ ಸುರಿಮಳೆ! ಲೇಖನಗಳ ಆಯ್ಕೆ/ಪರಿಷ್ಕರಣೆ ಮುಂತಾದ ಕೆಲಸಗಳಿಗೆ ಹೆಚ್ಚಿನ ಕಾಲಾವಕಾಶ ಬೇಕಿರುವುದರಿಂದ ಓದುಗರಿಗೆ ಸಂಚಿಕೆ ತಲುಪುವುದು ತಡವಾಗ ಬಹುದು. ೨೦೧೩ ಜನವರಿ ೧೫ರೊಳಗೆ ನಿರೀಕ್ಷಿಸಿ. ಓದುಗರು ಸಹಕರಿಸಬೇಕಾಗಿ ವಿನಂತಿ.



## ಠಾಕ್ರೆ ಸತ್ತಿಲ್ಲ

ಮಹಾರಾಷ್ಟ್ರದ ಶಿವಸೇನೆ ನಾಯಕ ಬಾಳ ಠಾಕ್ರೆ ದೈಹಿಕವಾಗಿ ತೀರಿಹೋದರೂ ಅವರು ಬಿತ್ತಿಹೋದ ವಿಷವೃಕ್ಷ ಜೀವಂತವಾಗಿದೆ ಎಂಬುದು ಅವರ ಅಂತ್ಯಕ್ರಿಯೆಯ ಮಾರನೇ ದಿನವೇ ಸಾಬೀತಾಗಿದೆ. ಠಾಕ್ರೆಯ ಅಂತ್ಯಕ್ರಿಯೆಯ ಸಂದರ್ಭದಲ್ಲಾದ ಮುಂಬೈ ಬಂದ್ ಕುರಿತು ಫೇಸ್‌ಬುಕ್‌ನಲ್ಲಿ ತನ್ನ ಅನಿಸಿಕೆ ಬರೆದ ಕಾರಣಕ್ಕೆ ಶಹೀನಾ ಧಡಾ ಎಂಬ ಯುವತಿ ಹಾಗೂ ಅದನ್ನು ಸಮರ್ಥಿಸಿದ ರೇಣು ಶ್ರೀನಿವಾಸ ಎಂಬ ಯುವತಿಯರನ್ನು ಮಹಾರಾಷ್ಟ್ರ ಪೊಲೀಸರು ಬಂಧಿಸಿದ್ದಾರೆ. ಶಹೀನಾಳ ಸಂಬಂಧಿಕರ ಆಸ್ಪತ್ರೆಯ ಮೇಲೆ ಶಿವಸೇನೆ ಗೂಂಡಾಗಳು ದಾಳಿ ಮಾಡಿದ್ದಾರೆ. ಇಷ್ಟಕ್ಕೂ ಈ ಯುವತಿಯರು ವ್ಯಕ್ತಪಡಿಸಿದ ಅಭಿಪ್ರಾಯವಾದರೂ ಏನು ? ಭಗತ್ ಸಿಂಗ್, ಸುಖದೇವ್, ಆಜಾದ್‌ರಿಗೆ ಸಿಗದ ಗೌರವ ಠಾಕ್ರೆಗೆ ಸಿಕ್ಕಿದೆ ಎಂದು. ಬಂದ್ ನಡೆದದ್ದು ಪ್ರೀತಿಯಿಂದಲ್ಲ ಭಯದಿಂದ ಎಂದು. ಅವರು ಹಾಗೆ ಹೇಳಿದ್ದೇ ತಡ, ಶಿವಸೇನೆಯ ಪುಂಡರು ಕೊಟ್ಟ ಫಿರ್ಯಾದಿಗೆ ಸ್ಪಂದಿಸಿ ಪೊಲೀಸರು ಆ ಯುವತಿಯರನ್ನು ಬಂಧಿಸಿ ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದಾರೆ. ಈಗ ಹೇಳಿ, ಅಭಿಪ್ರಾಯ ಸ್ವಾತಂತ್ರ್ಯವನ್ನು ಬದುಕಿನುದ್ದಕ್ಕೂ ಹತ್ತಿಕ್ಕಿ, ದ್ವೇಷ, ಕೋಮುಭಾವನೆ ಕೆರಳಿಸಿರುವ ಠಾಕ್ರೆ ಆತನ ಶಿಷ್ಯರಲ್ಲಿ ಜೀವಂತವಾಗಿದ್ದಾನೆ. ಅಷ್ಟೇ ಅಲ್ಲ ಮಹಾರಾಷ್ಟ್ರದ ಪೊಲೀಸ್ ಇಲಾಖೆಯ ಅಧಿಕಾರಿಗಳಲ್ಲೂ ಠಾಕ್ರೆ ಜೀವಂತವಾಗಿದ್ದಾನೆ. ಪ್ರಜಾಸತ್ತೆಯ ಹಂತಕರು ವಿವಿಧ ರೂಪಗಳಲ್ಲಿ ಜೀವ ತಳೆಯುತ್ತಾರೆ. ಅವರನ್ನು ಬೇರು ಸಮೇತ ಕಿತ್ತೆಸೆಯಬೇಕು.

–ಸಂಪಾದಕ

# ಇದು ಠಾಕ್ರೆ ನಡೆದುಬಂದ ದಾರಿ



**ಸನತ್‌ಕುಮಾರ ಬೆಳಗಲಿ**

ಶಿವಸೇನೆ ಸರ್ವಾಧಿಕಾರಿ ಬಾಳ ಠಾಕ್ರೆ ಸಾವಿನೊಂದಿಗೆ ಮಹಾರಾಷ್ಟ್ರದ ಭಯಗ್ರಸ್ತ ಕೋಮುವಾದಿ ರಾಜಕಾರಣದ ಒಂದು ಶಕೆ ಅಂತ್ಯಗೊಂಡಿದೆ ಎಂಬ ಮಾತು ನಿಜವಾಗುವುದೇ ಎಂಬುದು ಇಂದಿನ ಪ್ರಶ್ನೆ. ಠಾಕ್ರೆಯನ್ನು ಗುರಾಣಿಯಾಗಿಸಿಕೊಂಡು ಬೆಳೆಸಿದ್ದು ಕಾಂಗ್ರೆಸ್ ಎಂಬುದನ್ನು ಮರೆಯಬಾರದು. ಎಲ್ಲ ಪ್ರಖ್ಯಾತರ, ಕುಖ್ಯಾತರ, ಸಾವಿನ ನಂತರ ಸತ್ತ ಎಮ್ಮೆಗೆ ಸೇರು ತುಪ್ಪ ಎಂಬಂತೆ ಬಹುತೇಕ ಮಾಧ್ಯಮಗಳು ಠಾಕ್ರೆಯನ್ನು ವೈಭವೀಕರಿಸಿ ಬರೆದಿವೆ. ಠಾಕ್ರೆ ಒಬ್ಬ ಸಾಮಾನ್ಯ ವ್ಯಕ್ತಿಯಾಗಿದ್ದರೆ, ಯಾವುದೇ ವಿಮರ್ಶೆಯ ಅಗತ್ಯವಿರಲಿಲ್ಲ. ಆದರೆ ಸಾರ್ವಜನಿಕ ವ್ಯಕ್ತಿಯಾಗಿ ಐದು ದಶಕಗಳ ಕಾಲ ಮುಂಬೈಯ ಬದುಕಿನೊಂದಿಗೆ ಆಟವಾಡಿದ ಠಾಕ್ರೆಯ ಒಂದು ಮುಖವನ್ನು ತೋರಿಸಿದರೆ, ಚರಿತ್ರೆಗೆ ಅಪಚಾರ ಬಗೆದಂತಾಗುತ್ತದೆ. ಅಂತಲೇ ಸಿಎನ್‌ಎನ್-ಐಬಿಎನ್ ಟಿ.ವಿ. ವಾಹಿನಿಯ ರಾಜದೀಪ್ ಸರದೇಸಾಯಿ ಠಾಕ್ರೆಯ ಇನ್ನೊಂದು ಮುಖ ತೋರಿಸಿದರು.

ಠಾಕ್ರೆ ಕೊನೆಯುಸಿರು ಎಳೆಯುವ ಮುನ್ನ ಅಸ್ವಸ್ಥರಾದಾಗ, ಮುಂಬೈಯ ಅವರ ಮನೆ ಮಾತೋಶ್ರೀ ಮುಂದೆ ಜನಜಾತ್ರೆ ಸೇರಿತ್ತು.

ಬಾಲಿವುಡ್‌ನ ಘಟಾನುಘಟಿಗಳು, ಕ್ರೀಡಾಪಟುಗಳು, ಕಾರ್ಪೊರೇಟ್ ಜಗತ್ತಿನ ಪ್ರಚಂಡರು ಠಾಕ್ರೆ ದರ್ಶನಕ್ಕಾಗಿ ಪಾಳೆ ಹಚ್ಚಿದ್ದರು. ಈ ದರ್ಶನ ಆಕಾಂಕ್ಷೆಯಲ್ಲಿ ಪ್ರೀತಿಯಿತ್ತೋ ಅಥವಾ ಭೀತಿಯಿತ್ತೋ ಎಂಬುದನ್ನು ಅವರೇ ಹೇಳಬೇಕು. ಎಲ್ಲರೂ ವಾರದ ಕಾಣಿಕೆ ನೀಡುತ್ತಿದ್ದವರೇ. ಹಿರಿಯ ಪತ್ರಕರ್ತ ದಿಲೀಪ್ ಪಡಗಾಂವಕರ್ ಹೇಳಿದಂತೆ, ''ಠಾಕ್ರೆ ಪ್ರೀತಿ-ದ್ವೇಷ- ಭಯಮಿಶ್ರಿತ ವ್ಯಕ್ತಿ.'' ಬಹುಶಃ ಈ ವಿಮರ್ಶೆ ಅತ್ಯಂತ ಸೂಕ್ತವಾಗಿದೆ.

೭೦ರ ದಶಕದ ಆ ದಿನಗಳು ನನಗಿನ್ನೂ ನೆನಪಿನಲ್ಲಿವೆ. ಆಗ ಮುಂಬೈ ಮಹಾನಗರದಲ್ಲಿ ನೂರಾರು ಜವಳಿ ಗಿರಣಿಗಳಿದ್ದವು. ಲಕ್ಷಾಂತರ ಕಾರ್ಮಿಕರಿದ್ದರು. ಅಂತಲೇ ಅದು ಕಮ್ಯುನಿಸ್ಟರ ಭದ್ರಕೋಟೆಯಾಗಿತ್ತು. ಭಾರತದ ಕಮ್ಯುನಿಸ್ಟ್ ಚಳವಳಿಯ ಅಗ್ರಗಣ್ಯ ನೇತಾರ ಶ್ರೀಪಾದ ಅಮೃತ್ ಡಾಂಗೆ ಮುಂಬೈ ಮಹಾನಗರದಿಂದ ಲೋಕಸಭೆಗೆ ಚುನಾಯಿತರಾಗಿ ಬರುತ್ತಿದ್ದರು. ಇನ್ನೊಬ್ಬ ಹಿರಿಯ ಕಮ್ಯುನಿಸ್ಟ್ ನಾಯಕ ಎಸ್. ಎಸ್. ಮಿರಜಕರ್ ಮುಂಬೈ ಮೇಯರ್ ಆಗಿದ್ದರು. ಆಗ ಕೋಮುವಾದಿ ಮತ್ತು ಜಾತಿವಾದಿ ರಾಜಕಾರಣಕ್ಕೆ ಅವಕಾಶವಿರಲಿಲ್ಲ. ಇನ್ನೊಂದೆಡೆ ಸಮಾಜವಾದಿ ನಾಯಕ ಜಾರ್ಜ್ ಫರ್ನಾಂಡಿಸ್ ಗುಡುಗುತ್ತಿದ್ದರು.

ಇಂತಹ ಮುಂಬೈಯಲ್ಲಿ ಆಗ ಬಾಳ ಠಾಕ್ರೆ ಎಂಬ ಧೂಮಕೇತು ಗೋಚರಿಸಿತು. 'ಫ್ರೀಪ್ರೆಸ್ ಜರ್ನಲ್' ಪತ್ರಿಕೆಯಲ್ಲಿ ವ್ಯಂಗ್ಯಚಿತ್ರಕಾರರಾಗಿದ್ದ ಠಾಕ್ರೆ 'ಮುಂಬೈ ಮರಾಠಿಗರಿಗೆ ಮಾತ್ರ' ಎಂದು ಗುಡುಗತೊಡಗಿದರು. ಮುಂಬೈಯ ದುಡಿಯುವ ಜನರನ್ನು ಭಾಷೆ ಮತ್ತು ಕೋಮು ಆಧಾರದಲ್ಲಿ ವಿಭಜಿಸಿ ಕಮ್ಯುನಿಸ್ಟರನ್ನು ಮತ್ತು ಸೋಷಿಯಲಿಸ್ಟರನ್ನು ಮೂಲೆಗುಂಪು ಮಾಡಲು ಬಹುದಿನಗಳಿಂದ ಕಾಯುತ್ತಿದ್ದ ಕಾಂಗ್ರೆಸ್ ನಾಯಕ ಸದೋಬಾ ಪಾಟೀಲ ಮಿಲ್ ಕಾರ್ಮಿಕರೊಂದಿಗೆ ಶಾಮೀಲಾಗಿ ಠಾಕ್ರೆಯನ್ನು ಬೆಳೆಸಿದರು. ಅಂದಿನ ಮಹಾರಾಷ್ಟ್ರದ ಮುಖ್ಯಮಂತ್ರಿ ವಸಂತರಾವ್ ನಾಯಕ್ ಠಾಕ್ರೆಯನ್ನು ಬೆಳೆಸಿದ್ದು ಇತಿಹಾಸ.

ಆಗ ಬಾಳ ಠಾಕ್ರೆಗೆ ಕಮ್ಯುನಿಸ್ಟರು ಪ್ರಥಮ ಶತ್ರು. ನಂತರ ಕನ್ನಡಿಗರು, ಗುಜರಾತಿಗಳು ಮತ್ತು ಮದ್ರಾಸಿಗಳು ಅವರ ಗುರಿಯಾಗಿದ್ದರು. ಶತಮಾನದ ಹಿಂದೆಯೇ ಮುಂಬೈಗೆ ಹೋಗಿ ನೆಲೆಸಿದ್ದ ದಕ್ಷಿಣ ಕನ್ನಡದವರ ನೂರಾರು ಹೋಟೆಲ್‌ಗಳನ್ನು ಠಾಕ್ರೆ ಶಿವಸೇನೆ ಮೂಲಕ ವಿಧ್ವಂಸಗೊಳಿಸಿದ್ದರು. ಮುಂಬೈನಿಂದ ತೊಲಗಿ ಎಂದು ಬೆದರಿಕೆ ಹಾಕಿದರು. ಇನ್ನೊಂದೆಡೆ ಕಮ್ಯುನಿಸ್ಟರ ಮೇಲೆ ದಾಳಿ ಆರಂಭಿಸಿದ ಠಾಕ್ರೆ ಹಿಂಸೆಗೆ ಪ್ರಚೋದಿಸಿದರು. ಮುಂಬೈಯ ಪರೇಳ ವಿಧಾನಸಭಾ ಕ್ಷೇತ್ರದಿಂದ ಚುನಾಯಿತರಾಗಿ ಬರುತ್ತಿದ್ದ ಕಮ್ಯುನಿಸ್ಟ್ ಶಾಸಕ ಕೃಷ್ಣ ದೇಸಾಯಿ ಅವರನ್ನು ಶಿವಸೇನೆ ಗೂಂಡಾಗಳು ಹಾಡಹಗಲೇ ಕೊಲೆ ಮಾಡಿದರು. ಇದಕ್ಕೆ ಠಾಕ್ರೆಯವರಿಗೆ ಪಶ್ಚಾತ್ತಾಪವಿರಲಿಲ್ಲ, ಬದಲಾಗಿ, ಆತನ ಪ್ರೇರಣೆ ಇದ್ದಿರಬೇಕು. ಕಾಂಗ್ರೆಸ್ ಸರಕಾರದ ಅಘೋಷಿತ ಬೆಂಬಲ ಬೇರೆ !

ಮೊದಲು ಮರಾಠಿ ಭಾಷಾಂಧತೆಯ ಹೆಸರಿನಲ್ಲಿ ಜನರನ್ನು ಕೆರಳಿಸಿದ ಠಾಕ್ರೆ ೮೦ರ ದಶಕದಲ್ಲಿ ಉಗ್ರ ಹಿಂದೂತ್ವದ ಕರಾಳ ಮುಖವನ್ನು ತೋರಿಸ ತೊಡಗಿದರು. ಮುಸ್ಲಿಂರ ವಿರುದ್ಧ ಉದ್ರೇಕಕಾರಿ ಭಾಷಣ ಮಾಡತೊಡಗಿದರು. ೧೯೯೨ರಲ್ಲಿ ಅಯೋಧ್ಯೆಯ ಬಾಬ್ರಿ ಮಸೀದಿಯನ್ನು ಸಂಘಪರಿವಾರದ ಕರಸೇವಕರು ಧ್ವಂಸಗೊಳಿಸಿದಾಗ, 'ಧ್ವಂಸಗೊಳಿಸಿದ್ದು ಅವರಲ್ಲ, ನಾವು' ಎಂದು ಠಾಕ್ರೆ ಬಹಿರಂಗವಾಗಿ ಹೇಳಿದರು. ಆಗ ಮುಂಬೈಯಲ್ಲಿ ನಡೆದ ಕೋಮುಗಲಭೆಯಲ್ಲಿ ನೂರಾರು ಜನ ಅಸುನೀಗಿದರು. ಸಾವಿರಾರು ಕುಟುಂಬಗಳು ಬೀದಿಪಾಲಾದವು. ಈ ಕುರಿತು ವಿಚಾರಣೆ ನಡೆಸಿದ ನ್ಯಾಯಮೂರ್ತಿ ಬಿ. ಎನ್. ಶ್ರೀಕೃಷ್ಣ ಆಯೋಗ ಬಾಳ ಠಾಕ್ರೆಯನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿತು. ಆದರೆ ಆ ವರದಿ ಕಸದ ಬುಟ್ಟಿಯನ್ನು ಸೇರಿತು. ಠಾಕ್ರೆ ಒಂದು ದಿನವೂ ಜೈಲಿಗೆ ಹೋಗಲಿಲ್ಲ. ಯಾವ ನ್ಯಾಯಮೂರ್ತಿ ಏನು ಹೇಳಿದರೆ ತನಗೇನು !

ಬಾಳ ಠಾಕ್ರೆ ಒಂದೆಡೆ 'ಮರಾಠಿ ಮಾನುಸ್' ಎಂದು ಹೇಳಿ ಉದ್ರೇಕಿಸುತ್ತಿದ್ದರೆ, ಇನ್ನೊಂದೆಡೆ ಹಿಂದೂತ್ವದ ನಂಜನ್ನು ಕಾರತೊಡಗಿದರು. ಪಾಕಿಸ್ತಾನ ಕ್ರಿಕೆಟ್ ತಂಡ ಮುಂಬೈಗೆ ಬರಬಾರದೆಂದು ಕ್ರೀಡಾಂಗಣವನ್ನೇ ಹಾಳುಮಾಡಿದರು. ಪಾಕಿಸ್ತಾನದ ಸಂಗೀತಗಾರರು ಕಾರ್ಯಕ್ರಮ ನೀಡಲು ಬಂದರೆ, ಗಲಾಟೆ ಮಾಡುವುದಾಗಿ ಹೆದರಿಸಿದರು. ಹಿರಿಯ ನಟ ದಿಲೀಪ್‌ಕುಮಾರ್ ಅವರಿಗೆ ಪಾಕಿಸ್ತಾನದ ಒಂದು ಪ್ರಶಸ್ತಿ ಬಂದಾಗ, ಆ ಪ್ರಶಸ್ತಿ ಸ್ವೀಕಾರ ಮಾಡಕೂಡದೆಂದು ಅವರ ಮನೆಗೆ ಕಲ್ಲು ಎಸೆಯಲಾಯಿತು. ಆದರೆ ವಿದೇಶಿ ಪಾಪ್ ಗಾಯಕ ಮೈಕಲ್ ಜಾಕ್ಸನ್ ಬಂದಾಗ ಮೊದಲು ವಿರೋಧಿಸಿ, ನಂತರ ರತ್ನಗಂಬಳಿ ಹಾಸಿ ಸ್ವಾಗತಿಸಿದರು. ಮೈಕಲ್ ಜಾಕ್ಸನ್‌ಗೆ 'ಮಾಯಿ ಕಾ ಲಾಲ್ ಜೈಕಿಶನ್' ಎಂದು ಪ್ರೀತಿಯಿಂದ ಉದ್ಗರಿಸಿದರು. ಇದು ಠಾಕ್ರೆಯ ವಿಕ್ಷಿಪ್ತ ವ್ಯಕ್ತಿತ್ವಕ್ಕೆ ಉದಾಹರಣೆ. ಎಷ್ಟು ಹಣ ದೊರೆಯಿತೋ ತಿಳಿದವರಾರು !

ಆದರೆ ಮುಂಬೈ ಮಹಾನಗರವನ್ನು ಬರೀ ಯಾವುದೋ ಒಂದು ಜನಾಂಗದವರು ಕಟ್ಟಲಿಲ್ಲ. ಕನ್ನಡಿಗರು, ಗುಜರಾತಿಗಳು, ಮುಸಲ್ಮಾನರು, ಕ್ರೈಸ್ತರು, ಪಾರ್ಸಿಗಳು, ಬಿಹಾರಿಗಳು, ಸಿಂಧಿಗಳು ಹೀಗೆ ಎಲ್ಲೆಲ್ಲಿಂದಲೋ ಬಂದ ಜನ ಈ ನಗರವನ್ನು ಕಟ್ಟಲು ತಮ್ಮ ರಕ್ತ ಬಸಿದರು. ಈ ವಾಸ್ತವವನ್ನು ಒಪ್ಪಿಕೊಳ್ಳದ ಠಾಕ್ರೆ ಮುಂಬೈ ತನ್ನ ಪಿತ್ರಾರ್ಜಿತ ಆಸ್ತಿ ಎಂಬಂತೆ ವರ್ತಿಸಿದರು. ಶಿವಸೇನೆ ಕಾರ್ಯಕರ್ತರು ಹಫ್ತಾ ವಸೂಲಿ ಮಾಡುವ ಮಾಫಿಯಾಗಳಾಗಿ ಬದಲಾದರು. ಈ ನಗರದಲ್ಲಿ ಯಾರೇ ಅಂಗಡಿ ಆರಂಭಿಸಬೇಕಾದರೆ, ವ್ಯಾಪಾರ ಮಾಡಬೇಕಾದರೆ, ಮನೆ ಕಟ್ಟಿಕೊಳ್ಳಬೇಕಿದ್ದರೆ ಅಥವಾ ವಾಸಿಸಬೇಕಿದ್ದರೆ, ಶಿವಸೇನೆಗೆ ಕಾಣಿಕೆ ಸಲ್ಲಿಸಬೇಕಾಗಿತ್ತು. ಬಾಲಿವುಡ್‌ನಲ್ಲಿ ಹೊಸ ಸಿನಿಮಾ ಬಿಡುಗಡೆಯಾಗಬೇಕಿದ್ದರೆ, ನಿರ್ಮಾಪಕರು ಮಾತೋಶ್ರೀಗೆ ಬಂದು ಪಾದಕಾಣಿಕೆ

ಸಲ್ಲಿಸಬೇಕಾಗಿತ್ತು. ಫುಟ್‌ಪಾತ್‌ನಲ್ಲಿ ೫೦ ಪೈಸೆಗೆ ನೀರು ಮಾರುವವರೂ ಸಹ ವಾರದ ಕಾಣಿಕೆ ನೀಡಬೇಕಾಗಿತ್ತು, ಮುಂದೆ ಉದ್ಧವನಿಗೆ ನೀಡಬೇಕೇನೊ !

ಶಿವಸೇನೆಯನ್ನು ಒಂದು ರಾಜಕೀಯ ಶಕ್ತಿಯಾಗಿ ಬೆಳೆಸಿದ ಠಾಕ್ರೆ ಎಂದಿಗೂ ಅಧಿಕೃತವಾಗಿ ಅಧಿಕಾರ ವಹಿಸಿಕೊಳ್ಳಲಿಲ್ಲ. ನಾರಾಯಣ ರಾಣೆ, ಚಗನ್ ಬುಜಬಲ್, ಮನೋಹರ ಜೋಶಿ, ಹೀಗೆ ಯಾರ್ಯಾರನ್ನೋ ಅಧಿಕಾರಕ್ಕೆ ತಂದು 'ರಿಮೋಟ್ ಕಂಟ್ರೋಲ್' ತನ್ನ ಕೈಯಲ್ಲಿ ಇಟ್ಟುಕೊಂಡು ದರ್ಬಾರ್ ನಡೆಸಿದರು. ೮೦ರ ದಶಕದ ನಂತರ ದಾವೂದ್ ಇಬ್ರಾಹಿಂ, ಚೋಟಾ ಶಕೀಲ್, ಚೋಟಾ ರಾಜನ್ ಮುಂಬೈಯನ್ನು ನಿಯಂತ್ರಿಸತೊಡಗಿದರು. ಅದಕ್ಕೆ ಪ್ರತಿಯಾಗಿ ಮಧ್ಯಮ ವರ್ಗದ ಹಿಂದೂಗಳು ಠಾಕ್ರೆ ಎಂಬ 'ಹಿಂದೂ ದಾವೂದ್'ನನ್ನು ಸೃಷ್ಟಿಸಿದರು. ಆಗಲೂ ಕಾಂಗ್ರೆಸ್ ನಿರ್ಜೀವಿಯೇ !

ಕಮ್ಯುನಿಸ್ಟರು ಮಾತ್ರವಲ್ಲ, ದಲಿತರೂ ಸೇರಿದಂತೆ ಎಲ್ಲ ಪ್ರಗತಿಪರ ವಿಚಾರಗಳ ಸಂಘಟನೆಗಳೊಂದಿಗೆ ಠಾಕ್ರೆಗೆ ತಕರಾರಿತ್ತು. ಡಾ|| ಅಂಬೇಡ್ಕರ್ ಅವರು ರಾಮ ಮತ್ತು ಕೃಷ್ಣರ ಬಗ್ಗೆ ಬರೆದ ಪುಸ್ತಕ ನಿಷೇಧಿಸಬೇಕು ಎಂದು ಠಾಕ್ರೆ ಸಾವಿರಾರು ಜನರನ್ನು ಕಟ್ಟಿಕೊಂಡು ಮೆರವಣಿಗೆ ಮಾಡಿದರು. ಔರಂಗಾಬಾದಿನಲ್ಲಿ ಮರಾಠವಾಡ ವಿಶ್ವವಿದ್ಯಾಲಯಕ್ಕೆ ಅಂಬೇಡ್ಕರ್ ವಿಶ್ವವಿದ್ಯಾಲಯವೆಂದು ನಾಮಕರಣ ಮಾಡಲು ಸರ್ಕಾರ ಮುಂದಾದಾಗ, ಅದನ್ನು ಠಾಕ್ರೆ ವಿರೋಧಿಸಿದರು. ಆಗ ಶಿವಸೇನೆಗೆ ಪ್ರತಿಯಾಗಿ ದಲಿತ ಪ್ಯಾಂಥರ್ ಭಾರಿ ಹೋರಾಟವನ್ನೇ ನಡೆಸಿತು. ಠಾಕ್ರೆಯನ್ನು ಟೀಕಿಸಿ ಬರೆದ ಪತ್ರಕರ್ತ ನಿಖಿಲ್ ವಾಗ್ಲೆ ಮೇಲೆ ಐದಾರು ಬಾರಿ ಹಲ್ಲೆ ನಡೆಯಿತು.

ಠಾಕ್ರೆ ವ್ಯಕ್ತಿತ್ವದಲ್ಲಿ ಬರೀ ನಕಾರಾತ್ಮಕ ಅಂಶಗಳು ಇರಲಿಲ್ಲ. ಆತನೊಳಗೊಬ್ಬ ಅದ್ಭುತವಾದ ಕಾರ್ಟೂನಿಸ್ಟ್ ಇದ್ದ. ಪಂಡಿತ್ ನೆಹರೂ ವ್ಯಂಗ್ಯಚಿತ್ರವನ್ನು ಠಾಕ್ರೆ ಬಿಡಿಸಿದಾಗ, ಅದನ್ನು ನೋಡಿ ಅವರು ಎಂಜಾಯ್ ಮಾಡಿದ್ದರು. ವೈಯಕ್ತಿಕವಾಗಿ ಠಾಕ್ರೆ ಹಾಸ್ಯಪ್ರಜ್ಞೆಯ ಮೃದುಭಾಷಿ. ಟಿವಿಯಲ್ಲಿ ಭಾರತೀಯ ಕ್ರಿಕೆಟಿಗರು ಸಿಕ್ಸರ್-ಫೋರ್ ಬಾರಿಸಿದಾಗ, ಯುವಕರಂತೆ ಜೈ ಜೈ ಎಂದು ಹೇಳಿ ಕೇಕೆ ಹಾಕುತ್ತಿದ್ದರು. ಮದ್ಯವನ್ನು ಸೇವಿಸುತ್ತ ತಮ್ಮದೇ ಆದ ಲೋಕದಲ್ಲಿ ತನ್ಮಯರಾಗುತ್ತಿದ್ದರು. ಎಷ್ಟೇ ಟೀಕೆ-ಟಿಪ್ಪಣಿ, ಆಕ್ರೋಶ-ಅಸಮಾಧಾನ ವ್ಯಕ್ತವಾದರೂ ಅವರು ಸಮಾಧಾನದಿಂದಲೇ ಪ್ರತಿಕ್ರಿಯಿಸುತ್ತಿದ್ದರು. ಆದರೆ ಮರಾಠಿಗರ ಬೃಹತ್ ಸಮಾವೇಶಗಳಲ್ಲಿ ಮಾತ್ರ ತಮ್ಮ ರೌದ್ರಾವತಾರ ಪ್ರದರ್ಶಿಸುತ್ತಿದ್ದರು. ಮುಂಬೈ, ಮುಂಬೈಕರ್ ಮತ್ತು ಮಹಾರಾಷ್ಟ್ರ ಎಂದು ಜೀವನಪೂರ್ತಿ ಹೇಳಿದ ಅವರು ಎಂದಿಗೂ ಮಹಾರಾಷ್ಟ್ರದ ಅಭಿವೃದ್ಧಿ, ರೂಪುರೇಷೆ, ಮೂಲ ಸೌಕರ್ಯ ಪೂರೈಕೆ, ಜನರ ಉದ್ಯೋಗ ಭದ್ರತೆ, ಸುರಕ್ಷತೆ ಶಿಕ್ಷಣದ ಬಗ್ಗೆ ಮಾತನಾಡಲಿಲ್ಲ. ಅಂತಿಮವಾಗಿ ಹೇಳುವುದಾದರೆ, ಮುಂಬೈಯಲ್ಲಿದ್ದುಕೊಂಡೇ ಅವರು ದೇಶದ ಗಮನ ಸೆಳೆದರು. ಹಲವು ಅವಕಾಶಗಳು ಲಭ್ಯವಾದರೂ ಅವರು ಮುಂಬೈ ತೊರೆಯಲಿಲ್ಲ. ಬೇರೆ ಮಹಾನಗರಗಳಿಗೆ ಭೇಟಿ ನೀಡುವ ಇಚ್ಛೆ ತೋರಲಿಲ್ಲ. ಹೀಗಾಗಿ ಬಾಳ ಠಾಕ್ರೆ ವ್ಯಕ್ತಿತ್ವ ಸುಲಭವಾಗಿ ಅರ್ಥ ಮಾಡಿಕೊಳ್ಳುವುದು ಕಷ್ಟ.

ವಯಸ್ಸಾಗುತ್ತ ಬಂದಾಗ ಠಾಕ್ರೆಗೆ ತನ್ನ ಉತ್ತರಾಧಿಕಾರಿಯನ್ನು ಮಾಡಿಕೊಳ್ಳುವುದು ಅನಿವಾರ್ಯವಾಯಿತು. ಶಿವಸೇನೆ ಪ್ರಜಾಪ್ರಭುತ್ವವಾದಿ ಸಂಘಟನೆಯಲ್ಲ. ಅಲ್ಲಿ ಆಂತರಿಕ ಪ್ರಜಾಪ್ರಭುತ್ವ ಇರಲಿಲ್ಲ. ಅದೇನಿದ್ದರೂ ಬಾಳ ಠಾಕ್ರೆಯವರ ಖಾಸಗಿ ಆಸ್ತಿಯಾಗಿತ್ತು. ಅಂತಲೇ ಸಂಘಟನೆಗಾಗಿ ದುಡಿದ ಮನೋಹರ ಜೋಶಿಯವರನ್ನು ಮೂಲೆಗುಂಪು ಮಾಡಿ, ತಮ್ಮ ಮಕ್ಕಳನ್ನೇ ಉತ್ತರಾಧಿಕಾರಿಯಾಗಿ ಮಾಡಲು ಮುಂದಾದರು. ಮಕ್ಕಳಲ್ಲಿ ಯಾರನ್ನು ಮಾಡಬೇಕೆಂಬ ಪ್ರಶ್ನೆ ಉದ್ಭವಿಸಿದಾಗ, ತಮ್ಮ ಸಹೋದರನ ಮಗ ರಾಜ್ ಠಾಕ್ರೆಯನ್ನು ಹೊರದಬ್ಬಿ ಸ್ವಂತ ಮಗ ಉದ್ಧವ್ ಠಾಕ್ರೆಗೆ ಅಧಿಕಾರ ಪಟ್ಟ ಕಟ್ಟಿದರು. ವಿದಾಯ ಹೇಳುವ ಮುನ್ನ ತಮ್ಮ ಮಗ ಮತ್ತು ಮೊಮ್ಮಗನನ್ನು ಚೆನ್ನಾಗಿ ನೋಡಿಕೊಂಡು ಅವರ ನಾಯಕತ್ವವನ್ನು ಸ್ವೀಕರಿಸಬೇಕೆಂದು ಜನರಿಗೆ ಠಾಕ್ರೆ ವಿನಂತಿಸಿದ್ದುದುಂಟು.

ಭಾರತದ ಸಂವಿಧಾನವು ತನಗೆಂದೂ ಅನ್ವಯವಾಗದ ರೀತಿಯಲ್ಲಿ ನಡೆದುಕೊಂಡ ಠಾಕ್ರೆಯವರ ಅಂತಿಮಯಾತ್ರೆ ವೇಳೆ ರಾಷ್ಟ್ರಧ್ವಜವು ಅವರ ದೇಹವನ್ನು ಅಲಂಕರಿಸಿದ್ದುದು ಇಂದಿನ ವ್ಯಂಗ್ಯ !

ಇದು ಬಾಳ ಠಾಕ್ರೆ ನಡೆದು ಬಂದ ದಾರಿ. ದಾರಿಯುದ್ದಕ್ಕೂ ಹಿಂಸೆ, ದ್ವೇಷ, ರಕ್ತಪಾತದ ಹೆಜ್ಜೆಗುರುತುಗಳಿವೆ. ವ್ಯಕ್ತಿಯೊಬ್ಬ ಸತ್ತಾಗ ಹೀಗೆಲ್ಲ ಬರೆಯಬಾರದು ನಿಜ. ಆದರೆ ಮನುಷ್ಯರನ್ನು ಜಾತಿ-ಧರ್ಮ- ಭಾಷೆಯಾಧಾರದಲ್ಲಿ ವಿಭಜಿಸಿ ಕಲಹದ ಕಿಡಿ ಹೊತ್ತಿಸುವವರ ಬಗ್ಗೆ ಹೀಗೆ ಬರೆಯದಿದ್ದರೆ ಅಕ್ಷರದ್ರೋಹವಾಗುತ್ತದೆ.

**ಸನತ್‌ಕುಮಾರ ಬೆಳಗಲಿ**
ನಂ. ಎಲ್‌ಎಫ್-೧೭/೬, ಬಿಡಿಎ ಫ್ಲ್ಯಾಟ್ಸ್, ಬಿಟಿಎಂ ಬಡಾವಣೆ, ಬೆಂಗಳೂರು - ೫೬೦ ೦೭೬

# ಡೊನಾಲ್ಡ್ ಆ್ಯಂಡರ್‌ಸನ್ ಅವರೊಡನೆ ಸಂದರ್ಶನ

ಪರಿಸರ ಮತ್ತು ಜೀವವೈವಿಧ್ಯಗಳೊಂದಿಗಿನ ಮಾನವ ಸಂಬಂಧ ಎಷ್ಟು ಸಂಕೀರ್ಣವೋ ಅಷ್ಟೇ ಅಪೂರ್ವವಾದದ್ದು. ಆಧುನಿಕತೆಯ ದೆಸೆಯಿಂದ ಬದುಕು ಯಾಂತ್ರಿಕವಾಗಿ, ನಮ್ಮ ಸುತ್ತಲಿನ ಪರಿಸರದಿಂದ ನಾವು ದೂರಾದರೂ, ಮತ್ತೆ ಮತ್ತೆ ನಮ್ಮನ್ನು ಮರಳಿ ಮೂಲದೆಡೆಗೆ ಸೆಳೆಯುವ ಗುಣ ನಿಸರ್ಗದ ನಿಗೂಢತೆಗಿದೆ. ಬಹುಶಃ ಇದೇ ಕಾರಣದಿಂದಾಗಿ, ಆಧುನಿಕ ಜಗತ್ತಿನ ಜಂಜಡದ ನಡುವೆಯೂ ವನ್ಯಜೀವಿಗಳ ಬಗ್ಗೆ ಬರೆಯುವವರನ್ನು, ಛಾಯಾಚಿತ್ರಗ್ರಾಹಕರನ್ನು, ಚಾಲ್ತಿಯಲ್ಲಿ ಇರುವ ತರಹೆವಾರಿ ಚಾನೆಲ್‌ಗಳನ್ನು ಜನರು ಬೆರಗಿನಿಂದ ಗಮನಿಸುವುದು. ಆದರೆ ಇಂದು ಕಾಡುಗಳು, ವನ್ಯಜೀವಿಗಳು ಮತ್ತು ದೇಶದ ನೈಸರ್ಗಿಕ ಸಂಪನ್ಮೂಲಗಳು ಎದುರಿಸುತ್ತಿರುವ ಸವಾಲುಗಳನ್ನು ಕಂಡಾಗ, ನಮ್ಮಿಂದ ಇನ್ನಷ್ಟು ಸೂಕ್ಷ್ಮವಾದ ಪ್ರತಿಕ್ರಿಯೆ ಬರಬೇಕಾಗಿದೆ ಎಂದೆನಿಸುತ್ತದೆ. ಇತ್ತೀಚಿನ ದಿನಗಳಲ್ಲಿ, ಪರಿಸರ ಮತ್ತು ವನ್ಯಜೀವಿಗಳೆಂದರೆ ಭಯ ಮತ್ತು ಕೌತುಕದ ಹೊರತಾಗಿ ಬೇರೆ ಭಾವಗಳು ಮೂಡಲಾರವೋ ಎಂಬ ಅನುಮಾನ ಕಾಡುತ್ತದೆ. ಈ ಹೊತ್ತಿನಲ್ಲಿ ಥಟ್ಟನೆ ನೆನಪಿಗೆ ಬರುವುದು ಬೇಟೆಗಾರ ಮತ್ತು ಬರಹಗಾರನಾಗಿ ಖ್ಯಾತಿ ಪಡೆದ ಕೆನೆತ್ ಆ್ಯಂಡರ್‌ಸನ್. ಆ್ಯಂಡರ್‌ಸನ್, ಆರು ತಲೆಮಾರುಗಳಿಂದ ಕರ್ನಾಟಕದಲ್ಲಿಯೇ ನೆಲೆಸಿದ್ದ, ಸ್ಕಾಟಿಶ್ ಮೂಲದವನು. ಅಪ್ರತಿಮ ಧೈರ್ಯಶಾಲಿ. ಚಾಣಾಕ್ಷ ಬೇಟೆಗಾರನಾಗಿದ್ದ ಆ್ಯಂಡರ್‌ಸನ್, ತನ್ನ ಚೆಲುವಾದ ಬರವಣಿಗೆಯಿಂದ ಭಾರತದ ಕಾಡುಗಳನ್ನು, ಕಾಡಿನ ಕತೆಗಳನ್ನು ಓದುಗರಿಗೆ ಕಟ್ಟಿಕೊಟ್ಟ. ಕೇವಲ ನರಭಕ್ಷಕನನ್ನು ಬೇಟೆಯಾಡುವ ರೋಚಕತೆಯನ್ನು ಓದುಗರಿಗೆ ತಲುಪಿಸಿ ರಂಜಿಸುವ ಉದ್ದೇಶ ಮಾತ್ರ ಆ್ಯಂಡರ್‌ಸನ್‌ನ ಬರವಣಿಗೆಗಿರಲಿಲ್ಲ. ನಮ್ಮ ಸುತ್ತಲಿನ ಸಹಜವಾದ ಪರಿಸರದಲ್ಲಿ, ಅಭೇದ್ಯವಾದ ಕಾಡುಗಳಲ್ಲಿ ಯಾವುದೂ ಅಮುಖ್ಯವಲ್ಲ ಮತ್ತು ಇಲ್ಲಿ ನಿರಂತರವಾಗಿ ಅನ್ವೇಷಿಸುತ್ತಿರುವವನಿಗೆ ಮಾತ್ರ ಬದುಕಿನ ಜೀವಂತಿಕೆಯನ್ನು ಉಳಿಸಿಕೊಳ್ಳಲು ಸಾಧ್ಯ ಎಂಬ ಸಂದೇಶ ಹೊತ್ತ ಆ್ಯಂಡರ್‌ಸನ್‌ನ ಬರಹಗಳು, ಇಂದು ಅತ್ಯಂತ ಪ್ರಸ್ತುತವೆನಿಸುತ್ತದೆ. ಮೈಜುಮ್ಮೆನಿಸುವ ತನ್ನ ಬೇಟೆಯ ಕತೆಗಳನ್ನು ಅನಾವರಣಗೊಳಿಸುತ್ತಲೇ ಪರಿಸರ ವಿಜ್ಞಾನದ ಪಾಠ ಹೇಳಿದ ಆ್ಯಂಡರ್‌ಸನ್‌ನ ಬರವಣಿಗೆಗಳನ್ನು ಮೊದಲ ಬಾರಿ ಕನ್ನಡಕ್ಕೆ ಪರಿಚಯಿಸಿದ ಕೀರ್ತಿ ಕೆ. ಪಿ. ಪೂರ್ಣಚಂದ್ರ ತೇಜಸ್ವಿಯವರಿಗೆ ಸಲ್ಲುತ್ತದೆ.

ಆ್ಯಂಡರ್‌ಸನ್ ಕತೆಗಳ ಪರಿಚಯವಿರುವವರಿಗೆ, ಆತನ ಪುತ್ರ ಡೊನಾಲ್ಡ್ ಆ್ಯಂಡರ್‌ಸನ್‌ರ ಪರಿಚಯವನ್ನು ಹೊಸದಾಗಿ ಮಾಡುವ ಅಗತ್ಯವೇನಿಲ್ಲ. ಧೈರ್ಯ, ಚುರುಕುತನ, ಕಾಡಿನ ಬಗೆಗಿನ ಜ್ಞಾನ ಎಲ್ಲದರಲ್ಲೂ ತಂದೆಯನ್ನೇ ಹೋಲುವ ಡೊನಾಲ್ಡ್ ಇಂದು ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ತಂದೆಯಂತೆ ಬರವಣಿಗೆಯ ದಾರಿ ಹಿಡಿಯದೇ ಹೋದರೂ, ಡೊನಾಲ್ಡ್ ಮಾತಿಗೆ ನಿಂತರೆ ಭಾರತದ ಕಾಡುಗಳನ್ನು ಅದ್ಭುತವಾಗಿ ಬಿಚ್ಚಿಡುತ್ತಾರೆ. ಪರಿಸರವೆಂದರೇನು, ಸಂರಕ್ಷಣೆಯ ಬಗ್ಗೆ ನಮ್ಮ ಮತ್ತು ಸರ್ಕಾರದ ನಿಲುವು ಎಂತಿರಬೇಕು ಎಂಬಿತ್ಯಾದಿ ಪ್ರಶ್ನೆಗಳೂ ನಮ್ಮನ್ನು ಕಾಡುತ್ತಿರುವ ಈ ಹೊತ್ತಿನಲ್ಲಿ, ಬೇಟೆ, ಸಂರಕ್ಷಣೆ, ಕಾಡುಗಳ ಬಗ್ಗೆ ಡೊನಾಲ್ಡ್‌ರನ್ನು ಮಾತನಾಡಿಸಲು 'ಹೊಸತು' ನಿರ್ಧರಿಸಿತು.

''ನನಗೆ 'ಸರ್'ಗಳಲ್ಲಿ ನಂಬಿಕೆ ಇಲ್ಲ'' ಎಂದು ಎಚ್ಚರಿಸಿ ಮಾತಿಗಿಳಿದ ಡೊನಾಲ್ಡ್‌ರನ್ನು ಸಂವಾದದುದ್ದಕ್ಕೂ ನಾವೆಲ್ಲರೂ ಡಾನ್ ಎಂದೇ ಕರೆಯಬೇಕಾಯ್ತು.

**ಸಂದರ್ಶನ ಲೇಖನ**

**ಸಾಕ್ಷಿ**




*''ಕಾಡುಗಳಿಗೆ, ಸಂರಕ್ಷಣೆಗೆ ಯಾವುದು ಪೂರಕವಾಗಿದೆಯೋ ಅಂತಹ ಎಲ್ಲ ಯೋಜನೆ, ಸ್ಥಾನಮಾನಗಳನ್ನು ನಾವು ಸ್ವಾಗತಿಸಬೇಕು.''*

**– ಡೊನಾಲ್ಡ್ ಆ್ಯಂಡರ್‌ಸನ್**

**ಕೆನೆತ್ ಆ್ಯಂಡರ್‌ಸನ್ ಆರು ತಲೆಮಾರುಗಳಿಂದ ಕರ್ನಾಟಕದಲ್ಲಿಯೇ ನೆಲೆಸಿದ್ದ, ಸ್ಕಾಟಿಶ್ ಮೂಲದ ಅಪ್ರತಿಮ ಧೈರ್ಯಶಾಲಿ. ಚಾಣಾಕ್ಷ ಬೇಟೆಗಾರರು. ಅವರ ಜಾಡಿನಲ್ಲೇ ಹೆಜ್ಜೆ ಇಟ್ಟಿರುವ ಅವರ ಪುತ್ರ ಡೊನಾಲ್ಡ್ ಆ್ಯಂಡರ್‌ಸನ್ ವನ್ಯ ಜೀವನದ ಬಗ್ಗೆ, ವನ್ಯಜೀವಿಗಳ ಬಗ್ಗೆ ರೋಚಕ ಅನುಭವವುಳ್ಳವರು. 'ಹೊಸತು' ಕಳೆದ ಅಕ್ಟೋಬರ್ ೨೫, ೨೦೧೨ರಂದು ನಡೆಸಿದ ಸಂದರ್ಶನವೊಂದರಲ್ಲಿ ತಮ್ಮ ಅಪರೂಪದ ಅನಿಸಿಕೆಗಳನ್ನು ನಮ್ಮೊಡನೆ ಹಂಚಿಕೊಂಡಿದ್ದಾರೆ. ಸಂದರ್ಶನ ಲೇಖನವನ್ನು ಶ್ರೀಮತಿ ಸಾಕ್ಷಿ ಅವರು ಸಿದ್ಧಪಡಿಸಿಕೊಟ್ಟಿದ್ದಾರೆ. ಜಿ. ರಾಮಕೃಷ್ಣ ಮತ್ತು ಗಿರಿಧರ ಖಾಸನೀಸ್ ಸಹ ಸಾಕ್ಷಿ ಅವರೊಡನೆ ಸಂದರ್ಶನದ ವೇಳೆಯಲ್ಲಿ ಉಪಸ್ಥಿತರಿದ್ದರು.**

**ಹೊ**ಸತು : ನೀವು ಛಾಯಾಗ್ರಾಹಕನಾಗಿದ್ದಿರಿ, ಬೇಟೆಗಾರನಾಗಿದ್ದಿರಿ. ಈ ಎರಡೂ ಪಾತ್ರಗಳನ್ನು ನಿಭಾಯಿಸಿದ ಮೇಲೆ ಇಂದು ಕಾಡಿನ ಛಾಯಾಗ್ರಹಣದ ಬಗ್ಗೆ ನಿಮ್ಮ ಅಭಿಪ್ರಾಯವೇನು ?

**ಡಾನ್ :** ನಾನು ಹೇಳಿಕೊಳ್ಳುವಂತಹ ಛಾಯಾಗ್ರಾಹಕನೇನಲ್ಲ. ಕೆಲವೊಮ್ಮೆ ಕ್ಯಾಮೆರಾ ಹಿಡಿದು ಕಾಡು ಸುತ್ತಿದ್ದೇನಷ್ಟೇ. ಇಂದಿನ ಛಾಯಾಗ್ರಹಣವೆಲ್ಲಾ ಕಾರು, ಬಸ್ಸುಗಳ ರಕ್ಷೆಯಲ್ಲೇ ಮುಗಿದುಹೋಗುತ್ತದೆ. ನಮ್ಮ ಕಾಲದಲ್ಲಿ, ನಾವು ಒಬ್ಬೊಬ್ಬರೇ, ಕಾಡಿನಲ್ಲಿ ಅಡ್ಡಾಡುತ್ತಾ ಛಾಯಾಗ್ರಹಣ ಮಾಡಲು ಪ್ರಯತ್ನಿಸುತ್ತಿದ್ದೆವು. ನನ್ನಲ್ಲೊಂದು ಮಂತ್ರವಿದೆ. ಅದನ್ನು ಹೆಚ್ಚು ಜನರಿಗೆ ಹೇಳಿಕೊಟ್ಟಿಲ್ಲ. ಆದರೆ ಯಾವ ಕ್ಯಾಮೆರಾ ಬೇಕಾದರೂ ಕೊಡಿ, ಅದನ್ನು ನಾನು ಮಂತ್ರಿಸಿಕೊಟ್ಟರೆ, ಎಲ್ಲಿಯೂ ಪತ್ತೆಯಾಗದ ಹುಲಿಗಳು ತಾವಾಗಿಯೇ ಎದುರು ಬಂದು ನಿಲ್ಲುತ್ತವೆ ಎಂಬ ಮಾತಿದೆ ! (ಜೋರಾಗಿ ನಗು).

**ಹೊ :** ಕಾಡುಗಳೊಂದಿಗಿನ ನಿಮ್ಮ ಒಡನಾಟ ಸುದೀರ್ಘವಾದದ್ದು. ಈಗ, ಬೆಂಗಳೂರಿನಲ್ಲಿ ಕುಳಿತು ಸುತ್ತಲೂ ಗಮನಿಸುವಾಗ ಥಟ್ಟನೆ ನಿಮ್ಮ ಮನಸ್ಸಿಗೆ ಬರುವ ವಿಚಾರವೇನು ?

**ಡಾನ್ :** ಇನ್ನು ಕೆಲವು ದಶಕಗಳಲ್ಲಿ, ಬೆಂಗಳೂರಿನಲ್ಲಿ ಬದುಕುವುದೇ ಅಸಾಧ್ಯವಾಗಿ ಬಿಡುತ್ತದೆ, ನೋಡುತ್ತಿರಿ. ಇಲ್ಲಿಯೇ ಇರಬೇಕಾದ ನಮ್ಮ ಯುವಪೀಳಿಗೆಯ ಬಗ್ಗೆ ನಾವು ಚಿಂತೆ ಮಾಡಲೇ ಬೇಕಾಗಿದೆ. ಈ ನಗರದಲ್ಲಿ ಸಾವಿರಾರು ಕಾರುಗಳು ಒಂದಿಂಚೂ ಜಾಗ ಬಿಡದೆ ರಸ್ತೆಗಳನ್ನೆಲ್ಲಾ ಆಕ್ರಮಿಸಿ ಕೊಳ್ಳುತ್ತಿವೆ ಎನ್ನುವುದನ್ನು ಬಿಟ್ಟರೆ ಬೇರೇನೂ ಉಳಿದಿಲ್ಲ. ಇಲ್ಲಿನ ಪರಿಸರವೆಲ್ಲಾ ವಿಷಮಯವಾಗಿಹೋಗಿದೆ. ನನ್ನ ಉಸಿರಾಟದ ತೊಂದರೆಯಿಂದ ನಾನು ಮನೆಯೊಳಗೆ ಮಲಗದೆ ಅಂಗಳದಲ್ಲಿ ಮಂಚವಿರಿಸಿ ಮಲಗುತ್ತೇನೆ. ಇದು ಬೆಂಗಳೂರಿನಲ್ಲಿರುವವತನಕದ ಸಮಸ್ಯೆ. ಇಲ್ಲಿಂದ ಯಾವ ಕಾಡಿಗೆ ಹೋದರೂ ಸರಿ, ಥಟ್ಟನೆ ಶೇಕಡ ೨೦ರಷ್ಟು ಆರೋಗ್ಯ ಸುಧಾರಿಸಿಬಿಡುತ್ತದೆ. ನಮ್ಮ ಉಳಿವಿಗೆ ಬೇಕಾಗುವಷ್ಟು ಪರಿಸರವನ್ನು ನಾವು ರಕ್ಷಿಸುವ ಪ್ರಯತ್ನ ಮಾಡುತ್ತಿಲ್ಲ.

**ಹೊ :** ಸದ್ಯದ ಪರಿಸ್ಥಿತಿಯನ್ನು ಗಮನಿಸಿದರೆ, ನಮ್ಮ ಕಾಡುಗಳು ಹೆಚ್ಚು ದಿನ ಉಳಿಯುತ್ತವೆ ಎಂದು ನಿಮಗನ್ನಿಸುತ್ತಿದೆಯೇ ?

**ಡಾನ್ :** ಕಾಡುಗಳು ಉಳಿಯುತ್ತವೆ, ಆದರೆ ಪ್ರಾಣಿಗಳು ಮಾತ್ರ ಉಳಿಯಲಾರವು. ಇಲ್ಲಿಂದ ಕೆಲವು ಮೈಲಿಗಳಾಚೆ ಅತ್ಯಂತ ಸುಂದರ ಕಾಡುಗಳಿವೆ. ಆದರೆ ಹುಡುಕಿದರೂ ಒಂದೇ ಒಂದು ಪ್ರಾಣಿ ಅಲ್ಲಿ ನಿಮಗೆ ಸಿಗಲಾರದು. ನಮಗೆ ಪರಿಸರ ಸಂರಕ್ಷಣೆಯ ವಿಧಾನವೇ ಗೊತ್ತಿಲ್ಲ. ಇಲ್ಲಿ ಕೆಲಸ ಮಾಡುವ ಪರಿಸರವಾದಿ ಸಂಘಟನೆಗಳೂ ತಮ್ಮ ಧ್ಯೇಯವೇನಾಗಿರ ಬೇಕೆಂದು ತೀರ್ಮಾನಿಸಿಕೊಂಡಿಲ್ಲ. ಇಲ್ಲಿ ಸಾವಿರಾರು ಪ್ರಾಣಿಗಳಿವೆ. ಅವುಗಳನ್ನೆಲ್ಲಾ ಕೊಠಡಿಯಲ್ಲಿ ಕೂಡಿಹಾಕಿ ಸಂರಕ್ಷಣೆ ಮಾಡುತ್ತೇವೆ ಎಂದು ಹೇಳಲಾಗುವುದಿಲ್ಲ. ಅವು ಕಾಡಿನಲ್ಲಿಯೇ ಇರಬೇಕಾಗುತ್ತದೆ.

**ಹೊ :** ಇತ್ತೀಚಿನ ದಿನಗಳಲ್ಲಿ ಹೆಚ್ಚುತ್ತಿರುವ ಕಳ್ಳ ಬೇಟೆಯ ಬಗ್ಗೆ ನಿಮ್ಮ ಅಭಿಪ್ರಾಯ...

**ಡಾನ್ :** ಇಲ್ಲೂ ನಾವು ಹಲವಾರು ತಪ್ಪುಗಳನ್ನು ಮಾಡುತ್ತಿದ್ದೇವೆ. ಕಳ್ಳ ಬೇಟೆ ತಡೆಯಬೇಕಾದರೆ ಮೊದಲು ಮೂಲದಲ್ಲಿರುವ ಸಮಸ್ಯೆಗೆ ನಾವು ಪರಿಹಾರ ಹುಡುಕುತ್ತಾ ಹೋಗಬೇಕಾಗುತ್ತದೆ. ಕಾಡಿನಲ್ಲಿಯೇ ಜೀವಿಸುತ್ತಾ, ಅಲ್ಲಿಯೇ ಬದುಕು ಕಟ್ಟಿಕೊಂಡಿರುವವರು, ಮನೆಯಲ್ಲಿ ಜನರು ಹಸಿವಿನಿಂದ ಸಾಯುತ್ತಿರುವಾಗ, ನಿಮ್ಮ ಪರಿಸರ ಸಂರಕ್ಷಣೆಯ ಪ್ರವಚನ ಕೇಳಲಾರರು. ಹಾಗೆಯೇ, ಕಳ್ಳ ಬೇಟೆಗಾರರು ಯಾರೂ ಗಸ್ತಿನವರು ಕೋವಿ ಹಿಡಿದುಕೊಂಡು ತಿರುಗಾಡುತ್ತಿರುವ ಹೆದ್ದಾರಿಯಲ್ಲಿಯೇ ಬಂದು ಕಾಡು ಸೇರಿಕೊಳ್ಳುವುದಿಲ್ಲ! ಬರೀ ಒಂದು ಟೋಲ್‌ಗೇಟ್ ಅಥವಾ ಚೆಕ್ ಪೋಸ್ಟ್‌ನ ಬಳಿ ಕಾವಲು ಕಾಯಲು ಇಬ್ಬರನ್ನು ನಿಲ್ಲಿಸಿದರೆ ಅದರಿಂದ ಯಾವ ಪ್ರಯೋಜನವೂ ಆಗಲಾರದು. ವನ್ಯಜೀವಿ ಕಾಯ್ದೆ ಯಡಿಯಲ್ಲಿ ಎಲ್ಲಿ ಯಾವ ಕಾರಣಕ್ಕೂ ಗುಂಡು ಹಾರಿಸ ಬಾರದೆಂದು ಸ್ಪಷ್ಟವಾಗಿ ಹೇಳಿದ್ದರೂ ನಮ್ಮಲ್ಲಿ ಸಾವಿರಾರು ಜನರ ಬಳಿ ತೋಡಾ ಕೋವಿಗಳಿವೆ. ಪರವಾನಗಿ ತೆಗೆದುಕೊಳ್ಳುವಾಗ ಆತ್ಮರಕ್ಷಣೆಗೆ ಎಂದು ಹೇಳಿಯೇ ತೆಗೆದುಕೊಂಡರೂ, ಇವುಗಳ ಬಳಕೆ ಯಾಗುವುದು ಬಡಪಾಯಿ ಪ್ರಾಣಿಗಳ ಮೇಲೆ. ಅಷ್ಟು ಸಾಲದೆಂಬಂತೆ, ಸತ್ತ ದನಗಳಿಗೆಲ್ಲಾ ವಿಷ ಹಾಕಿಬಿಡುತ್ತಾರೆ. ಇದರಿಂದಾಗಿ, ಇವುಗಳನ್ನು ತಿನ್ನಲು ಬರುವ ನರಿ, ಕತ್ತೆ-ಕಿರುಬಗಳಂತಹ ಸಣ್ಣ ಮಾಂಸಾಹಾರಿ ಪ್ರಾಣಿಗಳನ್ನು ನಾವು ಕಳೆದುಕೊಳ್ಳುತ್ತಿದ್ದೇವೆ. ನನ್ನ ಪ್ರಕಾರ, ಕಳ್ಳ ಬೇಟೆಯನ್ನು ತಡೆಯಲು ಅತ್ಯುತ್ತಮ ವಿಧಾನ, ಮೊದಲು ಬೇಟೆಯಾಡುತ್ತಿದ್ದು ಕಾಡನ್ನು ಚೆನ್ನಾಗಿ ಅರಿತಿರುವ ಶಿಕಾರಿಗಳನ್ನೇ ಕೆಲಸಕ್ಕೆ ತೆಗೆದು ಕೊಳ್ಳುವುದು. ಒಬ್ಬ ಬೇಟೆಗಾರನಷ್ಟು ನಿಪುಣ ವ್ಯಕ್ತಿ ಇನ್ನೊಬ್ಬ ನಿಮಗೆ ಸಿಗಲಾರ. ಈಗ ಆಫ್ರಿಕಾದ ವಿಚಾರವನ್ನೇ ತೆಗೆದುಕೊಳ್ಳಿ - ಅಲ್ಲಿ ಕಾನೂನನ್ನು ಅಷ್ಟು ನಿಯತ್ತಾಗಿ ಜಾರಿ ಮಾಡಲು ಸಾಧ್ಯವಾಗಿರುವುದು ಅಲ್ಲಿನ ಪ್ರೊಫೆಷನಲ್ ಗಾರ್ಡುಗಳಿಂದ. ಕಳ್ಳ ಬೇಟೆ ಸುಲಭದ ಕೆಲಸವೇನಲ್ಲ. ಒಬ್ಬ ಅಪರಿಚಿತ ಕಾಡಿನತ್ತ



*ಜಿ. ಆರ್. ಮತ್ತು ಸಾಕ್ಷಿ: ಡೊನಾಲ್ಡ್ ಜೊತೆ ಸಂಭಾಷಣೆಯಲ್ಲಿ*



*ಶ್ರೀಹರ್ಷ ಗರುಡನಗಿರಿ ಮತ್ತು ಗಿರಿಧರ ಖಾಸನೀಸ್ ಸಂಭಾಷಣೆಯಲ್ಲಿ ಪಾಲ್ಗೊಂಡರು*

ಮುಖ ಮಾಡಿದರೂ ಸುತ್ತಲಿನ ಹಳ್ಳಿಯವರಿಗೆ ತಿಳಿದುಬಿಡುತ್ತದೆ. ಅಷ್ಟೇ ಅಲ್ಲ, ಕಳ್ಳ ಬೇಟೆಗಾರನಿಗೆ ಕಾಡಿನ ಇಂಚಿಂಚೂ ಪರಿಚಯವಿರಬೇಕಾಗುತ್ತದೆ.

**ಹೊ :** ನಿಮ್ಮ ಬಾಲ್ಯದ ಬಹುಪಾಲನ್ನು ಕಾಡಿನಲ್ಲೇ ಕಳೆದುದರ ಪರಿಣಾಮವೇನು ? ಕೆನೆತ್ ಆ್ಯಂಡರ್‌ಸನ್‌ರ ಮಗನಾಗಿ ಬೆಳೆಯುವ ಅನುಭವ ಹೇಗಿತ್ತು?

**ಡಾನ್ :** ಕಾಡಿನ ನಡುವೆ ಬೆಳೆದುದರ ಒಂದು ಪ್ರಯೋಜನವೆಂದರೆ, ನಾನು ಧೈರ್ಯಶಾಲಿಯಾಗಿ ರೂಪುಗೊಂಡೆ. ನಾನೀಗಲೂ ಕಾಡಿನ ಯಾವ ಮೂಲೆ ಗಾದರೂ, ಯಾವುದೇ ಭಯ, ಹಿಂಜರಿಕೆಗಳಿಲ್ಲದೆ ಧೈರ್ಯವಾಗಿ ಹೋಗಿ ಬರಬಲ್ಲೆ. 'ನನಗೆ ಪರಿಸ್ಥಿತಿಯ ಮೇಲೆ ಸಂಪೂರ್ಣ ಹಿಡಿತವಿದೆ' ಎಂದು ನಿಮಗೆ ನೀವೇ ಭರವಸೆ ಕೊಟ್ಟುಕೊಂಡರೆ ಮತ್ತೆ ಭಯಪಡುವ ಅಗತ್ಯವೇ ಇಲ್ಲ.

ಇನ್ನು ನನ್ನ ತಂದೆಯವರ ಬಗ್ಗೆ ಹೇಳುವುದಾದರೆ, ಆತ ತುಂಬ ಚಟುವಟಿಕೆಯಿಂದಿರುತ್ತಿದ್ದ. ನರಭಕ್ಷಕಗಳ ಕಾಟ ಹೆಚ್ಚಿದ್ದಾಗಲಂತೂ ಸದಾ ಕಾಡು ತಿರುಗುತ್ತಲೇ ಇರಬೇಕಾಗಿತ್ತು. ಮೊದಲೆಲ್ಲಾ ರಜೆ ಸಿಗುವುದೂ ಕೊಂಚ ಕಷ್ಟದ ವಿಚಾರವಾಗಿತ್ತು. ಆಗೆಲ್ಲಾ ತಂದೆಯವರು, ಯಾವ ವೈದ್ಯರಿಗೂ ಪತ್ತೆ ಹಚ್ಚಲಾಗ ದಂತಹ ಖಾಯಿಲೆಗಳಿಗಾಗಿ ವೈದ್ಯಕೀಯ ಗ್ರಂಥ ಗಳನ್ನೆಲ್ಲಾ ಜಾಲಾಡಿ ರಜಾ ಚೀಟಿ ಬರೆಯುತ್ತಿದ್ದರು! ಎಚ್.ಎ.ಎಲ್.ಗೆ ವರ್ಗವಾದ ಮೇಲೆ, ೪೦,೦೦೦ ಜನರಿದ್ದ ಆಫೀಸಿನಲ್ಲಿ ಅವರಿಗೆ ಹೆಚ್ಚೇನೂ ಕೆಲಸ ವಿರಲಿಲ್ಲ. ಅವರ ಕೃತಿಗಳಲ್ಲಿ ಶೇಕಡ ೮೦ರಷ್ಟನ್ನು ಅವರು ಅಲ್ಲೇ ಬರೆದು ಮುಗಿಸಿದರು. ಇನ್ನು ಬರಹದ ವಿಚಾರದಲ್ಲಿ, ಕಾರ್ಬೆಟ್‌ಗಿಂತ ನನಗೆ ಆ್ಯಂಡರ್‌ಸನ್ ಹೆಚ್ಚು ಪ್ರಿಯವಾಗುತ್ತಾರೆ. ಕಾರ್ಬೆಟ್‌ಗಿಂತ ಆ್ಯಂಡರ್‌ಸನ್ ಕಾಡುಗಳನ್ನು ಸೂಕ್ಷ್ಮವಾಗಿ ಗಮನಿಸಿದ್ದಾರೆ ಮತ್ತು ಬಣ್ಣಿಸಿದ್ದಾರೆ. ಕೆಲವು ವಿಮರ್ಶಕರು ಇವರ ಬರಹಗಳಲ್ಲಿ ಬಂದ ಘಟನೆಗಳೆಲ್ಲಾ ನಡೆದೇ ಇಲ್ಲ, ಇದು ಅಸಾಧ್ಯ ಎಂದೆಲ್ಲಾ ಮಾತನಾಡುತ್ತಾರೆ. ನಾವು ಹೊಟ್ಟೆಪಾಡಿಗೆ ಬರೆಯುವಾಗ ಶೇ. ೮೦ ಸತ್ಯವಿರುತ್ತದೆ, ಇನ್ನು ಶೇ. ೨೦ ಕಲ್ಪನೆ ಇರುತ್ತದೆ. ಅಂದ ಮಾತ್ರಕ್ಕೆ, ಉಳಿದೆಲ್ಲವೂ ಸುಳ್ಳು ಎನ್ನಲಾಗದು. ಈ ಮಾಯೆಯೆಲ್ಲಾ ಕಥಾನಕಗಳನ್ನು ನೇಯುವುದರಲ್ಲಿದೆ!

**ಹೊ :** ಹಾಗಿದ್ದರೆ ನೀವು ಬರೆಯುವುದರಲ್ಲೂ ಸಾಕಷ್ಟು ಕಲ್ಪನಾ ವಿಲಾಸ ತುಂಬಿದೆಯಂತಾಯ್ತು!

**ಡಾನ್ :** ಖಂಡಿತಾ! (ಜೋರಾಗಿ ನಗು).

**ಹೊ :** ಇತ್ತೀಚಿನ ಅಡ್ವೆಂಚರ್ ಬರಹಗಾರರ ಬಗ್ಗೆ ನಿಮಗೇನನ್ನಿಸುತ್ತದೆ? ಅವರು ಯಾವುದೇ ಒಂದು ನಿರ್ದಿಷ್ಟ ಓದುಗ ಸಮುದಾಯವನ್ನು ದೃಷ್ಟಿಯಲ್ಲಿಟ್ಟು ಕೊಂಡು ಬರೆಯುತ್ತಿದ್ದಾರೆ ಎಂದನಿಸುತ್ತದೆಯೇ?

**ಡಾನ್ :** ಬರವಣಿಗೆ ಚೆನ್ನಾಗಿರಬೇಕಾದರೆ ಒಂದೇ ಮಂತ್ರ-ಅನುಭವ. ನೀವು ಕಾಡನ್ನು ವರ್ಣಿಸಲು ಹೊರಟರೆ, ಅದರ ಅಸಲಿ ಅನುಭವ ನಿಮಗಾಗಿರ ಬೇಕು. ಇತ್ತೀಚಿನ ದಿನಗಳಲ್ಲಿ ಯುವಕರು ಎಲ್ಲ ರೀತಿಯ ಅನುಭವಗಳಿಗೂ ತೆರೆದುಕೊಳ್ಳುತ್ತಿಲ್ಲ ಎಂದನಿಸುತ್ತದೆ.

**ಹೊ :** ಕಾಡಿನಲ್ಲಿ ವಾಸಿಸುತ್ತಿರುವವರಿಗೂ ಸರ್ಕಾರಕ್ಕೂ ಸಂರಕ್ಷಣೆಯ ವಿಚಾರದಲ್ಲಿ ಆಗಾಗ ಘರ್ಷಣೆಗಳಾಗುವುದುಂಟು. ಈ ಒಕ್ಕಲೆಬ್ಬಿಸುವಿಕೆಯ ಬಗ್ಗೆ ನಿಮ್ಮ ಅಭಿಪ್ರಾಯ...

**ಡಾನ್ :** ಕಾಡನ್ನು ಅದರ ಪಾಡಿಗೆ ಬಿಟ್ಟುಬಿಡಬೇಕು. ಈಗ ನಡೆಸುವ ಪ್ರವಾಸೋದ್ಯಮದ ಮಾದರಿಯಾಗಲಿ ಅಥವಾ ಬೇರಾವ ರೀತಿಯ ಜನ ಸಂಚಾರವೂ ಕಾಡಿಗೆ ಒಳ್ಳೆಯದನ್ನು ಮಾಡಲಾರವು. ಜನರು ಯಾರೇ ಆಗಿರಲಿ, ಹೊರಜಗತ್ತಿನ ಪ್ರಭಾವ ಅವರ ಮೇಲೆ ಆಗಿಯೇ ಆಗುತ್ತದೆ. ಹಾಗಾಗಿ ಸಂರಕ್ಷಣೆಯ ವಿಚಾರದಲ್ಲಿ ನಾವು ಜಾಗರೂಕರಾಗಿರಬೇಕು.

**ಹೊ :** ಪಶ್ಚಿಮ ಘಟ್ಟಗಳಿಗೆ ಯುನೆಸ್ಕೋ ನೀಡುತ್ತಿರುವ ವರ್ಲ್ಡ್ ಹೆರಿಟೇಜ್ ಮಾನ್ಯತೆ ಬಗ್ಗೆ ನಿಮ್ಮ ಅಭಿಪ್ರಾಯವೇನು?

**ಡಾನ್ :** ಕಾಡುಗಳಿಗೆ, ಸಂರಕ್ಷಣೆಗೆ ಯಾವುದು ಪೂರಕವಾಗಿದೆಯೋ ಅಂತಹ ಎಲ್ಲ ಯೋಜನೆ, ಸ್ಥಾನಮಾನಗಳನ್ನು ನಾವು ಸ್ವಾಗತಿಸಲೇಬೇಕು.

**ಹೊ :** ಕೊನೆಯದಾಗಿ, ನಿಮ್ಮ ಬದುಕಿನಲ್ಲಿ ಕಾಡಿನಲ್ಲಿ ಕಳೆದ ಹಲವಾರು ಗಳಿಗೆಗಳಲ್ಲಿ ಮರೆಯಲಾಗದ ಕ್ಷಣ ಯಾವುದು?

**ಡಾನ್ :** ಅಂಥದ್ದು ಹಲವಾರಿವೆ. ಹಲವಾರು ಬಾರಿ ಒಂಟಿ ಸಲಗಗಳು ನನ್ನನ್ನು ಅಟ್ಟಿಸಿಕೊಂಡು ಬಂದಿವೆ. ಅದನ್ನು ನೆನೆದರೆ ಈಗಲೂ ಮೈಜುಮ್ಮೆನಿಸುತ್ತದೆ. ಕೆಲವೊಮ್ಮೆ ಬೇಟೆಯಾಡುವಾಗ ಘಟಿಸಿದ ಭೀಕರ ಅನುಭವಗಳಿವೆ. ಆದರೆ ಅತ್ಯುತ್ತಮವಾದ ಅನುಭವ ವೆಂದರೆ, ಸುಮ್ಮನೆ ಕುಳಿತು ಕಾಡಿನಲ್ಲಿ ರಾತ್ರಿಯನ್ನು ಕಳೆದದ್ದು. ಸುತ್ತಲಿನ ಸದ್ದುಗಳಿಗೆ ಕಿವಿಯಾಗಿ ಧ್ಯಾನಸ್ಥ ಸ್ಥಿತಿಯಲ್ಲಿ ಕುಳಿತುಬಿಡುವುದಕ್ಕಿಂತ ಉತ್ತಮವಾದದ್ದು ಬೇರೊಂದಿಲ್ಲ.


**ಸಾಕ್ಷಿ**
೪ನೇ ವರ್ಷ, ಬಿ.ಎ., ಎಲ್‌ಎಲ್.ಬಿ. (ಆನರ್ಸ್)
ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ ಯೂನಿವರ್ಸಿಟಿ
ಬೆಂಗಳೂರು - ೫೬೦ ೦೭೨







**ಸಾಹಿತ್ಯ-ಸಂಸ್ಕೃತಿ ಮತ್ತು ಪರಿಸರ**

ಡಾ|| ರಾಜಶೇಖರ ಮಠಪತಿ (ರಾಗಂ)

**ಪುಟ : xvi + ೧೧೨ = ೧೨೮**

**ಬೆಲೆ : ರೂ. ೮೫**

**ಕಣ್ವ ಪ್ರಕಾಶನ,** 'ಕಾಲ ಕನಸು', ನಂ. ೮೪೪, ೧ನೇ ಮುಖ್ಯರಸ್ತೆ, ನಿಸರ್ಗ ಬಡಾವಣೆ, ಚಂದ್ರಾಲೇಔಟ್, ಬೆಂಗಳೂರು - ೭೨

ಸಮಾಜ ಕುರಿತಾದ ವಿಮರ್ಶೆಯೊಳಗೆ ಸಾಹಿತ್ಯ- ಸಂಸ್ಕೃತಿ ಮತ್ತು ಪರಿಸರಗಳೂ ಸೇರುತ್ತವೆ. ರಾಜಶೇಖರ ಮಠಪತಿಯವರ ಈ ಕೃತಿಯ ಬರಹಗಳು ಇಡೀ ಸಮಾಜದ ಸ್ವಾಸ್ಥ್ಯದ ಕಾಳಜಿಯನ್ನೇ ವ್ಯಕ್ತಪಡಿಸುತ್ತವೆ. ಸಂಕಲನದ ಬರಹಗಳೆಲ್ಲವೂ ಬೇರೆಬೇರೆ ದೇಶಬಾಂಧವ ಚಿಂತಕರ ಬರಹಗಳಾಗಿದ್ದರೂ ಅವೆಲ್ಲವೂ ನಮ್ಮ ಸಮಾಜದ ಕುರಿತಾದ ಚಿಂತನೆಗಳೆನಿಸುವಷ್ಟು ಆತ್ಮೀಯ ವಾಗುತ್ತವೆ ಹಾಗೂ ಚಿಂತನೆಗೆ ದೂಡುತ್ತವೆ. ಇಡೀ ಭೂಮಂಡಲದ ಸಾಮಾಜಿಕ ಪಲ್ಲಟಗಳನ್ನು ಮುಂದಿಡುವ ಕೃತಿ ಪ್ರಪಂಚದ ಮೂಲೆ-ಮೂಲೆಗಳ ಸಮಸ್ಯೆಗಳನ್ನು ನಾವು ನಮ್ಮ ಸಮಸ್ಯೆಗಳು ಎಂದು ಭಾವಿಸುವಂತೆ ಮಾಡುತ್ತದೆ. ಸಾಮಾಜಿಕ ಕಾಳಜಿಗೆ ಇರುವ ವ್ಯಾಪ್ತಿಯ ಮಿತಿಯನ್ನು ಒಡೆಯುವಲ್ಲಿ ಈ ಕೃತಿ ಯಶ ಕಂಡಿದೆ. ಇಲ್ಲಿನ ಎಲ್ಲ ಬರಹಗಳು ಮಾನವನನ್ನೂ ಸೇರಿದಂತೆ ಇತರ ಜೀವಸಂಕುಲ ಹಂತಹಂತವಾಗಿ ಸಾಗುತ್ತಿರುವ ಹಾದಿಯನ್ನೂ, ಅದರಿಂದ ಮುಂದೆ ಎದುರಾಗಬಹುದಾದ ಪರಿಣಾಮಗಳನ್ನೂ ನಮ್ಮ ಮುಂದೆ ತೆರೆದಿಡುತ್ತಾ ಎಚ್ಚರಿಕೆಯನ್ನು ನೀಡುತ್ತವೆ. ಮನುಷ್ಯ ಸಂಪೂರ್ಣ ಸ್ವತಂತ್ರನೇನೂ ಅಲ್ಲ, ಅವನು ಅವಲಂಬಿಸಿರುವ ಜೀವಸಂಕುಲದ ಸರಪಳಿ ಅವನ ಅಂಕೆಗೂ ಸಿಗುವುದಿಲ್ಲ. ಇದನ್ನು ಅರಿತಾಗ ಮಾತ್ರ ಮನುಷ್ಯ ಮನುಷ್ಯನಾಗಿ ಉಳಿಯಬಲ್ಲ. ಅವನು ನಂಬಿರುವ ಜೀವಸಂಕುಲವೂ ಉಳಿಯಬಲ್ಲದು ಎಂಬುದನ್ನು ಕೃತಿಯು ಹಂತಹಂತವಾಗಿ ವಿವರಿಸುತ್ತಾ ಸಾಗುತ್ತದೆ.

**ಸರಳ ವಸ್ತುಗಳಿಂದ ರೋಮಾಂಚನಗೊಳಿಸುವ ವಿಜ್ಞಾನ**

ಅರವಿಂದ ಗುಪ್ತ; ಅನು : ವಿ. ಎಸ್. ಎಸ್. ಶಾಸ್ತ್ರಿ

**ಪುಟ : ೧೨೮** **ಬೆಲೆ : ರೂ. ೧೮೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ಪತ್ರಿಕೆಗಳಲ್ಲಿ ಮತ್ತು ಮಕ್ಕಳ ಪಠ್ಯಪುಸ್ತಕಗಳಲ್ಲಿ ಈಗಾಗಲೇ ನಾವು ಕಂಡಿರಬಹುದಾದ 'ನೋಡಿ ಕಲಿ ಮಾಡಿ ನಲಿ' ಮಾದರಿಯ ಕೃತಿಯಿದು. ಇದು ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದಗೊಂಡಿದ್ದು, ಇದರ ಶೀರ್ಷಿಕೆ ಇಂಗ್ಲಿಷಿನಲ್ಲಿರುವಂತೆ ಸಂಕ್ಷಿಪ್ತವಾಗಿರದೆ ಸ್ವಲ್ಪ ವಿವರಣಾತ್ಮಕವಾಗಿದೆ. ಕೃತಿಯ ಉದ್ದೇಶವೇ ಸರಳ ವಸ್ತುಗಳಿಂದ ಆಟಿಕೆಗಳನ್ನು ತಯಾರು ಮಾಡಿಕೊಳ್ಳುವುದು ಹೇಗೆ ಎಂಬುದನ್ನು ತೋರಿಸುವುದು ಮತ್ತು ಆ ಮೂಲಕ ವಿಜ್ಞಾನ - ಗಣಿತದ ತಿಳುವಳಿಕೆಯನ್ನು ನೀಡುವುದು. ಈ ಕೃತಿಯ ಲೇಖಕರು ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಿಂದ ಪದವಿ ಪಡೆದವರಾಗಿದ್ದರೂ ಸಹ ಮಕ್ಕಳ ಮನಸ್ಸನ್ನು ಅರಿತವರು. ವಿಜ್ಞಾನದೊಂದಿಗೆ ಸೃಜನಶೀಲ ಕಲೆಯನ್ನು ಮೈಗೂಡಿಸಿಕೊಂಡವರು. ಈ ಅಂಶವು ಪ್ರತಿಯೊಂದು ಆಟಿಕೆ ತಯಾರಿಕೆಯ ವಿವರಣೆಯಲ್ಲಿಯೂ ನಮಗೆ ಮನದಟ್ಟಾಗುತ್ತದೆ. ಕುತೂಹಲಿಗಳಿಗೆ ಆಸಕ್ತರಿಗೆ ಹೊಳಹುಗಳನ್ನು ನೀಡುವ ಮಹತ್ವದ ಕೃತಿಯಿದು. ಒಂದೊಂದು ಆಟಿಕೆ ತಯಾರಿಕೆಯೂ ಒಂದೊಂದು ಪ್ರಯೋಗವೇ. ಶಾಸ್ತ್ರದ ಭಾರವನ್ನು ಹೇರದೆ ಕಲಾತ್ಮಕವಾಗಿ ಜ್ಞಾನಪ್ರಸಾರ ಮಾಡುವುದು ಹೇಗೆ ಎಂಬುದನ್ನು ತಿಳಿಸಿಕೊಡುವ ಕೃತಿಯಿದು. ಇಲ್ಲಿರುವ ವಿವರಗಳನ್ನು ಕೇವಲ ಓದಿದರೆ ಸಾಲದು, ಪ್ರಯೋಗಿಸಿ ನೋಡಬೇಕು. ನೋಡಿ ಆನಂದಿಸಬೇಕು. ಕಲೆ, ವಿಜ್ಞಾನ, ತಂತ್ರಜ್ಞಾನಗಳು ಮೇಳೈಸಿ ರಚನೆಯಾಗಿರುವ ವಿಶಿಷ್ಟ ಕೃತಿ ಇದು. ಹಿರಿಯರನ್ನು ಸಹ ಬಾಲ್ಯಕ್ಕೆ ಕರೆದೊಯ್ಯುವ ಶಕ್ತಿ ಇದಕ್ಕಿದೆ.



**ಭೀಮಾಯಣ : ಅಸ್ಪೃಶ್ಯತೆಯ ಅನುಭವಗಳು (ಭೀಮರಾವ್ ರಾಮ್‌ಜೀ ಅಂಬೇಡ್ಕರ್ ಅವರ ಜೀವನದ ಘಟನೆಗಳು)**

ಶ್ರೀವಿದ್ಯಾ ನಟರಾಜನ್, ಎಸ್. ಆನಂದ್; ಅನು : ವಿ. ಎಸ್. ಎಸ್. ಶಾಸ್ತ್ರಿ

**ಪುಟ : ೧೦೮** **ಬೆಲೆ : ರೂ. ೨೨೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ಸಾಹಿತ್ಯ ಮತ್ತು ಚಿತ್ರಕಲೆಗಳ ಸಂಗಮದಿಂದ ಹುಟ್ಟಿರುವ ವಿಶಿಷ್ಟ ಕೃತಿಯಿದು. ಈ ಕೃತಿಯೊಳಗಿನ ಭಾಷೆ, ಲಿಪಿಗಳು, ಚಿತ್ರಗಳಷ್ಟೇ ಕಲಾತ್ಮಕತೆಯಿಂದ ಕೂಡಿವೆ. ಹೇಳಬೇಕಾದ ಸತ್ಯಗಳನ್ನು ಕಲಾತ್ಮಕವಾಗಿ ಕಣ್ಣಿಗೆ ಕಟ್ಟುವ ರೀತಿಯಲ್ಲಿ ಭಾವನೆಗಳಿಗೆ ಎಟುಕುವ ರೀತಿಯಲ್ಲಿ ಓದುಗರಿಗೆ ತಲುಪಿಸುವುದು ಹೇಗೆ ಎಂಬ ಪ್ರಶ್ನೆಗೆ ಉತ್ತರ ಇಲ್ಲಿದೆ. ಮೊದಲು ಇಂಗ್ಲಿಷಿನಲ್ಲಿ ರಚನೆಯಾಗಿ ಆನಂತರದಲ್ಲಿ ಕೊರಿಯನ್, ಫ್ರೆಂಚ್ ಭಾಷೆಗಳೂ ಸೇರಿದಂತೆ, ಭಾರತದ ಕೆಲವು ಪ್ರಮುಖ ಭಾಷೆಗಳಿಗೆ ಅನುವಾದಗೊಂಡಿರುವ ಈ 'ಭೀಮಾಯಣ'ವೆಂಬ ಕೃತಿ ಕನ್ನಡಕ್ಕೆ ಬಂದಿರುವುದು ಸ್ವಾಗತಾರ್ಹ. ಡಾ|| ಬಿ. ಆರ್. ಅಂಬೇಡ್ಕರ್ ಅವರ ಜೀವನದಲ್ಲಿ ಅವರನ್ನು ಕಾಡತೊಡಗಿದ ಅಸ್ಪೃಶ್ಯತೆಯ ಅನುಭವಗಳನ್ನು ಸಂಕ್ಷಿಪ್ತರೂಪದಲ್ಲಿದ್ದರೂ ಮನಸ್ಸಿಗೆ ತಟ್ಟುವಂತೆ ಚಿತ್ರಿಸಿರುವ ಕೃತಿಯಿದು. ಸಕೃತಿಯ ಮೊದಲ ಪುಟದಿಂದ ಹಿಡಿದು ಕೊನೆಯ ಪುಟದವರೆಗೂ ಚಿತ್ರ ನೋಡುತ್ತಿರುವಂತೆಯೂ ಕಾವ್ಯ ಓದುತ್ತಿರುವಂತೆಯೂ ಭಾಸವಾಗುತ್ತದೆ. ಈ ಕೃತಿಯ ವಿಶ್ಲೇಷಣೆಯಿರುವುದು ಕೇವಲ ಇತಿಹಾಸದ ವಿವರಗಳನ್ನಷ್ಟೇ ನೀಡದೆ ವರ್ತಮಾನದ ಸತ್ಯ ಸಂಗತಿಗಳನ್ನು ಸಹ ದಾಖಲಿಸಿರುವುದರಲ್ಲಿ. ಶತಶತಮಾನಗಳಿಂದಲೂ ಆಚರಿಸಿಕೊಂಡು ಬಂದ ಅಸ್ಪೃಶ್ಯತೆ ಆ ಕಾಲಕ್ಕೆ ಮಾತ್ರವೇ ಸೀಮಿತವಾಗದೆ, ವರ್ತಮಾನದಲ್ಲಿಯೂ ಜೀವಂತವಾಗಿರುವುದನ್ನು ಈ ಕೃತಿ ದಾಖಲಿಸುತ್ತದೆ. ಕಾಲ ಬದಲಾಗಿದ್ದರೂ ಸಮಾಜವು ಇನ್ನೂ ಅಮಾನವೀಯವಾಗಿಯೇ ಉಳಿದಿರುವುದರ ಬಗೆಗೆ ವಿಷಾದ ಮತ್ತು ಸಿಟ್ಟು ಇಲ್ಲಿದೆ.

**ಸುಧಾರಕರು**

ಅರವಿಂದ ಚೊಕ್ಕಾಡಿ

**ಪುಟ : viii + ೧೩೦** **ಬೆಲೆ : ರೂ. ೧೨೫**

**ಸಂಸ್ಕೃತಿ ಪ್ರಕಾಶನ, ಡಾ|| ಸುಭಾಷ್ ಭರಣಿ ಸಾಂಸ್ಕೃತಿಕ ವೇದಿಕೆ,** ಆದರ್ಶ ಕಾಲೋನಿ, ಕಂಟೋನ್ಮೆಂಟ್, ಬಳ್ಳಾರಿ - ೫೮೩ ೧೦೪




ಭಾರತೀಯ ಸಮಾಜವು ಶತ-ಶತಮಾನಗಳಿಂದಲೂ ಜಾತಿಪದ್ಧತಿ, ಸತಿಪದ್ಧತಿ, ಜೀತಪದ್ಧತಿ, ಬಾಲ್ಯವಿವಾಹ ಲಿಂಗತಾರತಮ್ಯ ಧರ್ಮಾಂಧತೆ ಮುಂತಾದ ಸಾಮಾಜಿಕ ಪಿಡುಗುಗಳಿಗೆ ಬಲಿಯಾಗುತ್ತಾ ನರಳುತ್ತಾ ಬಂದಿದೆ. ಕಾಲದಿಂದ ಕಾಲಕ್ಕೆ ಸುಧಾರಕರು ಜನಿಸಿ ಅಂದಿನಿಂದ ಪಿಡುಗುಗಳಿಂದ ಸಮಾಜವನ್ನು ಪಾರು ಮಾಡಲು ಶ್ರಮಿಸಿದ್ದಾರೆ. ಪರಂಪರೆಯ ಭಾರತವಲ್ಲದೇ ಆಧುನಿಕ ಭಾರತೀಯ ಸಮಾಜದಲ್ಲೂ ಸಹ ಪರಂಪರೆಯ ವ್ಯಾಧಿಗಳು ನವನಾಗರಿಕತೆಯ ರೂಪ ಪಡೆದು ಕಾಡುತ್ತಿವೆ. ಪೆರಿಯಾರ್, ನಾರಾಯಣಗುರು, ಗಾಂಧೀಜಿ, ಮಹಾತ್ಮ ಫುಲೆ, ಅಂಬೇಡ್ಕರ್ ಮುಂತಾದವರು ಈ ಪಿಡುಗುಗಳನ್ನು ನಿವಾರಿಸಲು ಇನ್ನಿಲ್ಲದ ಪ್ರಯತ್ನಗಳನ್ನು ನಡೆಸಿದ್ದಾರೆ. ಇಂತಹ ಸುಧಾರಕರ ವ್ಯಕ್ತಿಚಿತ್ರಣಗಳನ್ನು ಅರವಿಂದ ಚೊಕ್ಕಾಡಿಯವರು ಈ ಕೃತಿಯಲ್ಲಿ ತುಂಬ ವಿಭಿನ್ನವಾಗಿ ನಿರೂಪಿಸುತ್ತಾರೆ. ಇಲ್ಲಿಯತನಕ ಬಂದಿರುವ ವ್ಯಕ್ತಿಚಿತ್ರಣದ ಪುಸ್ತಕಗಳಿಗಿಂತ ಚೊಕ್ಕಾಡಿಯವರು ಸಂಗ್ರಹಿಸಿರುವ ಮಾಹಿತಿ ಹಾಗೂ ಅದನ್ನು ನಿರೂಪಿಸಿರುವ ಪರಿ ವಿಶಿಷ್ಟವಾಗಿದ್ದು ಗಮನ ಸೆಳೆಯುತ್ತದೆ. ಸಾಮಾಜಿಕವಾಗಿ ತುಂಬ ಕಾಳಜಿಯನ್ನು ವ್ಯಕ್ತಪಡಿಸುವ ಇಲ್ಲಿನ ಬರಹಗಳು ಯಾವುದೇ ಅತಿ-ಮಿತಿಗಳನ್ನು ಹೇರಿಕೊಳ್ಳದೆ ಯಾವುದೇ ಹಿತಾಸಕ್ತಿಗಳಿಗೆ ಬಲಿಯಾಗದೆ ಸಮಗ್ರ ಮಾಹಿತಿಯನ್ನು ಮುಕ್ತವಾಗಿ, ವಸ್ತುನಿಷ್ಠವಾಗಿ ಕಟ್ಟಿಕೊಡುತ್ತವೆ. ಸುಧಾರಕರ ಬದುಕು-ಬವಣೆ, ಕನಸು, ಆಶಯ ಹಾಗೂ ಸಾಧನೆಗಳನ್ನು ಪ್ರಕಾಶಕರೇ ಹೇಳುವಂತೆ ಶಿಕ್ಷಕ-ವಿದ್ಯಾರ್ಥಿಗಳನ್ನು ಕೇಂದ್ರವಾಗಿಟ್ಟುಕೊಂಡು ರೂಪಿಸಿದಂತಿದೆ. ವ್ಯಕ್ತಿಚಿತ್ರಣಗಳಲ್ಲಿ ಕುಟುಂಬದ ಮಾಹಿತಿಗಳು, ವ್ಯಕ್ತಿತ್ವದ ಚಿತ್ರಣಗಳಲ್ಲಿ ಸಾರ್ವಜನಿಕ ಮಾಹಿತಿಗಳು ಇಲ್ಲಿ ತುಂಬಿಕೊಂಡಿವೆ.

## ಮೊದಲಕಲ್ಲು ...!

*ಉದಯಕುಮಾರ್ ಹಬ್ಬು*

**ಪುಟ : ೩೯೮ + iv** **ಬೆಲೆ : ರೂ. ೨೦೦**

**ರಜತ ಸಾಹಿತ್ಯ**, ನಂ. ೧೪, ಸೀತಮ್ಮ ಅನಂತಯ್ಯ ಕಲ್ಯಾಣ ಮಂದಿರದ ಹತ್ತಿರ, ೪ನೇ ಅಡ್ಡರಸ್ತೆ, ಓ.ಟಿ. ರಸ್ತೆ, ಶಿವಮೊಗ್ಗ - ೫೭೭ ೨೦೨

ಇದು ವಿವಿಧ ಕೃತಿಗಳನ್ನು ಮತ್ತು ವ್ಯಕ್ತಿ-ವಿಚಾರಗಳನ್ನು ಪರಿಚಯಿಸುವ ಲೇಖನಗಳ ಸಂಗ್ರಹ. ಶೀರ್ಷಿಕೆಯೇ ಸೂಚಿಸುವಂತೆ ಇದು ಈ ಕ್ಷೇತ್ರದಲ್ಲಿ ಉದಯಕುಮಾರ್ ಹಬ್ಬು ಅವರ ಮೊದಲ ಪ್ರಯತ್ನ. ಹಾಗಾಗಿಯೇ ಇದಕ್ಕೆ ಶೀರ್ಷಿಕೆ 'ಮೊದಲ ಕಲ್ಲು'. ಈ ಲೇಖಕನ ಆಲೋಚನಾ ಕ್ರಮ, ದೃಷ್ಟಿಕೋನ, ಬರವಣಿಗೆಯ ಶೈಲಿ ಎಂಥದ್ದು ಎಂಬುದು ಕೃತಿಯೊಳಗಿನ ಮೊದಲ ಲೇಖನದಲ್ಲಿಯೇ ನಮಗೆ ತಿಳಿದುಬಿಡುತ್ತದೆ. ಯಾವ ಸಿದ್ಧಾಂತಗಳಿಗೂ ಕಟ್ಟುಬೀಳದ, ಅನಿಸಿದ್ದನ್ನು, ಭಾವಿಸಿದ್ದನ್ನು ಬರಹ ರೂಪಕ್ಕೆ ತರುವ ಪ್ರಯತ್ನವನ್ನು ಇಲ್ಲಿನ ಎಲ್ಲ ಲೇಖನಗಳಲ್ಲಿಯೂ ನಾವು ಕಾಣಬಹುದು. ಇದು ಈ ಲೇಖಕನ ವಿಶಿಷ್ಟತೆಯೂ ಹೌದು, ಮಿತಿಯೂ ಹೌದು. ರೂಪನಿಷ್ಠ ಅಧ್ಯಯನವು ಕೃತಿಯ ಕಲಾತ್ಮಕತೆಗೆ, ಕೃತಿಯ ಒಳಗಿನ ವಿವರಣೆಗಳಿಗೆ ಪ್ರಾಮುಖ್ಯತೆಯನ್ನು ನೀಡಿದರೆ; ಸಂಸ್ಕೃತಿನಿಷ್ಠ ಅಧ್ಯಯನವು ಸಮತೋಲನವನ್ನು ಕಾಯ್ದುಕೊಳ್ಳಬೇಕಾಗುತ್ತದೆ. ಸಾಹಿತ್ಯೋತ್ಪತ್ತಿಯನ್ನು 'ಸಾಂಸ್ಕೃತಿಕ ಪಠ್ಯ'ವೆಂದು ನೋಡುತ್ತದೆ. ಇವೆರಡು ವಿಮರ್ಶಾ ಮಾರ್ಗಗಳಲ್ಲಿ ಉದಯಕುಮಾರ್ ಹಬ್ಬು ಅವರು ಆಯ್ದುಕೊಳ್ಳುವುದು ರೂಪನಿಷ್ಠ ವಿವರಣೆಯನ್ನು. ಈ ಕೃತಿಯೊಳಗಿನ ಬಹುಪಾಲು ಲೇಖನಗಳು 'ಕೃತಿ ಪರಿಚಯ'ಗಳಂತೆ ಕಂಡರೂ, ಅವುಗಳ ಆಳ-ಅಗಲಗಳು ಆ ಮಿತಿಯನ್ನು ಮೀರುವಂತೆ ಮಾಡಿವೆ. ಪ್ರಾಚೀನ ಸಾಹಿತ್ಯ, ಜನಪದ ಸಾಹಿತ್ಯ, ಆಧುನಿಕ ಸಾಹಿತ್ಯ ಕೃತಿಗಳ ಪರಿಚಯ ವಿಶ್ಲೇಷಣೆ, ವಿಮರ್ಶೆ ಇಲ್ಲಿದೆ. ಈ ಕೃತಿಯ ಹೆಚ್ಚುಗಾರಿಕೆಯಿರುವುದು ನಮ್ಮ ಕನ್ನಡ ಸಾಹಿತ್ಯ ಚರಿತ್ರೆ ಗುರುತಿಸದ ಎಷ್ಟೋ ಅಪರೂಪದ ಕೃತಿಗಳನ್ನು, ಲೇಖಕರನ್ನು ಪರಿಚಯಿಸಿರುವುದರಲ್ಲಿ.




## ವಾಸ್ತು ಎಂಬ ವ್ಯಾಧಿ

*ಎನ್. ಶಂಕರಪ್ಪ ತೋರಣಗಲ್ಲು*

**ಪುಟ : ೧೮೨** **ಬೆಲೆ : ರೂ. ೧೦೦**

**ಕಾವ್ಯಕಲಾ ಪ್ರಕಾಶನ**, ನಂ. ೧೨೭೩, ೭ನೇ ಅಡ್ಡರಸ್ತೆ, ಚಂದ್ರಾಲೇಔಟ್, ವಿಜಯನಗರ, ಬೆಂಗಳೂರು - ೪೦

ಸಮಾಜವನ್ನು ಸುಲಭವಾಗಿ ನಿಯಂತ್ರಿಸಬಹುದು, ಎಲ್ಲಾ ವೈಜ್ಞಾನಿಕ ವಿಚಾರಧಾರೆಗಳನ್ನು ಹಾಳುಗೆಡಹಬಹುದು, ಸಮಾಜದಲ್ಲಿ ಭಯೋತ್ಪಾದನೆಯನ್ನುಂಟು ಮಾಡಿ ಹಣ-ಅಧಿಕಾರಗಳನ್ನೂ ಸಹ ಗಳಿಸಬಹುದು ಎಂಬುದಾದರೆ, ಅದು ಸಾಧ್ಯವಾಗುವುದು 'ವಾಸ್ತು ಎಂಬ ವ್ಯಾಧಿ'ಯಿಂದ ಎಂಬ ತಿಳುವಳಿಕೆಯನ್ನು ನೀಡುವ ಮಹತ್ವದ ವೈಚಾರಿಕ ಕೃತಿಯಿದು. ಕಾಲದಿಂದ- ಕಾಲಕ್ಕೆ ಅನೇಕ ತತ್ವಜ್ಞಾನಿಗಳು, ಸಂತರು, ಶರಣರು, ಸಿದ್ಧಪುರುಷರು, ಚಿಂತಕರು ವಾಸ್ತು ಎಂಬ ವ್ಯಾಧಿಗೆ ಎಷ್ಟೇ ಚಿಕಿತ್ಸೆ ಕೊಟ್ಟರೂ ಅದು ಹೇಗೆ ಕ್ಯಾನ್ಸರ್‌ನಂತೆ ನಮ್ಮನ್ನು ಆವರಿಸಿ ನುಂಗುತ್ತಿದೆ, ಸಮಾಜದ ವೈಜ್ಞಾನಿಕ ಸ್ವಾಸ್ಥ್ಯವನ್ನು ನಾಶ ಮಾಡುತ್ತಿದೆ ಎಂಬ ಅರಿವನ್ನು ನೀಡುವ ಮೂಲಕ ಈ ವ್ಯಾಧಿಯ ಹುನ್ನಾರಗಳು ಹಾಗೂ ಅಪಾಯಗಳನ್ನು ಪ್ರಸ್ತುತ ಕೃತಿ ಬಯಲಿಗೆಳೆಯುತ್ತದೆ. ವಾಸ್ತು-ಜ್ಯೋತಿಶ್ಯಾಸ್ತ್ರವನ್ನು ವಿಜ್ಞಾನವೆಂದು ನಂಬಿಸುತ್ತಿರುವ ಕೆಟ್ಟಕಾಲದಲ್ಲಿ ನಾವಿದ್ದೇವೆ. ಇಂತಹ ಸಂದರ್ಭದಲ್ಲಿ ವಾಸ್ತು-ಜ್ಯೋತಿಷ್ಯಗಳು ಅವಾಸ್ತವ ಕಲ್ಪನೆಗಳ ಮೂಲಕ ಮನುಷ್ಯನಿಗೆ ಸಂಬಂಧಿಸಿದ ಎಲ್ಲಾ ವಲಯಗಳನ್ನು ಹೇಗೆಲ್ಲಾ ನಿಯಂತ್ರಿಸುತ್ತಿವೆ ಎಂಬುದನ್ನು ಇಲ್ಲಿನ ಬರಹಗಳು ವಿವರಿಸುತ್ತವೆ. ಎಲ್ಲರೂ ಎಲ್ಲ ಸಂದರ್ಭಗಳಲ್ಲಿಯೂ ಯಾವುದಕ್ಕಾಗಿ ಪರಿತಪಿಸುತ್ತಾರೆಯೋ ಅದನ್ನು ಲೇಖಕರು ಒಂದು 'ವ್ಯಾಧಿ' (ಕಾಯಿಲೆ) ಎಂದೇ ಕರೆಯುತ್ತಾರೆ. ವಾಸ್ತು ಎಂಬ ಪರಿಕಲ್ಪನೆ ಬೇರೆ ಬೇರೆ ಹಂತಗಳಲ್ಲಿ ಐತಿಹಾಸಿಕವಾಗಿ ಬೆಳೆದುಬಂದ ಬಗೆಯನ್ನು ಈ ಕೃತಿಯಲ್ಲಿ ನಿರೂಪಿಸಿರುವ ಲೇಖಕರು 'ವಾಸ್ತು'ವನ್ನು ಮನುಷ್ಯಕಲ್ಪಿತ ಭ್ರಾಂತಿ ಎಂದೇ ದೂರುತ್ತಾರೆ. 'ವಾಸ್ತು'ವನ್ನು ಕಟುವಿಮರ್ಶೆಗೆ ಒಳಪಡಿಸಿರುವ ಉತ್ತಮ ವೈಚಾರಿಕ ಕೃತಿಯಿದು.

**– ರಮೇಶ ಕೋಲಾರ**

*ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಲೋಕಾಯುಕ್ತ, ಕೋಲಾರ - ೫೬೩ ೧೦೧*

---

## ಸಾದರ ಸ್ವೀಕಾರ

**ಅಂತರ** (ನಾಟಕ) *ಮರಾಠಿ ಮೂಲ : ಅಶೋಕ್ ಪಾಟೋಳೆ; ಕನ್ನಡಕ್ಕೆ : ಕಾತ್ಯಾಯಿನಿ ಕುಂಜಿಬೆಟ್ಟು*
**ಪುಟ : ೮೮ + iv** **ಬೆಲೆ : ರೂ. ೫೦**

**ಮೊದಲ ಕಲ್ಲು... !** *ಉದಯಕುಮಾರ್ ಹಬ್ಬು*
**ಪುಟ : ೩೯೮ + iv** **ಬೆಲೆ : ರೂ. ೨೦೦**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ರಜತ ಸಾಹಿತ್ಯ**, ನಂ. ೧೪, ಸೀತಮ್ಮ ಅನಂತಯ್ಯ ಕಲ್ಯಾಣಮಂದಿರದ ಹತ್ತಿರ, ೪ನೇ ಅಡ್ಡರಸ್ತೆ, ಓ.ಟಿ. ರಸ್ತೆ, ಶಿವಮೊಗ್ಗ - ೫೭೭ ೨೦೨

**ಜಿನದತ್ತರ ಆಯ್ದ ಕವಿತೆಗಳು**
*ಸಂ. : ಡಾ|| ಎಂ. ಜಿ. ಆರ್. ಅರಸ್*
**ಪುಟ : ೧೧೨** **ಬೆಲೆ : ರೂ. ೬೦**

**ಗುಬ್ಬಿಯ ಕಲರವ** (ಚುಟುಕು ಸಂಕಲನ)
*ಎ. ಎನ್. ರಮೇಶ್, ಗುಬ್ಬಿ*
**ಪುಟ : ೬೦** **ಬೆಲೆ : ರೂ. ೪೦**

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ವೈದ್ಯ ವಾರ್ತಾ ಪ್ರಕಾಶನ**, ವಿದ್ಯಾರಣ್ಯಪುರಂ, ಮೈಸೂರು - ೫೭೦ ೦೦೮

**ತಟ್ಟದ ಕದ ತೆರೆಯಿತು** *ಕೆ. ವಿ. ಉಭಯಭಾರತಿ*
**ಪುಟ : ೧೧೮ + iv** **ಬೆಲೆ : ರೂ. ೬೫**
**ಶ್ರೀನಿವಾಸ ಪುಸ್ತಕ ಪ್ರಕಾಶನ**, ನಂ. ೧೬೪/ಎ, ಮೊದಲನೇ ಮಹಡಿ, ಎ.ಆರ್.ಎನ್. ಬಿಲ್ಡಿಂಗ್, ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ಅಂಬೇಡ್ಕರ್ ಮತ್ತು ಕಾರ್ಟೂನ್ ವಿವಾದ** (ಲೇಖನಗಳು)
*ಸಂ. : ಡಾ|| ಎಚ್. ಎಸ್. ಅನುಪಮಾ, ಬಸೂ*
**ಪುಟ : ೧೨೬** **ಬೆಲೆ : ರೂ. ೧೦೦**
**ಲಡಾಯಿ ಪ್ರಕಾಶನ**, ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ - ೫೮೨ ೧೦೧

**ಕದಳಿ** (ನಾಟಕ) *ಬಿ. ಎಸ್. ದುಂಡರಡ್ಡಿ*
**ಪುಟ : xxii + ೫೦ = ೭೨** **ಬೆಲೆ : ರೂ. ೬೦**
**ಹೊಂಗಿರಣ ಪ್ರಕಾಶನ**, ಆಯುರ್ವೇದ ಆಸ್ಪತ್ರೆಯ ಹತ್ತಿರ, ಇಲಕಲ್ಲ - ೫೮೭ ೧೨೫

**ವಿಸ್ಮಯಗಳ ನಾಡಿನಲ್ಲೊಂದು ಸುತ್ತು** (ಅಮೆರಿಕಾ ಪ್ರವಾಸ ಕಥನ)
*ಡಾ|| ಎಸ್. ವಿದ್ಯಾಶಂಕರ*
**ಪುಟ : v + ೧೬ + ೧೦೩ = ೧೨೪** **ಬೆಲೆ : ರೂ. ೧೦೦**
**ಪ್ರಿಯದರ್ಶಿನಿ ಪ್ರಕಾಶನ**, ನಂ, ೧೩೮, ೭ನೇ 'ಸಿ' ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು - ೫೬೦ ೧೦೪

**ಕೆಳಗಲಮನಿ ಮಾಬವ್ವ ಮತ್ತು ಇತರೆ ಕವಿತೆಗಳು** (ಕವನ ಸಂಕಲನ)
*ಎ.ಎಸ್. ಮಕಾನದಾರ*
**ಪುಟ : xxii + ೯೦ = ೧೧೨** **ಬೆಲೆ : ರೂ. ೭೫**
**ನಿರಂತರ ಪ್ರಕಾಶನ**, ಮಾಸೂಮ್ ಮಂಜಿಲ್, ಟಕ್ಕೇದ ಓಣಿ, ಗಜೇಂದ್ರಗಡ - ೫೮೨ ೧೧೪, ಗದಗ ಜಿಲ್ಲೆ

**ಅಳಿದ ಮೇಲೆ...** (ದಿ| ಸಗುಣ ಶಂಕರ ಹಬ್ಬುರವರ 'ಅನಾಮಿಕನ ಉಲುಹು' ಇದರ ಪರಾಮರ್ಶೆ) *ಉದಯಕುಮಾರ್ ಹಬ್ಬು*
**ಪುಟ : ೧೦೨ + iv** **ಬೆಲೆ : ರೂ. ೫೫**
**ಕೌಸ್ತುಭ ಪ್ರಕಾಶನ**, ನಂ, ೧೮೯, ೩ನೇ ಮಹಡಿ, ಈ.ಎ.ಟಿ. ಸ್ಟ್ರೀಟ್, ಬಸವನಗುಡಿ, ಬೆಂಗಳೂರು - ೫೬೦ ೦೦೪

**ದೃಷ್ಟಿಕೋನ** (ಕಥಾ ಸಂಕಲನ) *ರವಿಶಂಕರ ಪಾಟೀಲ*
**ಪುಟ : ೧೦೮** **ಬೆಲೆ : ರೂ. ೮೫**
**ಕಥಾ ಪುಸ್ತಕ**, ಅಥಣಿ (ಪೋಸ್ಟ್- ತಾಲೂಕು), ಬೆಳಗಾವಿ ಜಿಲ್ಲೆ - ೫೯೧ ೩೦೪

**ಮೌನ ಚರಿತೆ** (ಕವನಗಳು) *ಶೋಭಾ ನಾಯಕ*
**ಪುಟ : iv + ೧೦೪ = ೧೦೮** **ಬೆಲೆ : ರೂ. ೬೦**
**ಸಿ. ವಿ. ಜಿ. ಇಂಡಿಯಾ**, ಕಸ್ತೂರ್‌ಬಾ ಭವನ, ಗಾಂಧಿಭವನ ಆವರಣ, ಕುಮಾರಪಾರ್ಕ್ ಪೂರ್ವ, ಬೆಂಗಳೂರು – ೧

**ಕವಿಶೈಲದ ಕವಿತೆಗಳು** *ಬೇಲೂರು ರಘುನಂದನ್*
**ಪುಟ : ೧೨೦** **ಬೆಲೆ : ರೂ. ೮೦**
**ಶ್ವೇತಪ್ರಿಯ ಪ್ರಕಾಶನ**, ನಂ. ೨೧೬, ೫ನೇ ಮುಖ್ಯರಸ್ತೆ, ಕೆನರಾಬ್ಯಾಂಕ್ ಬಡಾವಣೆ, ಕೊಡಿಗೇಹಳ್ಳಿ, ವಿದ್ಯಾರಣ್ಯಪುರ ಅಂಚೆ, ಬೆಂಗಳೂರು - ೫೬೦ ೦೯೭

**ಆಸರೆಮನೆ** *ಸುಮಿತ್ರಾ ರಾಮಣ್ಣ*
**ಪುಟ : ೧೦೮** **ಬೆಲೆ : ರೂ. ೫೦**
**ಆಶಾ ಪ್ರಕಾಶನ**, ಆಶಾಂಜಲಿ, ನಂ. ೭೯, ೪ನೇ ಮುಖ್ಯರಸ್ತೆ, ಜಯನಗರ, ಮೈಸೂರು - ೫೭೦ ೦೧೪

**ಮಲ್ಲಿಗೆ ಮನಸ್ಸು** (ಪ್ರೌಢಶಾಲಾ ಮಕ್ಕಳಿಗಾಗಿ ೨೧ ನೀತಿ ಕಥಾ ಸಂಕಲನ) *ಚಂದ್ರಶೇಖರ ಬಿ. ತೋಟದ*
**ಪುಟ : ೧೬ + ೧೨೫ = ೧೪೧** **ಬೆಲೆ : ರೂ. ೮೦**
**ರೂಪಾ ಪ್ರಕಾಶನ**, ಕೆಂಚಾಘಟ್ಟಾ ಹೊಸ ಬಡಾವಣೆ, ೭ನೇ ಕ್ರಾಸ್, ತಿಪಟೂರು - ೫೭೨ ೨೦೨, ತುಮಕೂರು ಜಿಲ್ಲೆ

**ಸಾಮಾಜಿಕ ಬದಲಾವಣೆ** *ಡಾ|| ವಿ. ಮುನಿವೆಂಕಟಪ್ಪ*
**ಪುಟ : xii + ೨೬೮ = ೨೮೦** **ಬೆಲೆ : ರೂ. ೩೦೦**
**ಭೀಮ ಪ್ರಕಾಶನ**, ನಂ. ೧೨೪೦, ೩ನೇ ಅಡ್ಡರಸ್ತೆ, ಗಂಗೆ ರಸ್ತೆ, ಕುವೆಂಪುನಗರ, ಮೈಸೂರು - ೫೭೦ ೦೨೩

ವೀರ - ಮಾಸ್ತಿ ಸ್ಮಾರಕ, ವೀರಾಪುರ
ಕಾಲ ಕ್ರಿ.ಶ. ಸುಮಾರು ೧೫ನೆಯ ಶತಮಾನ

# ವೀರಾಪುರದ ಪ್ರಾಚೀನ ವೀರ-ಮಾಸ್ತಿ ಸ್ಮಾರಕಗಳು

ವೀರಾಪುರವು ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕಿನ ಒಂದು ಗ್ರಾಮ. ಇದು ಬೆಂಗಳೂರು ರಸ್ತೆಯಲ್ಲಿದೆ. ಇಲ್ಲಿ ರಸ್ತೆ ಬದಿಯ ಹುಣಸೆ ತೋಪಿನಲ್ಲಿರುವ ಮೂರು ಪುಟ್ಟ ಕಲ್ಲುಗುಡಿಗಳಲ್ಲಿ ನಾಲ್ಕು ಪ್ರಾಚೀನ ಸ್ಮಾರಕಗಳು ಬೆಳಕಿಗೆ ಬಂದಿವೆ. ಅವುಗಳಲ್ಲಿ ಎರಡು ವೀರಗಲ್ಲು ಸ್ಮಾರಕಗಳು. ಮತ್ತೆರಡು ವೀರಮಾಸ್ತಿ ಸ್ಮಾರಕಗಳು.

ನೆಲದಲ್ಲಿ ಅರ್ಧದಷ್ಟು ಮುಚ್ಚಿಹೋಗಿರುವ ವೀರಗಲ್ಲು ಸರ್ಪವೊಂದರ ಜೊತೆ ಮಹಿಳೆಯೊಬ್ಬಳು ಸೆಣಸಾಡಿ ಮಡಿದ ಸ್ಮಾರಕವಾಗಿದೆ. ಗ್ರಾನೈಟ್ ಕಲ್ಲಿನ ಶಿಲ್ಪದಲ್ಲಿ ಮಡಿದಿರುವ ಮಹಿಳೆಯು ತನ್ನ ಬಲಗೈನ ಅಂಗೈನಲ್ಲಿ ಸರ್ಪವನ್ನು ಹಿಡಿದಿದ್ದಾಳೆ. ಸರ್ಪವು ತನ್ನ ಹೆಡೆಯನ್ನು ಅರಳಿಸಿದೆ. ಸುಂದರವಾದ ಮುಖಲಕ್ಷಣದ ಮಹಿಳೆಯು ಹಿರಿದಾದ ತುರುಬನ್ನು ಹೊಂದಿದ್ದಾಳೆ. ಈಕೆ ಸರ್ಪವನ್ನು ಕೈಯಲ್ಲಿ ಹಿಡಿಯುವ ಮೂಲಕ ರಕ್ಷಿಸಿಕೊಳ್ಳಲು ಸೆಣಸಿದಂತೆ ಕಾಣುತ್ತದೆ. ಇಲ್ಲಿ ಈಕೆ ಧೈರ್ಯ ಮತ್ತು ಸಾಹಸಗಳನ್ನು ಪ್ರದರ್ಶಿಸಿದ್ದಾಳೆ. ಆದರೆ ರಕ್ಷಿಸಿಕೊಳ್ಳಲು ವಿಫಲಳಾಗಿ ಸಾವನ್ನು ಕಂಡಿದ್ದಾಳೆ. ಈಕೆಯ ಕಿವಿ ಮತ್ತು ಕೊರಳಿನಲ್ಲಿ ಆಭರಣಗಳಿವೆ. ಕರ್ನಾಟಕದ ವೀರಗಲ್ಲುಗಳು ಮತ್ತು ಶಾಸನಗಳಲ್ಲಿ ಹಾವು ಕಚ್ಚಿ ಮಡಿದ ಪುರುಷರ ಚಿತ್ರಣ ಮತ್ತು ವಿವರಗಳು ಈವರೆಗೆ ವಿಪುಲವಾಗಿ ದೊರೆತಿವೆ. ಆದರೆ ಮಹಿಳೆಯೊಬ್ಬಳು ಸೆಣಸಿದ ಸರ್ಪ ಸ್ಮಾರಕ ಇದೇ ಪ್ರಥಮವಾಗಿದೆ. ಕ್ರಿ.ಶ. ಸುಮಾರು ೧೩ನೇ ಶತಮಾನಕ್ಕೆ ಈ ವೀರಸ್ಮಾರಕವು ಸೇರಿದ್ದಾಗಿದ್ದು ವೀರಗಲ್ಲುಗಳ ಪ್ರಕಾರಕ್ಕೆ ಹೊಸ ಸೇರ್ಪಡೆಯಾಗಿದೆ.

ಇಲ್ಲಿರುವ ಮೊದಲನೆಯ ಕಲ್ಲುಗುಡಿಯಲ್ಲಿನ ವೀರಗಲ್ಲೊಂದು ನೆಲದಲ್ಲಿ ಹುದುಗಿ ಹೋಗಿದ್ದು, ಅದು ಅತಿ ದಪ್ಪನೆಯ ಗ್ರಾನೈಟ್ ಕಲ್ಲಿನದು. ಇದರಲ್ಲಿ ವೀರನೊಬ್ಬನು ಬಲದ ಕೈಯಲ್ಲಿ ಎತ್ತಿದ ಖಡ್ಗ ಹಿಡಿದು, ಇಳಿಬಿಟ್ಟ ಎಡಗೈಯಲ್ಲಿ ಮತ್ತೊಂದು ಖಡ್ಗ ಹಿಡಿದಿದ್ದಾನೆ. ಶಿರದಲ್ಲಿ ಎತ್ತಿ ಕಟ್ಟಿದ ಮುಡಿ ಇದ್ದು ವಸ್ತ್ರಾಲಂಕಾರವಿದೆ. ಈ ವೀರನು ತನ್ನ ಮೇಲೆ ಆಕ್ರಮಣ ಮಾಡಲು ಬಂದ ಶತ್ರುಗಳ ಮೇಲೆ ಖಡ್ಗದಿಂದ ಹೋರಾಡಿ ಮಡಿದಿದ್ದಾನೆ. ಅದಕ್ಕಾಗಿ ಈ ಸ್ಮಾರಕ ನಿರ್ಮಾಣವಾಗಿದೆ. ಈ ಸ್ಮಾರಕದ ಕಾಲಮಾನ ಕ್ರಿ.ಶ. ಸುಮಾರು ೧೪ನೇ ಶತಮಾನ.

ಬಳಿಯ ಕಲ್ಲುಗುಡಿಯೊಳಗಿನ ಸುಂದರ ವೀರಮಾಸ್ತಿ ಸ್ಮಾರಕವು ಅತ್ಯಂತ ಕಲಾತ್ಮಕವಾಗಿದ್ದು, ಇದೂ ಸಹ ನೆಲದಲ್ಲಿ ಹುದುಗಿಹೋಗಿದೆ. ಗ್ರಾನೈಟ್ ಕಲ್ಲಿನ ಈ ಸ್ಮಾರಕದಲ್ಲಿ ತನ್ನೆರಡೂ ಕೈಗಳನ್ನು ಮೇಲೆತ್ತಿ ನಿಂಬೆಹಣ್ಣು ಮತ್ತು ಕನ್ನಡಿ ಹಿಡಿದಿರುವ ಸತಿಯ ಚಿತ್ರಣವಿದೆ. ಶಿರದಲ್ಲಿ ಹಿರಿದಾದ ತುರುಬು ಇದ್ದು, ಅಲಂಕಾರಿಕ ಮುಖಲಕ್ಷಣ ಈಕೆಗಿದೆ. ವಸ್ತ್ರದ ಉಡುಗೆ ನೆರಿಗೆಗಳಿಂದ ಕೂಡಿ ಆಕರ್ಷಕವಾಗಿದೆ. ಬಳಿಯಲ್ಲಿರುವ ಈಕೆಯ ಪತಿ ತನ್ನ ಬಲಗೈನಲ್ಲಿ ಖಡ್ಗವನ್ನು ಮೇಲೆ ಎತ್ತಿ ಹಿಡಿದಿದ್ದು ಎಡದ ಕೈಯಲ್ಲಿ ಬಿಲ್ಲುಬಾಣಗಳನ್ನು ಹಿಡಿದಿದ್ದಾನೆ. ಈತನಿಗೂ ಉತ್ತಮ ವಸ್ತ್ರ ಮತ್ತು ಆಭರಣಗಳ ಅಲಂಕಾರವಿದ್ದು ಶಿರದಲ್ಲಿ ಮುಡಿ ಇದೆ. ಈತ ಓರ್ವ ಪ್ರಮುಖ ನಾಯಕನಾಗಿದ್ದು, ತನ್ನ ಶತ್ರುಗಳ ಜೊತೆ ಯಾವುದೋ ಕಾರಣಕ್ಕಾಗಿ ಹೋರಾಡಿ ಮಡಿದಿದ್ದಾನೆ. ಈ ಸಲುವಾಗಿ ಅಂದಿನ ಪದ್ಧತಿಯಂತೆ ಈತನ ಮಡದಿ ಚಿತೆ ಏರಿ ಸಹಗಮನ ಮಾಡಿದ್ದಾಳೆ. ಕ್ರಿ.ಶ. ಸುಮಾರು ೧೬ನೆಯ ಶತಮಾನಕ್ಕೆ ಈ ಸ್ಮಾರಕ ಸೇರುತ್ತದೆ.

ಈ ಸ್ಮಾರಕದ ಬಳಿಯೇ ಇರುವ ಮತ್ತೊಂದು ಕಲ್ಲುಗುಡಿಯೊಳಗೆ ನಿಲ್ಲಿಸಿರುವ ಅಗಲವಾದ ಕಲ್ಲುಚಪ್ಪಡಿಯ ಮೇಲೆ ಕೆತ್ತಿರುವ ಸ್ಮಾರಕವೂ ಸಹ ವೀರಮಾಸ್ತಿ ಸ್ಮಾರಕವಾಗಿದ್ದು, ಇಲ್ಲಿ ಒಬ್ಬ ವೀರನ ಇಬ್ಬರು ಸತಿಯರು ಸಹಗಮನ ಮಾಡಿದ್ದಾರೆ. ವೀರನ


ಸರ್ಪದೊಡನೆ ಸೆಣಸಿದ ವೀರಮಹಿಳೆ ಸ್ಮಾರಕ, ವೀರಾಪುರ
ಕಾಲ ಕ್ರಿ.ಶ. ಸುಮಾರು ೧೩ನೆಯ ಶತಮಾನ

ಎರಡೂ ಕಡೆಗಳಲ್ಲೂ ಸತಿಯರು ನಿಂತಿದ್ದು, ಅವರು ತಮ್ಮ ಮಡಿಸಿದ ಬಲದ ಕೈಗಳಿಂದ ನಿಂಬೆ ಹಣ್ಣುಗಳನ್ನು ಹಿಡಿದುಕೊಂಡಿದ್ದಾರೆ. ಎಡದ ಕೈಗಳನ್ನು ಇಳಿಬಿಟ್ಟಿದ್ದಾರೆ. ಶಿರದಲ್ಲಿ ತುರುಬುಗಳಿದ್ದು ವಸ್ತ್ರ ಮತ್ತು ಆಭರಣಗಳ ಅಲಂಕಾರಗಳು ಈ ಸತಿಯರಿಗೆ ಇವೆ. ಮಧ್ಯದಲ್ಲಿರುವ ವೀರನು ಗಡ್ಡಧಾರಿಯಾಗಿದ್ದು ಶಿರದ ಮೇಲೆ ರುಮಾಲನ್ನು ಧರಿಸಿದ್ದಾನೆ. ವೀರಾವೇಶದಿಂದ ಈತ ಬಲದಕೈಯಿಂದ ಖಡ್ಗವನ್ನು ಎತ್ತಿಹಿಡಿದಿದ್ದಾನೆ. ಎಡದ ಕೈಯಲ್ಲಿ ಗುರಾಣಿ ಇದೆ. ಇವನಿಗೂ ಸುಂದರವಾದ ಅಲಂಕಾರಿಕವಾದ ವಸ್ತ್ರ ಮತ್ತು ಆಭರಣಗಳು ಇರುವುದನ್ನು ಗಮನಿಸಿದರೆ ಈತನೂ ಓರ್ವ ಪ್ರಮುಖ ನಾಯಕನೇ ಆಗಿದ್ದುದು ಸ್ಪಷ್ಟವಾಗುತ್ತದೆ. ರಾಜಕೀಯ ಕಾರಣವೊಂದರಲ್ಲಿ ಈ ವೀರ ತನ್ನ ಶತ್ರುಗಳ ಜೊತೆ ಹೋರಾಡಿ ಮಡಿಯಲಾಗಿ ಈತನ ಸತಿಯರಿಬ್ಬರು ಅಂದಿನ ಪದ್ಧತಿಯಂತೆ ಚಿತೆ ಏರಿ ಸಹಗಮನ ಪದ್ಧತಿ ಅನುಸರಿಸಿದ್ದಾರೆ. ಕ್ರಿ.ಶ. ಸುಮಾರು ೧೫ನೆಯ ಶತಮಾನಕ್ಕೆ ಈ ಸ್ಮಾರಕವು ಸೇರುತ್ತದೆ.

ವೀರ ಮತ್ತು ತ್ಯಾಗದ ಸ್ಥಳವಾದ ಈ ಗ್ರಾಮದ ಬಳಿ ಕಳೆದ ಶತಮಾನದಲ್ಲಿಯೂ ಸಹ ಹುಲಿಯೊಂದರಿಂದ ಹತನಾದ ವ್ಯಕ್ತಿಯೊಬ್ಬನ ಸ್ಮಾರಕವೂ ಸಹ ಇದೆ. ಕ್ರಿ.ಶ. ಸುಮಾರು ೧೩ನೆಯ ಶತಮಾನದಿಂದ ಇಂದಿನವರೆಗೂ ವೀರ ಮತ್ತು ತ್ಯಾಗದಿಂದ ಕೂಡಿದ ಸಾಂಸ್ಕೃತಿಕತೆ ಈ ಗ್ರಾಮದಲ್ಲಿದ್ದು ಕರ್ನಾಟಕದ ಇತಿಹಾಸದ ಮೇಲೆ ಹೊಸ ಬೆಳಕನ್ನು ಚೆಲ್ಲಿದೆ.

ವೀರ - ಮಾಸ್ತಿ ಸ್ಮಾರಕ, ವೀರಾಪುರ
ಕಾಲ ಕ್ರಿ.ಶ. ಸುಮಾರು ೧೬ನೆಯ ಶತಮಾನ

ಚಿತ್ರ ಲೇಖನ : **ಡಾ|| ಮುತ್ತುರಾಜು**
ಟಿ.ಜಿ.ಟಿ. ಕನ್ನಡ ಜವಾಹರ ನವೋದಯ ವಿದ್ಯಾಲಯ, ಕಾನ್ಹಿವಾಡ
ಸಿಯೋನಿ ಜಿಲ್ಲೆ, ಮಧ್ಯಪ್ರದೇಶ - ೪೮೦ ೯೯೦

# ನೆಲೆ ಕಳೆದುಕೊಳ್ಳುತ್ತಿರುವ ನೆಲಸಂಸ್ಕೃತಿ

ಡಾ|| ಶಿರಗಾನಹಳ್ಳಿ ಶಾಂತನಾಯ್ಕ



ಮನುಷ್ಯನ ಅಸ್ತಿತ್ವವೇ ನೆಲ. ನೆಲ ನಂಬಿದವರ ಸ್ಥಿತಿ ಇವತ್ತು ಆಕ್ಸಿಜನ್ ಹಾಕಿರುವ ರೋಗಿಯಂತಾಗಿದೆ. ಭಾರತದ ಆರ್ಥಿಕದ ಬೆನ್ನೆಲುಬಾಗಿರುವ ಕೃಷಿ ಈಗ ಬರಿ ಕೃಸಿಯಾಗಿದೆ. ಮಳೆಯನ್ನ ನಂಬಿರುವ ರೈತ ಮುಗಿಲನ್ನ ನೋಡುತ್ತಾನೆ. ಸರ್ಕಾರದ ಮುಲಾಜಿಗಾಗಿ ಕಾಯುತ್ತಾನೆ, ವಾತಾವರಣದಲ್ಲಿನ ಏರುಪೇರು ಭೂಮಿಯ ಮೇಲಿನ ಬದುಕನ್ನ ಅಸಹನೀಯಗೊಳಿಸುತ್ತಿದೆ. ಒಂದು ಕಡೆ ಭೂಮಿಯೇ ಇಲ್ಲದ ಜನ, ಮತ್ತೊಂದೆಡೆ, ಹೆಚ್ಚುವರಿ ಭೂಮಿಯನ್ನ ಹೊಂದಿರುವ ಜಮೀನ್ದಾರರು ಭೂಮಿಯ ಉಳಿಮೆ ಮಾಡಲಾಗದೆ ಪಾಳುಬಿಟ್ಟಿರುವ ಹಿನ್ನೆಲೆಯಲ್ಲಿ ಭೂಮಿಯ ಒಡೆತನದ ಪ್ರಶ್ನೆ ಬಹು ಜನರನ್ನ ಕಾಡುತ್ತಿದೆ. ಈ ನೆಲದ ಸಹವಾಸವೆ ಹೀಗೆ, ಮಾಗಿ ಕಾಲದಲ್ಲಿ ಅಕ್ಕಡಿ ಸಾಲುಗಳನ್ನ ಬಿಟ್ಟು ಮಾಗಿ ಮಾಡಿಬಿಟ್ಟರೆ ಕೊಯ್ಲು ಆದ ಮೇಲೆ ಸುಡು ಬೇಸಿಗೆಯಲ್ಲಿ ದರ್ಲಿ ಹೊಡೆದು ಕೊಟ್ಟಿಗೆ ಗೊಬ್ಬರ ಹೇರಿ ಮುಂಗಾರಿಗೆ ಕಾಯುವುದು. ಸರಿಯಾದ ಸಮಯಕ್ಕೆ ಮುಂಗಾರು ಆರಂಭಗೊಂಡರೆ ರೈತನಿಗೆ ಬಿಡುವೇ ಇಲ್ಲದ ಕೆಲಸ. ಕಾಂಪೋಸ್ಟ್ ಗೊಬ್ಬರ ಚೆಲ್ಲಿ ರಂಟೆ ಹೊಡೆದು ಬಿತ್ತಲು ಅಣಿ ಮಾಡ್ತಿದಂಗೆ 'ಧುತ' ಎಂದು ಎದ್ದುನಿಲ್ಲುವ ಸಮಸ್ಯೆಗಳು. ಆರ್ಥಿಕವಾಗಿ ನಿತ್ರಾಣ ಗೊಂಡಿರುವ ರೈತ ದಲ್ಲಾಳಿಗಳ ಮುಂದೆ ಹಲ್ಲು ಗಿಂಜಿ ನಿಲ್ಲುವುದು ಸರ್ವತಾ ತಪ್ಪುವುದಿಲ್ಲ, ಅವನೋ ಕನಿಷ್ಠ ಮೂರು ಸಾರಿ ಎಡತಾಕದಿದ್ದರೆ ರೈತ, ಅವನ ಅಂತಸ್ತಿನ ಮಹಿಮೆಗೆ ಕುಂದುಬರುವುದೆಂದು ಬಗೆದು, ಆವಾಗ ಬಾ, ಈವಾಗ ಬಾ ಎಂದು ಮೂರು, ನಾಕು ಸಾರಿ ಹೇಳಿದ ಮೇಲೆ ಅವನು ಕೇಳಿದ ಅರ್ಧದಷ್ಟು ಕಾಸುಕೊಟ್ಟು ಅವತ್ತೆ ಅದಕ್ಕೆ ಬಡ್ಡಿ ಸೇರಿಸಿ ಬೆಳೆ ಕೈಗೆ ಬರುವುದರಲ್ಲೇ, ಬಡ್ಡಿ, ಚಕ್ರಬಡ್ಡಿ ಸೇರಿದಾಗ, ಅವನು ಬೆಳೆದ ಬೆಳೆಗೂ ತಂದ ಸಾಲಕ್ಕೂ ಬರೋಬ್ಬರಿ. ರೈತ ಅಡ್ಡಾಡಿದ ಬಸ್ಸು, ಚಹಾ, ತಿಂಡಿ, ಬೀಡಿ, ಸಿಗರೇಟು, ಅವನ ಅಡ್ಡ ಚಟಗಳಾದ ಸಿನಿಮಾ, ಸರಾಯಿ ಎಲ್ಲ ಸೇರಿದರೆ, ತುಂಡು ಭೂಮಿಯಲ್ಲಿ ಬೆಳೆದದ್ದೆಲ್ಲ ಗೋವಿಂದ.

ಸಾಂಪ್ರದಾಯಿಕ ಬೆಳೆಗಳಾದ, ರಾಗಿ, ಜೋಳ, ನವಣೆ, ಸಜ್ಜೆ, ಸಾಮು, ಅಕ್ಕಡಿಕಾಳುಗಳಾದ ತೊಗರಿ, ಅಲಸಂದೆ, ಹೆಸರು, ಉದ್ದು, ಅವರೆ, ಎಳ್ಳು, ಕುಸಬಿ, ಗುರೆಳ್ಳು, ಮೆಣಸಿನ ಮಡಿಯಲ್ಲಿ ಬೆಳೆಯುತ್ತಿದ್ದ ಸಾಸಿವೆ, ಬೆಂಡೆ, ಮೂಲಂಗಿ, ಕೋತಂಬರಿ ಕಾಳು, ಮುಂತಾದ ಅನೇಕ ತರಕಾರಿಗಳು, ಕಾಳು ಮುಂತಾದ ಅನೇಕ ಧಾನ್ಯಗಳು ಮಾಯವಾಗಿವೆ. ಸೌಂದರ್ಯವರ್ಧಕಕ್ಕೆ ಬೇಕಾಗುವ ಸೌತೆಕಾಯಿ, ಎಣ್ಣೆಕಾಳಿಗೆ ಬೇಕಾಗುವ ಕಡ್ಲೆ, ಸೂರ್ಯಕಾಂತಿ, ಕಬ್ಬು ಬಹು ಮುಖ್ಯವಾಗಿ ಮೆಕ್ಕೆಜೋಳ ಬಂದಮೇಲಂತೂ ಹೊರ ಹೊಲಗಳೆಲ್ಲಾ ಕಳೆಗುಂದಿವೆ. ಇನ್ನೂ ಕೆಲವು ಕಡೆ ಸಣ್ಣಪುಟ್ಟ ಕಂಪನಿಗಳು ಆರಂಭಗೊಂಡು ಅವಕ್ಕೆ ಬೇಕಾಗುವ ಕಚ್ಚಾ ಸಾಮಗ್ರಿಗಳನ್ನ ಬೆಳೆಯುವಲ್ಲಿ ನಿರತವಾಗಿವೆ. ಉದಾಹರಣೆಗೆ, ಹರಪನಹಳ್ಳಿ ತಾಲೂಕಿನ ಬಹುತೇಕ ಭಾಗಗಳಲ್ಲಿ ಚೆಂಡು ಹೂ ಬೆಳೆಯಲಾಗುತ್ತಿದೆ. ಉದಾಹರಣೆಗೆ, ತಾಲೂಕಿನ ತೆಲಗಿ ಗ್ರಾಮದ ಬಳಿ ಆರಂಭ ಗೊಂಡಿರುವ ಚೆಂಡು ಹೂವಿನ ಫ್ಯಾಕ್ಟರಿ. ಮಳೆ ಇಲ್ಲದೆ, ಜನ ದನಕರುಗಳು, ಎತ್ತುಗಳು ಕಂಗೆಟ್ಟಿವೆ. ಅವಕ್ಕೆ ಮೇವಿಲ್ಲ. ಸುತ್ತಲ ಊರುಗಳ ಬಹುತೇಕ ಜಮೀನಿನಲ್ಲೂ, ಚೆಂಡು ಹೂ ಬೆಳೆಯಲಾಗುತ್ತಿದೆ. ಮತ್ತೊಂದು ಕುತೂಹಲಕಾರಿ ವಿಷಯ ವೆಂದರೆ, ದುಗ್ಗಾವತ್ತಿ ಪಕ್ಕದ ಕಬ್ಬಿನ ಫ್ಯಾಕ್ಟರಿ ರೈತರ ತಲೆಕೆಡಿಸಿದೆ. ದೀಪಾವಳಿ ಆಸುಪಾಸಿನಲ್ಲಿ ಬರುವ ರೈಲ್ವೆ ವ್ಯಾಗನ್‌ಗಳು ಮೆಕ್ಕೆಜೋಳದ ಖರೀದಿಯನ್ನ ಭರಾಟೆಗೊಳಿಸುವ ಪರಿ ನಮ್ಮ ರೈತರನ್ನ ವ್ಯವಹಾರಿಕರನ್ನಾಗಿ ಮಾಡಿಬಿಟ್ಟಿವೆ. ಇದು ಮುಂದಿನ ದಿನಗಳಲ್ಲಿ ಆಹಾರ ಸಮಸ್ಯೆಯನ್ನು ಗಂಭೀರಗೊಳಿಸುತ್ತದೆ.

ಈ ಬದಲಾವಣೆ ಒಂದು ಕಡೆಯಾದರೆ, ಹಳ್ಳಿಯ ಅರೆಬರೆ ಸುಖಕ್ಕೆ ಬೇಸರಗೊಂಡ, ಅರ್ಧಕ್ಕೆ ಫೇಲಾಗಿ ಕಾಲೇಜು ಬಿಟ್ಟಿರುವ ಡ್ರಾಪ್ ಔಟುಗಳು ಪೆಟ್ರೋಲ್ ಬಂಕ್, ಬಾರ್‌ಗಳಲ್ಲಿ ದೊರೆಯುವ ಟಿಪ್ಸ್ ಮುಂತಾದ ಆಮಿಷಗಳಿಗೆ ಬಲಿಯಾಗಿ ಹಳ್ಳಿಯಿಂದ ಪಟ್ಟಣಕ್ಕೆ ವಲಸೆ ಹೋಗಿದ್ದಾರೆ. ನಿರ್ಜನ ಪ್ರದೇಶಗಳಾಗುತ್ತಿರುವ ಹಳ್ಳಿಗಳಲ್ಲಿ ಕೂಲಿಗೆ ಮಂದೀನೆ ಸಿಗುತ್ತಿಲ್ಲ. ಕಷ್ಟಪಟ್ಟು ಸಾಲಸೂಲ ಮಾಡಿ ಹಾಕಿದ ಬೆಳೆಗೆ ಕಳೆ ತೆಗೆಯಲು, ತೆನೆ ಮುರಿಯಲು, ಕಣ



ಮಾಡಲು ಕೂಲಿಯವರೇ ಸಿಗದೆ ಒಂದಕ್ಕೆ ಎರಡರಷ್ಟು ಕೂಲಿಯನ್ನ ತೆತ್ತರೂ ಅಪ್ರಾಪ್ತ ವಯಸ್ಸಿನ ಮಕ್ಕಳು, ವಯೋವೃದ್ಧರೇ ಗತಿ. ಇದರ ಪರಿಣಾಮ ಅದರ ಇಳುವರಿಯ ಮೇಲಾಗುತ್ತದೆ. ಒಂದು ಕಡೆ ಈ ರೀತಿಯ ಪೆಟ್ಟಾದರೆ, ಮತ್ತೊಂದು ಕಡೆ, ಮಳೆಯಾಶ್ರಿತ ಬೆಳೆಗಳಿಗೆ ಸಕಾಲದಲ್ಲಿ ಮಳೆಯಾಗದೆ ಅಂಟು ಕುಂಟು ಬೆಳೆ ಬೆಳೆಯು ವುದರಿಂದ ಅವನ ಆರ್ಥಿಕ ಸ್ಥಿತಿ ಸುಧಾರಿಸುವುದೇ ಇಲ್ಲ, ಇಷ್ಟು ಸಾಲದು ಎಂಬಂತೆ ಮಾರುಕಟ್ಟೆಯಲ್ಲಿ ಸರಿಯಾದ ಬೆಲೆ ಸಿಗದಿರುವುದು, ಹಮಾಲಿಗಳು ಬೇಕಾಬಿಟ್ಟಿ ತೂಗಿ ರೈತನಿಗೆ ಮೋಸಮಾಡುವುದು, ನೆಲದ ಮೇಲೆ ಸಣ್ಣ ರಾಶಿಯಾದರೆ ಐವತ್ತು ಕೆ.ಜಿ.ಯಷ್ಟನ್ನ ಬಿಟ್ಟುಕೊಳ್ಳುವುದು ಕೂಡ ಜರುಗುತ್ತಿದೆ. ಇಂತಹ ಹಲವಾರು ಶೋಷಣೆಗಳಿಂದ ನಲುಗಿಹೋಗಿರುವ, ನೆಲವನ್ನೇ ನಂಬಿರುವ, ರೈತ ಯಾವ ಕಾಲಕ್ಕೆ ಉದ್ಧಾರವಾದಾನು ? ಈ ಸತ್ಯವನ್ನ ಮನಗಂಡ ಸಣ್ಣ ಹಿಡುವಳಿ ರೈತರು ಭೂಮಿಯನ್ನ ಪಾಳುಬಿಟ್ಟು ಕಾಫಿ ತೋಟಕ್ಕೆ ಕಾಫಿ ಹರಿಯಲೋ, ಗೋವಾ, ಮಹಾರಾಷ್ಟ್ರ, ಕೇರಳ, ಮಂಗಳೂರು, ಬೆಂಗಳೂರು, ಮುಂತಾದೆಡೆಗೆ ದುಡಿಯಲು ಹೋಗುತ್ತಿದ್ದಾರೆ. ಅವರಿಗೆ ಅಲ್ಲಿ ಸಿಗುವ ಒಳ್ಳೆಯ ಕೂಲಿ ಆಕರ್ಷಕವೆನಿಸಿ ಹಳ್ಳಿಯ ಬದುಕು ದುಸ್ತರ ಎನಿಸತೊಡಗಿದೆ. ಸುಮಾರು ಹತ್ತು, ಹದಿನೈದು ವರುಷಗಳ ಹಿಂದಿದ್ದ ಹಳ್ಳಿಗಳು ಈಗ ಬದಲಾಗಿವೆ. ನಗರದ ಬದುಕಿಗೆ ತೆರೆದುಕೊಂಡ ಮನಸ್ಸುಗಳು ನಗರದ ರಂಗುರಂಗಿನ

ಬದುಕಿನತ್ತ ಬೆಂಕಿ ಕಂಡು ಆಕರ್ಷಣೆಗೊಂಡ ಪತಂಗಗಳಂತೆ ಆಕರ್ಷಿತರಾಗಿ ತಮ್ಮ ಜೀವನವನ್ನೇ ನರಕಗೊಳಿಸಿಕೊಳ್ಳುತ್ತಿದ್ದಾರೆ.

ಹೊಸ ಗಾಳಿಯ ಅಲೆ ಬೀಸುತ್ತಿದ್ದಂತೆ ನಮ್ಮ ಸಾಂಪ್ರದಾಯಿಕ ತಿಂಡಿತಿನಿಸುಗಳು, ಆಚಾರವಿಚಾರಗಳು, ತರಗೆಲೆಗಳಂತಹ ಗಾಳಿಯಲ್ಲಿ ಹಾರಿಹೋಗಿವೆ. ಎಷ್ಟೋ ಹಬ್ಬಗಳಿಗೆ ಹೊಸರೂಪ ಬಂದಿವೆ, ಎಷ್ಟೋ, ಹೊಸ ಆಚರಣೆಗಳು ಗೊತ್ತಿಲ್ಲದೆ ಜನಮಾನಸದೊಳಗೆ ಪ್ರವೇಶ ಮಾಡಿವೆ. ಹಳ್ಳಿಗಳಲ್ಲಿ ಹುಟ್ಟುತ್ತಿದ್ದ ಹಾಡು-ಹಸೆ, ಭಜನೆ, ಜಾತ್ರೆ, ಕೋಲಾಟ, ಲಾವಣಿ, ಗೀಗಿ, ಸೋಬಾನೆ, ಜನಪದ, ಕುಟ್ಟೋ ಬೀಸೋ, ಜೋಗುಳ ಪದ, ಮದುವೆ, ಆಚರಣೆಗಳಲ್ಲಿ, ಹಬ್ಬಹರಿದಿನಗಳಲ್ಲಿ ಔಚಿತ್ಯಪೂರ್ಣ ಹಾಡುಗಳೀಗ ನಿಂತುಹೋಗಿವೆ.

ನೆಲದೊಡನೆ ಅಂಟಿಕೊಂಡಿರುವ ಅದೆಷ್ಟೋ ನಂಬಿಕೆಗಳೀಗ ಬದಲಾಗಿವೆ. ನೆಲಸಂಸ್ಕೃತಿ ನಾಶವಾಗುತ್ತಿದೆ. ಹಳ್ಳಿಗಳಲ್ಲಿ ಬದಲಾವಣೆ ತ್ವರಿತ ಗತಿಯಲ್ಲಿ ಸಾಗುತ್ತಿದೆ. ಆಚಾರವಿಚಾರ, ನಡುವಳಿಕೆ, ಜೀವನಶೈಲಿ, ಸಂಸ್ಕೃತಿ, ಉಡುಪು, ಭಾಷೆ ಸಾಮಾಜಿಕ ಜೀವನ, ಧಾರ್ಮಿಕ ನಂಬಿಕೆಗಳು ಹೊಸ ವೇಷವನ್ನ ಧರಿಸುತ್ತಿವೆ. ಪರಿವರ್ತನೆ ಸಹಜ ನಿಯಮವಾದರೂ ಕೆಲವೊಂದು ಬದಲಾವಣೆಗಳು ಗಂಡಾಂತರಕಾರಿಯಾಗಿವೆ. ಮುಖ್ಯವಾಗಿ ಈ ಬದಲಾವಣೆ ನಮ್ಮ ಕೃಷಿ ಅಥವಾ ನಮ್ಮ ಬದುಕಿನ ವಿಧಾನದಿಂದಲೇ ವಿಕಾಸಗೊಂಡ ಬದಲಾವಣೆಯಲ್ಲ, ಜಾಗತೀಕರಣದ ಪ್ರಭಾವದಿಂದ ಬಾಹ್ಯ ಒತ್ತಡಕ್ಕೆ ಮತ್ತು ಅವರ ಹುನ್ನಾರಕ್ಕೆ ಪೂರಕವಾದ ಬದಲಾವಣೆ, ಅಷ್ಟೆ.

ಎಲ್ಲ ಯೋಜನೆಗಳಿಗೆ ರೈತರ ಭೂಮಿಯೇ ಬೇಕು. ಸರ್ಕಾರ ಮನಸ್ಸು ಮಾಡಿದರೆ ಆ ಜಮೀನನ್ನು ಪಡೆದೇ ಪಡೆಯುತ್ತದೆ, ಅನ್ನದ ಅಕ್ಷಯಪಾತ್ರೆಯಾಗಿರುವ ಭೂಮಿಯನ್ನ ಕಳೆದುಕೊಂಡರೆ ಅನ್ನಕ್ಕೆ ಗತಿ ಏನು ? ಎಂಬ ಚಿಂತನೆಯನ್ನು ಮಾಡದಂತಹ ವ್ಯವಸ್ಥೆ ನಿರ್ಮಾಣವಾಗಿದೆ. ನೂರಾರು ವರ್ಷಗಳಿಂದ ಸಾಗುವಳಿ ಮಾಡಿರುವ ಭೂಮಿಯನ್ನ ಸರ್ಕಾರಿ ಜಮೀನೆಂದು ಒಕ್ಕಲೆಬ್ಬಿಸುವ ಹುನ್ನಾರ ಮಾಡಿ, ಹೋರಾಟದ ನಂತರ ಸುಮ್ಮನಾದ ಅನೇಕ ಘಟನೆಗಳು ಜರುಗಿವೆ. ರೈತರ ನೋವನ್ನ ಅರಿಯದ ಸರ್ಕಾರಗಳಿಗೆ ಅವರ ಕೂಗು ಯಾಕೆ ಕೇಳಿಸುತ್ತಿಲ್ಲ? ಕಾರಣಗಳು ಏನೇ ಇದ್ದರೂ ನೆಲಸಂಸ್ಕೃತಿ ಮಾತ್ರ ನೆಲೆ ಕಳೆದು ಕೊಳ್ಳುತ್ತಿದೆ. ಒಂದು ಕಡೆ ವೈಜ್ಞಾನಿಕ ಕಾರಣಗಳಾದಂತ ವಾತಾವರಣದಲ್ಲಿನ ಏರುಪೇರಿನಿಂದಾಗಿ ಋತುಗಳಲ್ಲಿನ ಬದಲಾವಣೆ, ಮಳೆಗಾಲದಲ್ಲಿ ಬೇಸಿಗೆಯೂ, ಬೇಸಿಗೆಯಲ್ಲಿ ಮಳೆಗಾಲವೂ, ಇನ್ಯಾವುದೋ ಕಾಲದಲ್ಲಿ ಮತ್ಯಾವುದೋ ಕಾಲ ಮಧ್ಯ ಪ್ರವೇಶಿಸಿ ಯಾವುದೂ ಸ್ಪಷ್ಟವಾಗಿ ಗೋಚರಿಸದಾಗಿದೆ. ಎಲ್ ನೀನೋ, ಗ್ರೀನ್ ಹೌಸ್, ಸುನಾಮಿ, ಭೂಕಂಪಗಳ ಪ್ರಭಾವ ಒಂದೆಡೆಯಾದರೆ ಮಾನವಜನ್ಯ ಕಾರಣಗಳಾದಂತಹ ಮನುಷ್ಯನ ಅತಿಆಶೆ, ದುರಾಸೆ, ಸ್ವಾರ್ಥ, ಅಧಿಕಾರದ ದುರುಪಯೋಗಗಳಂತಹ ಅಂಶಗಳು ಕೂಡ ನೆಲಸಂಸ್ಕೃತಿಯ ಪತನಕ್ಕೆ ಕಾರಣವಾಗುತ್ತಿವೆ. ಮೂರನೆಯದಾಗಿ, ಜಾಗತಿಕ ಮಟ್ಟದಲ್ಲಾಗಿರುವ ಅನೇಕ ಬದಲಾವಣೆಗಳು ಕೂಡ ರೈತರಿಗೆ ಮಾರಕವಾಗಿವೆ. ಅವುಗಳಲ್ಲಿ ಜಾಗತೀಕರಣ, ಖಾಸಗೀಕರಣ, ಉದಾರೀಕರಣ, ಗ್ಯಾಟ್ ಒಪ್ಪಂದ ಮತ್ತು ಇತ್ತೀಚೆಗೆ ಚಿಕ್ಕ ವ್ಯವಹಾರಗಳಲ್ಲಿ ಜಾಗತಿಕ ವಲಯದಲ್ಲಿ ಹೊರದೇಶದ ಕಂಪನಿಗಳಿಗೆ ಅವಕಾಶ ನೀಡುವುದರಿಂದ ನಮ್ಮ ರಾಷ್ಟ್ರದ ಚಿಕ್ಕಪುಟ್ಟ ವ್ಯಾಪಾರಗಳು ದಿಕ್ಕು ದಿಶೆಯಿಲ್ಲದೆ ದಿವಾಳಿಯಾಗುತ್ತಿವೆ. ದೊಡ್ಡ ಮಾಲ್‌ಗಳು ಬಂದಮೇಲಂತೂ ಸಣ್ಣ ಕಿರಾಣಿಗಳು ಧೂಳಿಪಟಗೊಂಡಂತೆ, ರಿಲಯನ್ಸ್ ಫ್ರೆಶ್ ಬಂದಮೇಲೆ ರಸ್ತೆ ಬದಿ ಸೊಪ್ಪು ತರಕಾರಿ ಮಾರುತ್ತಿದ್ದ ಮುದುಕಿಯ ವ್ಯಾಪಾರ ಎಕ್ಕುಟ್ಟಿಹೋದಂತೆ ನಮ್ಮ ರೈತ ಈ ಎಲ್ಲ ಸಂಕಷ್ಟಗಳ ನಡುವೆ ಸಿಲುಕಿ ನುಜ್ಜುಗುಜ್ಜಾಗಿ ಈ ರೈತಾಪಿಯೇ ಬೇಡ ಎನ್ನುವ ಹಂತ ತಲುಪಿದ್ದಾನೆ. ಇಂಥ ಅವ್ಯವಸ್ಥೆಯನ್ನು ಎದುರಿಸಬೇಕಾದರೆ ಜನಜಾಗೃತಿ ಅವಶ್ಯ ಆದರೆ ಜನಜಾಗೃತಿ ಮಾಡಬೇಕಾದ ಸಂಘಟನೆಗಳೂ ಇಂದು ನಿಷ್ಕ್ರಿಯವಾಗಿವೆ. ಇಂಥ ಸಂದರ್ಭದಲ್ಲಿ ಜನಪರ ಸಂಘಟನೆಗಳೆಲ್ಲ ಒಂದೆಡೆ ಸೇರಿ ಗಂಭೀರವಾಗಿ ಚಿಂತಿಸಬೇಕಿದೆ.

**ಡಾ॥ ಶಿರಗಾನಹಳ್ಳಿ ಶಾಂತನಾಯ್ಕ**
ಮಹಾರಾಜ ಕಾಲೇಜು, ಮೈಸೂರು

## ಸ್ಪೇಸ್ ಆಂಡ್ ಟೈಮ್



೧

ನಮ್ಮ ನಾಗರಿಕತೆ
ಕೆಲವೇ ಸೆಕೆಂಡುಗಳ ಹಿಂದೆ ನದಿ ದಡಗಳಲ್ಲಿ
ಚಿಗುರಿದ ಗರಿಕೆ ಹುಲ್ಲು, ಕೋಟ್ಯಂತರ
ವರುಷಗಳ ನಾಗರಿಕತೆ ಹಾಸಿಕೊಂಡಿದೆ –
ಬೆಳಕು ಹಚ್ಚಿಕೊಂಡ ನಕ್ಷತ್ರಗಳಲ್ಲಿ,

೨

ಆಕಾಶಗಂಗೆಯೊಳಕ್ಕೆ
ವೇಗವಾಗಿ ಧಾವಿಸುವ ಸೂರ್ಯಮಂಡಲ,
ಸುತ್ತುಗಟ್ಟಿ ಸಾಗುವ ಬುಧ ಗುರು ಭೂಮಿ...
ಸೂರ್ಯನ ಛೇಡಿಸಿ ಬೂದಿಯಾಗುವುದು ನಿಶ್ಚಿತ;
ಸೂರ್ಯ ಉರಿದುರಿದು ಗುರುತ್ವಾಕರ್ಷಣೆ ಕಳೆದುಕೊಂಡು
ಕಪ್ಪು ರಂಧ್ರದಲ್ಲಿ ಸೇರಿಹೋಗುವುದು ಇನ್ನೂ ನಿಶ್ಚಿತ –
ಇದೆಲ್ಲ ನಡೆಯುವುದು ಮಿಲಿಯಾಂತರ –
ಬಿಲಿಯಾಂತರ ವರ್ಷಗಳಲ್ಲಿ ಎನ್ನಬೇಡಿ,
ನಾಳೆಯೇ ನಡೆಯಬಹುದು; ಇಲ್ಲ ಕೆಲವು ನೂರು
ಜ್ಯೋತಿರ್ವರ್ಷಗಳಾದರೂ ಆಗಬಹುದು.
ಇಷ್ಟಕ್ಕೂ ಈ ಬೆಳಕಿನ ಕಿರಣಗಳನ್ನು
ಸೆಕೆಂಡಿಗೆ ೩ ಲಕ್ಷ ಕಿ.ಮೀ. ದೂರ
ಓಡುವಂತೆ ಆಜ್ಞೆ ನೀಡಿದವರ್ಯಾರು ?

೩

ಈ ಗಿಡ ಮರ, ಪಕ್ಷಿ ಪ್ರಾಣಿಗಳು;
ಕೆರೆ ಕುಂಟೆ, ಸರೋವರ ಸಮುದ್ರಗಳು –
ಕಲ್ಲುಬಂಡೆ, ಪರ್ವತ ಶ್ರೇಣಿಗಳು ಕ್ಷಣಿಕವಾದವು;
ಎಲ್ಲದರ ಮೂಲ ಬಿಗ್‌ಬ್ಯಾಂಗ್ ಸ್ಫೋಟ;
ಅದು ಒಂದಲ್ಲ ಎರಡಲ್ಲ ಸ್ಫೋಟಗೊಂಡವು
ನೂರಾರು... ಮಧ್ಯದಲ್ಲಿಯೇ ತಡವರಿಸಿ ನಿದ್ದೆಗೆ ಜಾರಿ
ಮಿಲಿಯಾಂತರ ವರುಷಗಳ ಕೋಶಾವಸ್ಥೆ; ನಂತರ
ವಿಶ್ವಕ್ಕೆ ಕಣ್ಣು ನೀಡಿದವು ನಿಧಾನವಾಗಿ ಎಣೆಯಿಲ್ಲದ
ಫೊಟಾನ್‌ಗಳು ವಿಭಜನೆಗೊಂಡವು
ಎಲೆಕ್ಟ್ರಾನ್ ಪ್ರೋಟಾನ್ ನ್ಯೂಟ್ರಾನ್‌ಗಳು.

೪

ಸ್ಪೇಸ್ ಆಂಡ್ ಟೈಮ್ ಅಂದರೆ ಏನೆಂದು ತಿಳಿಯದೆ
ಇಲ್ಲಿಗೆ ಬಂದು ನಿಂತಿದ್ದೇವೆ ನಾವೀಗ !
ನಾಳೆ ಎಲ್ಲಿಗೋ ಹೋಗಿ ತಲುಪುತ್ತೇವೆ...?
ಕತ್ತಲೆಂದರೆ ಕುಗ್ಗುವ ಕೃಷ್ಣ ರಂಧ್ರಗಳು,
ಬೆಳಕೆಂದರೆ ಹಿಗ್ಗುವ ಬೆಳಕಿನ ರಂಧ್ರಗಳು,
ಆರಂಭ-ಅಂತ್ಯವಿಲ್ಲದ ಬ್ರಹ್ಮಾಂಡ –
ಯಾರಿಗೆ ಏನು ಗೊತ್ತು ,
ವಿಜ್ಞಾನ ಒಂದು ಸುಟ್ಟ ಬದನೆಕಾಯಿ;
ಅಂಡ-ಪಿಂಡ ಬೂದಿ ಬ್ರಹ್ಮಾಂಡ.

**ಡಾ॥ ಎಂ. ವೆಂಕಟಸ್ವಾಮಿ**
ನಂ. ೫೧೯, ೩೯ನೇ ಬ್ಲಾಕ್, ಟೈಪ್-೫ ಸಿಪಿಡಬ್ಲ್ಯೂಯು ಕ್ವಾರ್ಟರ್ಸ್
ಎಚ್.ಎಸ್.ಆರ್. ಲೇಔಟ್, ಬೆಂಗಳೂರು - ೫೬೦ ೧೦೨

ಟಿ. ಬಸವರಾಜ್ ತೂಲಹಳ್ಳಿ

# 'ಕಂಗ್ಲಿಷ್' ತುಳಿತದಲ್ಲಿ ಕನ್ನಡ

**ಕನ್ನಡದ ಇಂತಪ್ಪ ದುರ್ಗತಿಗೆ ಏನು ಕಾರಣ? ಕನ್ನಡವನ್ನು ಉಳಿಸುವ ದಾರಿಗಳಾವುವು? ಕನ್ನಡದ ದುರ್ಗತಿಗೆ ವಿಶ್ವಮಟ್ಟದ ಬೆಳವಣಿಗೆಗಳು ಕಾರಣವಾಗಿವೆ. ವಿಜ್ಞಾನ-ತಂತ್ರಜ್ಞಾನ-ತತ್ವಜ್ಞಾನಗಳ ಆವಿಷ್ಕಾರ, ಹೊಸ ಶಿಕ್ಷಣ, ವಸಾಹತುಶಾಹಿಯುಗ ಇತ್ಯಾದಿ ಇಂಗ್ಲಿಷ್ ಪರವಾಗಿರುವ ವಿದ್ಯಮಾನಗಳು ಈಗಲೂ ಸತ್ವಯುತವಾಗಿದ್ದು ಕನ್ನಡ ಭಾಷೆ ಉಳಿದು ಬೆಳೆಯಬೇಕಿದ್ದ ಸನ್ನಿವೇಶಗಳನ್ನು-ಭೌತಿಕ ಪರಿಸ್ಥಿತಿಗಳನ್ನು ಇಲ್ಲವಾಗಿಸಿವೆ! 'ಕನ್ನಡಲೋಕ' ಅಚ್ಚ ಜನಪದೀಯ ಬದುಕಿಂದ ದೂರವಾಗಿದೆ. ನಾವಿಂದು 'ನವವಸಾಹತುಶಾಹಿ' ಯುಗದಲ್ಲಿದ್ದೇವೆ! ಭಾರತ ಇಂದು ಅಂತರರಾಷ್ಟ್ರೀಯ ಮಟ್ಟದಲ್ಲಿ ವಿಜ್ಞಾನ, ತಂತ್ರಜ್ಞಾನ, ಕೈಗಾರಿಕೆ, ಆರ್ಥಿಕ ವಿಷಯಗಳಲ್ಲಿ ವಿಶ್ವ ದಿಗ್ಗಜರೊಂದಿಗೆ ಸೆಣಸಾಟಕ್ಕಿಳಿದಿದೆ. ಹಾಗಾಗಿ, ಕನ್ನಡಕ್ಕೆ ಸಹಜವಾಗಿ ತನ್ನ ಮೂಲಸತ್ವ ಹಾಗೂ ತಾಜಾತನ-ಪರಿಶುದ್ಧತೆಯನ್ನು ಉಳಿಸಿಕೊಂಡು ಹೋಗುವುದು ಕಷ್ಟವಾಗಿದೆ.**

ವರ್ತಮಾನದ ಹೈಟೆಕ್ ಜೀವನದ ಸನ್ನಿವೇಶದಲ್ಲಿ, ಕಂಗ್ಲಿಷ್ ಪ್ರಭಾವದಲ್ಲಿ, ಕನ್ನಡದ ಪರಿಸ್ಥಿತಿ ಏನಾಗಿದೆ ಎಂಬುದನ್ನು ಮನವರಿಕೆ ಮಾಡಿಕೊಡುವ ಉದ್ದೇಶ ಈ ಲೇಖನದ್ದು. ನಿಮ್ಮ ಸುತ್ತ ಇರುವ ಶಿಕ್ಷಿತ ಹಾಗೂ ಅರೆಶಿಕ್ಷಿತ ಜನ ಮಾತಾಡುವುದನ್ನು ಸ್ವಲ್ಪ ಕೇಳಿ. ಶಿಕ್ಷಿತರು ಯಾವುದನ್ನು ಕನ್ನಡ ಎಂದು ನಂಬಿರುವರೋ ಆ ಭಾಷೆ ಇತ್ತ ಕನ್ನಡವೂ ಅಲ್ಲದ, ಅತ್ತ ಇಂಗ್ಲಿಷೂ ಅಲ್ಲದ, ಎರಡರ ಅನೈತಿಕ ಲಗ್ನದ ಶಿಶುವಾದ ಕಂಗ್ಲಿಷ್ ಭಾಷೆ! ಬಾಯಿ ತಗೆದರೆ ವಿದ್ಯಾವಂತರ ಬಾಯಿಂದ ಆ ಕಂಗ್ಲಿಷ್ ಮುತ್ತುಗಳು ಉದುರುತ್ತವೆ: ಎಯ್ಟ್ ಒ ಕ್ಲಾಕ್ ಗೆ ರೀಚ್ ಆಗ್ತೀಯ, ಇಮ್ಮಿಡಿಯಟ್ ರೂಮ್ ಸೇರು, ಎಕ್ಸಪೆನ್ಸ ಮಾಡಬೇಡ; ತುಂಬಾ ವೇಟ್ ಮಾಡಿದ್ವಿ; ಲೈಕ್ ಆಯ್ತು; ಸರ್ವ್ ಮಾಡು, ನನ್ನ ವಿಷಯದಲ್ಲಿ ಇಂಟರ್ ಫಿಯರ್ ಆಗ್ಬೇಡ; ಅರ್ಜಂಟ್ ಮಾಡಬ್ಯಾಡ... ಹೀಗೆ ಸಾವಿರಾರು ಪದಗಳು ನಮ್ಮ ಕನ್ನಡದ ಶಿಕ್ಷಿತರ ನಿತ್ಯ ಜೀವನದಲ್ಲಿ ಬಳಕೆಯಾಗುತ್ತಿವೆ. ಅದೇ ರೀತಿ, ನಮ್ಮ ರೈತರು ಹೊಲದಲ್ಲಿ ಬಿತ್ತುವಾಗ ಮುಖ್ಯ ಬೆಳೆಯ ಮಧ್ಯ ಮಧ್ಯ ನಾಕು ಸಾಲಿಗೆ ಒಂದು, ಆರು ಸಾಲಿಗೆ ಒಂದರಂತೆ 'ಅಕ್ಕಡಿಸಾಲು' ಹಾಕಿ, ಮೇರೆ ಸಾಲು ಬಿತ್ತಿ, ಹೊಲವನ್ನು ಅಂದಗೊಳಿಸುವಂತೆ ನಮ್ಮ ವಿದ್ಯಾವಂತರೂ 'ಸೋ, ಬಟ್, ಇನ್ ಫ್ಯಾಕ್ಟ, ಆಫ್ ಕೋರ್ಸ, ಯಕ್ಚುಲಿ, ಎನಿ ವೇ, ಬೈ ದಿ ಬೈ,' ಈ ರೀತಿಯ ಇಂಗ್ಲಿಷ್ ಅಭಿವ್ಯಕ್ತಿಗಳನ್ನು ಬಳಸಿ ತಾವು ತುಂಬಾ 'ಕುಲೀನರೆಂದೂ' 'ವಿಶಿಷ್ಟರೆಂದೂ' ಬಿಂಬಿಸಿಕೊಂಡು ಅಶಿಕ್ಷಿತ ವರ್ಗ ಬಾಯಿ ಮೇಲೆ ಬೆಟ್ಟಿಕ್ಕಿಕೊಳ್ಳುವಂತೆ ಮಾಡುತ್ತಾರೆ. ದುರಂತವೆಂದರೆ, ಇವರಿಗೆ ಕನ್ನಡ ಬರಹವೇ ಗೊತ್ತಿಲ್ಲ! ಪತ್ರ ಬರೆದರೆ ಅದೇ ಕಂಗ್ಲಿಷ್ ಸ್ಟೈಲ್! ಬೇರೆ ಬರಹ ಮಾಡಿದರೆ ನೂರಾರು ತಪ್ಪು. ಏನನ್ನೋ ಕುರಿತು ಯಾರನ್ನೋ ಉದ್ದೇಶಿಸಿ ಮಾತಾಡುವಾಗ ಇನ್ನಾವುದನ್ನೋ ಯೋಚಿಸುತ್ತಾ ಮತ್ತಾರ ಕಡೆಗೋ ಕಣ್ಣು ಬೀರುತ್ತಿರುವ ಈ ನಯವಂತರ ಕನ್ನಡದಲ್ಲಿ ಒತ್ತು, ಕೊಂಬು, ದೀರ್ಘ, ಇಳೀ, ವಟ್ರಸುಳಿ, ಐತ್ವ, ಐತ್ವಗಳು ಎಲ್ಲಿರಬೇಕೋ ಅಲ್ಲಿರುವುದಿಲ್ಲ! ಅಪಘಾತದಲ್ಲಿ ನಜ್ಜು-ಗುಜ್ಜಾದವನ ದೇಹದಲ್ಲಿ ಯಾವುದೋ ಭಾಗದ ಮೂಳೆ ಇನ್ನೆಲ್ಲೋ ಹೊರತೂರಿ, ಯಾವ್ಯಾವುದೋ ಅಂಗ ಏನೇನೋ ಆಗಿರುವಂತೆ ಇವರ 'ವಿಕೃತ ಕನ್ನಡ'ದ ಲಕ್ಷಣ! ಕೆಲವು ಉದಾಹರಣೆ ನೀಡುವುದಾದರೆ, ರಾಜ್ಯಮಟ್ಟದ ಕಾರ್ಯಕ್ರಮವೊಂದರಲ್ಲಿ ವಿಚಾರ ಸಂಕಿರಣ ಎಂಬುದನ್ನು 'ವಿಚಾರ ಸಂಕೀರ್ಣ' ಎಂದು ಬರೆದಿರುವುದನ್ನು ನಾನು ನೋಡಿದ್ದೇನೆ. ರಾಜ್ಯ ಸಾರಿಗೆ ಬಸ್‌ಗಳಲ್ಲಿ ಕೆಲವು ಶ್ರೇಷ್ಠ ಲೇಖಕರ ಕಾವ್ಯದ ಸಾಲುಗಳನ್ನು, ಇತರೆ ಹೇಳಿಕೆ, ಉಕ್ತಿಗಳನ್ನು ಬರೆದಿರುತ್ತಾರೆ. ಅಲ್ಲಿಯೂ ಕನ್ನಡ ಕುರೂಪಗೊಂಡಿರುತ್ತದೆ. ಉದಾಹರಣೆಗೆ, 'ಕುಡಿಯಿರಿ ಶುದ್ದಜಲ, ಕೊಲ್ಲದಿರಿ ಅಂರ್ತಜಲ. ವಾಹನ ಸ್ವಚ್ಚವಾಗಿಡಲು ಸಹಕರಿಸಿ!' ಇಲ್ಲಿ ಮೂರು ಪದಗಳು ದೋಷಯುಕ್ತವಾಗಿದ್ದು, ಅವು ಹೀಗಿರಬೇಕಿತ್ತು: 'ಶುದ್ಧಜಲ, ಅಂತರ್ಜಲ, ಸ್ವಚ್ಛವಾಗಿಡಲು'. ಇದೇ ಬಸ್ಸಿನಲ್ಲಿ ಬರೆದ 'ವೃದ್ದರನ್ನು ಗೌರವಿಸಿದರೆ ಪರಮಾತ್ಮನನ್ನು ಗೌರವಿಸಿದಂತೆ' ಎಂಬ ಉಕ್ತಿಯಲ್ಲಿ 'ವೃದ್ಧರನ್ನು' ಎಂದಿರಬೇಕಿತ್ತು. ಇನ್ನೊಂದು ಹರಿಹರದ ಶಾಲಾವಾಹನವೊಂದರ ಹಿಂಬದಿಯಲ್ಲಿ 'ಮಕ್ಕಳುಗಳಿಗೆ ಆಸ್ತಿ ಮಾಡುವುದಕ್ಕಿಂತ...' ಇತ್ಯಾದಿ ಬರಹವಿದೆ. 'ಮಕ್ಕಳಿಗೆ' ಎಂದರೆ ಸಾಕು ಅದು ಬಹುವಚನವಾಗುತ್ತದೆ. ಹಾಗೆಯೇ 'ಆಸ್ತಿ' ಎಂದು ಬರೆಯಬೇಕಿತ್ತು! ಶಾಲೆಗಳಲ್ಲಿ ಪಾಠ ಕಲಿಸಬೇಕಾದ ಶಿಕ್ಷಕರೇ 'ಹಾಜರು' ಎಂಬುದನ್ನು 'ಹಾಜುರು' ಎಂದು, 'ಮೌಖಿಕ' ಎಂಬುದನ್ನು 'ಮೌಕಿಕ' ಎಂದೂ, 'ಕಡ್ಡಾಯ' ಎಂಬುದನ್ನು 'ಖಡ್ಡಾಯ' ಎಂದೂ, 'ಸಿದ್ಧತೆ' ಎಂಬುದನ್ನು 'ಸಿದ್ದತೆ' ಎಂದೂ 'ಬೋಧನೆ'



ಎಂಬುದನ್ನು 'ಭೋದನೆ' ಎಂದೂ, ಸಾರ್ವತ್ರಿಕ ಎಂಬುದನ್ನು ಸಾರ್ವರ್ತಿಕ ಎಂದೂ, 'ಶುಭಾಶಯ' ಎಂಬುದನ್ನು 'ಶುಭಾಷಯ' ಎಂದೂ, 'ಶಪಥ' ಎಂಬುದನ್ನು 'ಶಫತ' ಎಂದೂ, 'ಪಾರ್ಥ' ಎಂಬುದನ್ನು 'ಫಾರ್ತ', 'ಸ್ವಚ್ಛ' ಎಂಬುದನ್ನು 'ಸೊಚ್ಚ' ಎಂದೂ ನಿರ್ಲಜ್ಜವಾಗಿ ಬರೆದಿರುವುದನ್ನು ನಾನು ಕಣ್‌ಸಾಕ್ಷಿಸಿದ್ದೇನೆ! ಶಬ್ದಗಳ-ಪದಗಳ ಕತೆಯೇ ಹೀಗಿರಬೇಕಾದರೆ ಇನ್ನು ಇವರ ವಾಕ್ಯಗಳು, ಪದಪುಂಜಗಳು ಹೇಗಿರಬಹುದೆಂದು ಯೋಚಿಸಿ! ನಾಲ್ಕೇ ವಾಕ್ಯದಲ್ಲಿ ಹಲವಾರು ಅನಗತ್ಯ ಪುನರುಕ್ತಿಗಳು, ಮೊದಲಿನ ಹೇಳಿಕೆಗೂ ಮುಂದಿನ ಹೇಳಿಕೆಗಳಿಗೂ ತಾರ್ಕಿಕ ಸಂಬಂಧವಿಲ್ಲದೇ ಇರುವುದು, ಅಸಮಂಜಸ ಶಬ್ದಪ್ರಯೋಗ, ಹೀಗೆ ಹಲವಾರು ದೋಷಗಳು!

ಇದು ನಿತ್ಯವೂ ಜೀವನದಲ್ಲಿ ಕಂಗ್ಲಿಷ್ ಬಳಸಿ ಕನ್ನಡವನ್ನು ದುರ್ಗತಿಗೆ ತಳ್ಳುತ್ತಿರುವ ಕನ್ನಡ ಮಾತೆಯ 'ಶ್ರೇಷ್ಠಕುಲಪುತ್ರರ' ಕನ್ನಡದ ಕತೆ! ''ನಾನು ಕುವೆಂಪು, ಬೇಂದ್ರೆಯಂಥಾ ಕನ್ನಡ ಶ್ರೇಷ್ಠರನ್ನು ಬಲ್ಲೆ'' ಎನ್ನುವವರು, ಭೈರಪ್ಪನವರಂಥ ಶ್ರೇಷ್ಠ ಕಾದಂಬರಿಕಾರರನ್ನು ಅಭಿಮಾನದಿಂದ ಓದುವವರು, ಮಹಾಭಾರತ ರಾಮಾಯಣಾದಿ ಕತೆಗಳನ್ನು ತಮ್ಮ ಮಾತಿನಲ್ಲಿ ಪುಂಖಾನುಪುಂಖವಾಗಿ ಶತಾಬ್ದಿ ರೈಲಿನಂತೆ ಓಡಿಸುವವರು, ತಮ್ಮನ್ನು ತಾವೇ ಬುದ್ಧಿಜೀವಿಗಳೆಂದು ಕರೆದುಕೊಂಡು ಆ ಶಬ್ದದ ಮರ್ಯಾದೆಯನ್ನು ಹಾಡುಹಗಲೇ ತೆಗೆಯುತ್ತಿರುವವರು ಕನ್ನಡಕ್ಕೆ ಕೊಡುತ್ತಿರುವ ಮರ್ಯಾದೆ! ಕನ್ನಡದ ಜ್ಯೋತಿಯನ್ನು ಝಗ ಝಗ ಬೆಳಗಿಸುತ್ತಿರುವ ಪರಿ!

ಇನ್ನು ಅವಿದ್ಯಾವಂತರ ಅಥವಾ ಅರೆ ವಿದ್ಯಾವಂತರ ಭಾಷೆಯನ್ನು ಗಮನಿಸಿ: ಅಲ್ಲೊಂದು ಯಡವಟ್ಟು ಕಾದಿರುತ್ತದೆ: ಇಂಗ್ಲಿಷ್ ಪ್ರಭಾವ ಇವರನ್ನೂ ಬಿಟ್ಟಿಲ್ಲ, ಹಾಗಾಗಿ, ಎಡಕ್ಕ ಕಟ್ಟೊಡಿ, ರೌಂಡಕ್ಕೆಂದು ಬಂದೆ, ಬಾರಿ ಐ ಲೆವೆಲ್ ಮನಸ್ಯಾ, ಸುದ್ದೇಳಿ ಸಲುಪತ್ತು ಆಫ್ ಆಗಿಬಿಟ್ಟೆ! ಪ್ಲಾನು ಮಾಡು, ಇತ್ಯಾದಿ ಪದಗಳು ಅವರಲ್ಲೂ ನಿತ್ಯ ರೂಢಿಯಲ್ಲಿವೆ. ಅವರು ಯಾರಿಗಾದರೂ ಸಂಚಲಿತ ದೂರವಾಣಿಯಲ್ಲಿ ಮಾತಾಡುವಾಗ ಫೋನಿನ ಅಂಕೆಗಳನ್ನು ಹೇಳುವುದನ್ನು ಕೇಳಿದರೆ ನಗು ಬರುವಂತಿರುತ್ತದೆ: ''ಹ್ನ! ಬರಕಾ! ಡಬಲ್ ಒಂಬತ್ತು! ಜೀರೋ, ಎರಡೂ, ನಾಲ್ಕು, ತ್ರಿಬಲ್ ಮೂರು ಡಬಲ್ ಎರಡು!'' ಇನ್ನು ಇಂಥ ಕನ್ನಡ ರಸಿಕರು ತಮ್ಮ ಪ್ರೀತಿ, ಭಕ್ತಿ, ಕುಲ, ಕುಲದೈವ, ತತ್ವ ಇತ್ಯಾದಿ ಅಭಿವ್ಯಕ್ತಪಡಿಸುವ ಉಕ್ತಿಗಳನ್ನು ತಾವು ಓಡಿಸುವ ವಾಹನಗಳ ಮೇಲೆ ಬರೆಸಿಕೊಂಡಿರುತ್ತಾರೆ. ಅವುಗಳನ್ನು ನೋಡಿದರೆ ಪ್ರಜ್ಞಾವಂತ ಕನ್ನಡಿಗ ಮೂರ್ಛೆ ಹೋದಾನು! ಶ್ರೀ ವಿರಾಬಧ್ರ ಪ್ರಸನ್ನ! ಹುಚ್ಚೇಂಗೆಮ್ಮ ಪ್ರಸನ್! ಥಂದೆ ತಾಯಿ ಆಶೀವದ! ಶ್ರೀ ಕುರುವತ್ತಿ ಬಸಯೇಸ್ವರ ಪ್ರಸನ್ನ! ಅವಸರವೇ ಅಪಗತಕ್ಕೆ ಕರಾಣ! ಸಧರ್ಮ ಇತ್ಯಾದಿ ನೂರಾರು! ಇನ್ನು ಸಾಕ್ಷರ ಶಾಲೆಯಲ್ಲಿ ಅ ಆ ಇ ಈ ಕಲಿತವರು ಚಾರು ಚೂರು ಬರೆದರೆ ಅವರೂ ಕನ್ನಡ ತಾಯಿಯ ಕೈ ಕಾಲು ತಿರುವಿಡದೇ ಬಿಡರು! ಶಿವ ಬೆಂಕು! ಟಂಬಸಪ್ಪ! ಅರತಿ ಕೋಟಿ ಲಕ್ಕಸ್ಸವ್ವ! ಭನಪ್ಪ! ಇತ್ಯಾದಿ! ಆದರೆ ಸ್ನಾತಕ ಸ್ನಾತಕೋತ್ತರ ಹಾಗೂ ಡಾಕ್ಟರೇಟ್ ಪದವೀಧರರ ತಪ್ಪುಗಳ ಮುಂದೆ ಇವರದೇನು ಲೆಕ್ಕ?

ನನ್ನ ಈ ಟೀಕೆಗೆ ಕೆಲವರು ಹೀಗೆ ಸಮಜಾಯಿಷಿ ಗುದ್ದಬಲ್ಲರು: ನಿತ್ಯ ವ್ಯಾವಹಾರಿಕ ಜೀವನದಲ್ಲಿ ಅಷ್ಟು ದೋಷ ಇದ್ದದ್ದೇ! ನಮ್ಮ ಜನ ಬರೆದ ಪುಸ್ತಕಗಳಲ್ಲಿ, ಮಾಡುವ ಭಾಷಣಗಳಲ್ಲಿ ಶುದ್ಧಕನ್ನಡ ಇದೆಯಲ್ಲ! ಈ ಸಮಜಾಯಿಷಿ ಸಮಂಜಸವಲ್ಲ! ಅದಲ್ಲದೇ, ಕನ್ನಡ ಭಾಷೆ, ಹಾಗೆಯೇ ಜನಪದ ಸಂಸ್ಕೃತಿಯೂ ಕೂಡ, ಉಳಿದು ಬೆಳೆಯಬೇಕಾಗಿರುವುದು ನಿತ್ಯ ಬದುಕು-ವ್ಯವಹಾರದಲ್ಲಿಯೇ ಹೊರತು, ಗ್ರಂಥಗಳಲ್ಲಿ ಅಥವಾ ಕೇವಲ ಭಾಷಣಗಳಲ್ಲಿ ಅಲ್ಲ! ಗ್ರಾಂಥಿಕ ಭಾಷೆಯು ವಸ್ತುಸಂಗ್ರಹಾಲಯದ ಪ್ರದರ್ಶನ ಕಪಾಟಿನೊಳಗಿನ ಒಂದು ವಸ್ತುವಿನಂತೆ! ನಿತ್ಯ ಬದುಕು ಮತ್ತು ವ್ಯವಹಾರದ ಭಾಷೆಯೇ ಎಲ್ಲ ಸಾಹಿತ್ಯ ಶಾಸ್ತ್ರಾದಿಗಳಿಗೆ ಆಧಾರಭೂತವಾದುದು! ಈ ಭಾಷೆಗಿರುವ ಸರ್ವವ್ಯಾಪಕತ್ವ, ಸಾರ್ವತ್ರಿಕತ್ವ, ಶೀಘ್ರಮನನತ್ವ, ಸಂಚಲನತ್ವ, ಸ್ಪಂದನತ್ವ, ಇನ್ನೂ ಮೊದಲಾದ ಗುಣಗಳು ಗ್ರಾಂಥಿಕ ಭಾಷೆಗಿರುವುದಿಲ್ಲ. ನಿತ್ಯ ವ್ಯವಹಾರದ ಭಾಷೆ ಆ ತನ್ನ ಎಲ್ಲ ಗುಣಗಳಿಂದಾಗಿಯೇ ಆಯಾ ಕಾಲದಲ್ಲಿ ಒಂದು 'ಭಾಷಿಕಪರಿಸರ'ವಾಗಿ ನಿಲ್ಲಬಲ್ಲದು. ಈ 'ಭಾಷಿಕಪರಿಸರವೇ' ವ್ಯಕ್ತಿಯೊಬ್ಬನಿಗೆ-ಅವನು ಮಾತೃ ಭಾಷಿಕನಿರಲಿ, ಅನ್ಯಭಾಷಿಕನಿರಲಿ, ವಿದ್ಯಾವಂತನಿರಲಿ, ಅವಿದ್ಯಾವಂತನಿರಲಿ - ಒಂದು ಭಾಷಾಜ್ಞಾನದ ಸೆಲೆಯಾಗಿ ನಿಂತು ಅವನ ಭಾಷಿಕ ಜ್ಞಾನವನ್ನು ಹೆಚ್ಚಿಸಬಲ್ಲದು. ಆದರೆ, ಗ್ರಾಂಥಿಕ ಭಾಷೆಯು ಕೇವಲ ವಿದ್ಯಾವಂತನ 'ಗೌರವ -ಒಡನಾಡಿ' ಮಾತ್ರ. ಸಿನಿಮಾ -ನಾಟಕಗಳಲ್ಲಿ ಹೇಗೆ 'ಗೌರವ ನಟರು' ಯಾವುದೋ ಒಂದು ಕ್ಷಣ ಹಾಗೆ ಬಂದು ಹೀಗೆ ಹೋಗುವಂತೆ, ಒಬ್ಬನ ಓದಿನ ಕಾಲದಲ್ಲಿ ಅವನ ಅಂತರಂಗ ಪ್ರವೇಶಿಸಿ ಹೋಗಿಬಿಡುವ ಭಾಷೆ ಗ್ರಾಂಥಿಕ ಭಾಷೆ. ಆದರೆ ನಿತ್ಯ ವ್ಯಾವಹಾರಿಕ ಭಾಷೆ ತಾಯಿಯ ಎದೆ ಹಾಲಿನಂತೆ! ಕೇಳುವವನಿಗೆ ಇಷ್ಟ ಇದೆಯೋ ಇಲ್ಲವೋ ತಿಳಿಯದು! ಆದರೆ ಆ ಭಾಷೆ ಎಲ್ಲಾ ಜನರ ಮೇಲೆ ಸಮುದ್ರದ ಅಲೆಯಂತೆ ನಿತ್ಯವೂ ಅಪ್ಪಳಿಸಿ, ಗಾಳಿಯಂತೆ ನಿತ್ಯವೂ ಬೀಸಿ, ಅವನ ಬುದ್ಧಿ ಮನಸ್ಸುಗಳನ್ನು ಆರ್ದ್ರಗೊಳಿಸುತ್ತದೆ. ಪ್ರತಿಯೊಂದು ಮಾತೃಭಾಷೆಯ ಜ್ಞಾನ ವ್ಯಕ್ತಿಯೊಬ್ಬನಿಗೆ ದಕ್ಕುವುದು ಬೇರೊಬ್ಬರು ಆಡಿದ್ದನ್ನು 'ಕೇಳುವ' ಮೂಲಕ. ಮಗುವಿಗೆ ತಾಯಿ ಮೊದಲುಗೊಂಡು ಅದರ ಸುತ್ತಲಿನ ಎಲ್ಲಾ ಜನರೂ, ಅದು ಅರ್ಥ ಮಾಡಿಕೊಳ್ಳುತ್ತದೆಯೋ ಇಲ್ಲವೋ ಎಂಬುದನ್ನು ಯೋಚಿಸದೆಯೇ, ಅದರೊಂದಿಗೆ ಸಂವಾದಿಸುತ್ತಾರೆ. ಒಬ್ಬೊಬ್ಬರದೂ ಒಂದೊಂದು ಶೈಲಿ, ಒಂದೊಂದು ವೈಶಿಷ್ಟ್ಯತೆ! ಪ್ರತಿಯೊಬ್ಬರೂ ಭಾಷೆಯ ಮೂಲಕ ವ್ಯಕ್ತಪಡಿಸುವ ಅನುಭವಗಳು, ವಿಭಿನ್ನ ಭಾವನೆಗಳು, ಮನೋಧರ್ಮ, ದೃಷ್ಟಿ-ಧೋರಣೆಗಳು, ಇನ್ನೊಬ್ಬರ ಭಾಷಿಕ ಜ್ಞಾನವನ್ನು ಹೆಚ್ಚಿಸುವುದರ ಮೂಲಕ ಅವನ ಒಟ್ಟು ಅಂತರಂಗದ ವಿಕಾಸವನ್ನು ಹೆಚ್ಚಿಸುತ್ತವೆ.

ಈ ದೃಷ್ಟಿಯಿಂದ ಯಾವುದೇ ಭಾಷೆ ಬದುಕಿ ಬೆಳೆಯಬೇಕಾದುದು ಮೊದಲು ನಿತ್ಯ ಜೀವನದಲ್ಲಿ. ನಮ್ಮ ಜನ ಕನ್ನಡವನ್ನು ತಮ್ಮ ನಿತ್ಯ ಬದುಕಿನಲ್ಲಿ ಎಷ್ಟು ಶುದ್ಧವಾಗಿ, ಸಮರ್ಥವಾಗಿ, ಸಮರ್ಪಕವಾಗಿ, ಲೀಲಾಜಾಲವಾಗಿ, ಹೇರಳವಾಗಿ ಉಪಯೋಗಿಸುತ್ತಿದ್ದಾರೆಂಬುದು ಅವರು ಎಷ್ಟರಮಟ್ಟಿಗೆ ಕನ್ನಡದಲ್ಲಿ ಗ್ರಂಥ-ಲೇಖನ ಇತ್ಯಾದಿ ಬರೆಯುತ್ತಾರೆಂಬುದಕ್ಕಿಂತ ಬಹಳ ಮುಖ್ಯ. ಆದರೆ, ಈಗಾಗಿರುವುದು, ಜನಪದ ಸಂಸ್ಕೃತಿ ಹೇಗೋ ಹಾಗೆಯೇ, ಕನ್ನಡ ಭಾಷೆಯು ನಿತ್ಯ ಜೀವನರಂಗದಲ್ಲಿ ಗಬ್ಬೆದ್ದು ಹೋಗಿ, ಕೇವಲ ಪುಸ್ತಕಗಳಲ್ಲಿ ಉಸಿರಾಡುತ್ತಾ ಬಿದ್ದಿರುವಂತಾಗಿದೆ. ಕನ್ನಡ ಭಾಷೆ ಒಂದು ಘಂಟೆಯ ಉಪನ್ಯಾಸ-ಪ್ರವಚನಗಳಲ್ಲಿಯೋ, ಪುಸ್ತಕಗಳಲ್ಲಿಯೋ ಉಳಿದರೆ ಸಾಲದು!

ಕನ್ನಡದ ಇಂತಪ್ಪ ದುರ್ಗತಿಗೆ ಏನು ಕಾರಣ? ಕನ್ನಡವನ್ನು ಉಳಿಸುವ ದಾರಿಗಳಾವುವು?

ಕನ್ನಡದ ದುರ್ಗತಿಗೆ ವಿಶ್ವಮಟ್ಟದ ಬೆಳವಣಿಗೆಗಳು ಕಾರಣವಾಗಿವೆ. ವಿಜ್ಞಾನ-ತಂತ್ರಜ್ಞಾನ-ತತ್ವಜ್ಞಾನಗಳ ಆವಿಷ್ಕಾರ, ಹೊಸ ಶಿಕ್ಷಣ, ವಸಾಹತುಶಾಹಿಯುಗ ಇತ್ಯಾದಿ ಇಂಗ್ಲಿಷ್ ಪರವಾಗಿರುವ ವಿದ್ಯಮಾನಗಳು ಈಗಲೂ ಸತ್ವಯುತವಾಗಿದ್ದು ಕನ್ನಡ ಭಾಷೆ ಉಳಿದು ಬೆಳೆಯಬೇಕಿದ್ದ ಸನ್ನಿವೇಶಗಳನ್ನು-ಭೌತಿಕ ಪರಿಸ್ಥಿತಿಗಳನ್ನು ಇಲ್ಲವಾಗಿಸಿವೆ! 'ಕನ್ನಡಲೋಕ' ಅಚ್ಚ ಜನಪದೀಯ ಬದುಕಿಂದ ದೂರವಾಗಿದೆ. ನಾವಿಂದು 'ನವವಸಾಹತುಶಾಹಿ' ಯುಗದಲ್ಲಿದ್ದೇವೆ! ಭಾರತ ಇಂದು ಅಂತರರಾಷ್ಟ್ರೀಯ ಮಟ್ಟದಲ್ಲಿ ವಿಜ್ಞಾನ, ತಂತ್ರಜ್ಞಾನ, ಕೈಗಾರಿಕೆ, ಆರ್ಥಿಕ ವಿಷಯಗಳಲ್ಲಿ ವಿಶ್ವದಿಗ್ಗಜರೊಂದಿಗೆ ಸೆಣಸಾಟಕ್ಕಿಳಿದಿದೆ. ಹಾಗಾಗಿ, ಕನ್ನಡಕ್ಕೆ ಸಹಜವಾಗಿ ತನ್ನ ಮೂಲಸತ್ವ ಹಾಗೂ ತಾಜಾತನ-ಪರಿಶುದ್ಧತೆಯನ್ನು ಉಳಿಸಿಕೊಂಡು ಹೋಗುವುದು ಕಷ್ಟವಾಗಿದೆ. ಹೀಗಿದ್ದಾಗ್ಯೂ ಕನ್ನಡವನ್ನು ಉಳಿಸಲೇಬೇಕಾದ-ಬೆಳೆಸಲೇಬೇಕಾದ ಗುರುತರ ಜವಾಬ್ದಾರಿ ಕನ್ನಡಿಗರ ಮೇಲಿದೆ. ಕನ್ನಡವು ಅದರ ತಾಜಾತನದಲ್ಲಿ ಉಳಿದು ಬೆಳೆಯಬೇಕಾದರೆ ಅದಕ್ಕೆ ಪೂರಕವಾದ ಭೌತಿಕ ಪರಿಸ್ಥಿತಿಗಳಿರಬೇಕೆಂಬುದು ನಿಜವಿದ್ದರೂ ಅವುಗಳನ್ನಿಂದು ಪುನಃ ಸೃಷ್ಟಿಸಲು

## ಸುಂದರ ಬದುಕು

ಜೇನಿನಾ ಗೂಡು
ಧ್ಯಾನದಾ ಸಂಕೇತ,
ಗುಬ್ಬಿಯ ಗೂಡು
ಸರಳತೆಯ ಸಂಕೇತ,
ಗೀಜಗನ ಗೂಡು
ಕಲಾತ್ಮಕತೆಯ ಸಂಕೇತ,
ಧ್ಯಾನ, ಸರಳತೆ, ಕಲಾತ್ಮಕತೆ
ಸುಂದರ ಬದುಕಿನ ಸಂಕೇತ.

**ಶಂಕರಗೌಡ ಸಾತ್ಮಾರ**
ನಂ. ೩೨, ಡಾ|| ರಾಧಾಕೃಷ್ಣನ್ ನಗರ
ಗೋಕುಲ ರಸ್ತೆ ಹುಬ್ಬಳ್ಳಿ -೩೦

ಸಾಧ್ಯವಿಲ್ಲ, ಯುಗವನ್ನು ಹಿಂದಕ್ಕೆ ಉರುಳಿಸಲು ಸಾಧ್ಯವಿಲ್ಲ! ಹಳ್ಳಿಯಿಂದ ಹಿಡಿದು ದಿಲ್ಲಿಯವರೆಗೆ, ವ್ಯಕ್ತಿಯ ವೈಯಕ್ತಿಕ ಬದುಕಿನಿಂದ ಹಿಡಿದು ಸಾಂಸ್ಥಿಕ ಜೀವನದವರೆಗೆ, ಅಖಂಡ ಬದುಕನ್ನು ವ್ಯಾಪಿಸಿರುವ 'ಇಂಗ್ಲಿಷ್ ಪರವಾದ ಗಾಳಿ'ಯನ್ನು ಇಲ್ಲವಾಗಿಸಲು ಸಾಧ್ಯವಿಲ್ಲ, ಆದಾಗ್ಯೂ, ಕನ್ನಡದ ಪರಿಶುದ್ಧತೆಯನ್ನು ಕಾಪಾಡುವುದು ಸಾಧ್ಯವಿದೆ. ವಿದ್ಯಾವಂತರು ಪ್ರಜ್ಞಾಪೂರ್ವಕ ಪ್ರಯತ್ನದಿಂದ ತಮ್ಮ ದೈನಂದಿನ ಬದುಕಿನಲ್ಲಿ ಇಂಗ್ಲಿಷ್ ಪದಗಳನ್ನು ಬಳಸುವುದನ್ನು ನಿಲ್ಲಿಸಬೇಕು. ಇಂಗ್ಲಿಷ್ ಬಳಸಿದರಷ್ಟೇ ನಾನೊಬ್ಬ ವಿದ್ಯಾವಂತ-ನಾಗಕರಿಕ ಎಂದು ಸಮಾಜದಲ್ಲಿ ಗುರುತಿಸಿಕೊಳ್ಳಲು ಸಾಧ್ಯ ಎಂಬ ತಪ್ಪು ಕಲ್ಪನೆಯೇ ಅವರನ್ನು ಕಂಗ್ಲಿಷರನ್ನಾಗಿಸಿದೆ. ಇದನ್ನು ತೊರೆದು ಶುದ್ಧ ಕನ್ನಡವನ್ನು ಬಳಸುವುದನ್ನು ರೂಢಿಸಿಕೊಳ್ಳಬೇಕು. ಇಂಗ್ಲಿಷಿಗೆ ಪರ್ಯಾಯವಾದ ಕನ್ನಡ ಶಬ್ದಗಳಿಲ್ಲದಾಗ ಮಾತ್ರ ಇಂಗ್ಲಿಷ್ ಪದಗಳನ್ನು ಬಳಸುವುದು ತಪ್ಪಲ್ಲ, ಹಾಗೆಯೇ, ಸಂಪೂರ್ಣವಾಗಿ ಇಂಗ್ಲಿಷನ್ನು ಬಳಸುವ ಸನ್ನಿವೇಶದಲ್ಲಿ ಇಂಗ್ಲಿಷನ್ನು ಬಳಸುವುದೂ ತಪ್ಪಲ್ಲ! ಆದರೆ ಇವೆರಡೂ ಸಾಧ್ಯವಾಗದ ಸ್ಥಿತಿಯಲ್ಲಿ ಸಿಲುಕಿಕೊಂಡಿರುವ ಕಂಗ್ಲೀಷರು ಈ ಎರಡೂ ಭಾಷೆಗಳಿಗೂ ಗಂಡಾಂತರ ತರುವ ರೀತಿಯಲ್ಲಿ ಬದುಕುತ್ತಿರುವುದು ಟೀಕಾರ್ಹ!

ನನ್ನ ಪ್ರಕಾರ ಕನ್ನಡದ ಶುದ್ಧತೆ ಎರಡು ವರ್ಗಗಳಲ್ಲಿ ಉಳಿದಿದೆ: ಒಂದು, ಹಳ್ಳಿಯಲ್ಲಿ ಕೃಷಿಕ-ಕೃಷಿಕಾರ್ಮಿಕ ಜೀವನ ನಡೆಸುತ್ತಿರುವ ಸಂಪೂರ್ಣ ಅಶಿಕ್ಷಿತರಲ್ಲಿ; ಎರಡು, ಕನ್ನಡವನ್ನು ಪ್ರಜ್ಞಾವಂತಿಕೆಯಿಂದ ಬಳಸುತ್ತಿರುವ ವಿದ್ಯಾವಂತರಲ್ಲಿ-ಬುದ್ಧಿಜೀವಿಗಳಲ್ಲಿ. ಈ ಎರಡನೇ ವರ್ಗದ್ದು ಹೆಚ್ಚೂ ಕಮ್ಮಿ ಗ್ರಾಂಥಿಕ ಭಾಷೆ-ಶಿಷ್ಟ ಭಾಷೆ. ಈ ಕನ್ನಡವೇ ಸತ್ವಯುತವಾದ ಕನ್ನಡ ಎಂಬ ವಾದ ಸರಿಯೆನ್ನಿಸದು. ಕನ್ನಡ ಪಂಡಿತರಲ್ಲದ ಹಳ್ಳಿಯ ಮುಗ್ಧರ ಭಾಷೆ ಇವರಿಗಿಂತಲೂ ಸತ್ವಯುತವಾದ ಭಾಷೆ. ಅವರ ಬಾಯಲ್ಲಿ ಬರುವ ಎಷ್ಟೋ ನುಡಿಗಟ್ಟುಗಳು, ಶಬ್ದಗಳು, ವ್ಯಂಗ್ಯೋಕ್ತಿಗಳು, ನಮ್ಮ ಶಿಕ್ಷಿತರಿಗೆ ಅರ್ಥವಾಗುವುದೇ ಇಲ್ಲ. ಒಟ್ಟು ಜನಪದ ಬದುಕು-ಸಂಸ್ಕೃತಿಯನ್ನು ಗ್ರಂಥಸ್ಥಗೊಳಿಸಿ, ಅದನ್ನು ವಿಶ್ವವಿದ್ಯಾಲಯಗಳ ಗ್ರಂಥಾಲಯಗಳಲ್ಲಿ 'ಲಯವಾಗುವ' ಸ್ಥಿತಿಯಲ್ಲಿರಿಸಿ ಕೈ ತೊಳೆದುಕೊಂಡ ಶಿಕ್ಷಿತ ವರ್ಗ ಕನ್ನಡದ ನೈಜಸತ್ವದ ಸೆಲೆಯುಳ್ಳ ಸಮಾಜದಿಂದ ತಮ್ಮನ್ನು ಭೌತಿಕವಾಗಿಯೂ ಮಾನಸಿಕವಾಗಿಯೂ ದೂರವಿರಿಸಿಕೊಂಡಿರುವುದು ದುರದೃಷ್ಟಕರ! ಈ ಕಾರಣಕ್ಕಾಗಿಯೇ ಬಹುಪಾಲು ಶಿಕ್ಷಿತರಿಗೆ ಭಾಷಾಸತ್ವ ಲಭ್ಯವಾಗಿಲ್ಲ! ಕನ್ನಡ ಭಾಷೆಯ ವಿಭಿನ್ನ ಆಯಾಮಗಳು ಇವರಿಗೆ ಕರಗತವಾಗುವುದು ಕಷ್ಟ! ಈ ಶಿಕ್ಷಿತರಲ್ಲಿ ಎಷ್ಟು ಜನರಿಗೆ ರೈತರ 'ಇಚ್ಚಾಲು-ವಚ್ಚಾಲು, ಕಡದು ಬಳದು, ಬಳಗ ಹೊಗೀತು, ಕೊಳ್ಳ ಹರಿ' ಇತ್ಯಾದಿ ಶಬ್ದಗಳು ಗೊತ್ತು? 'ಅಡ್ಡ ಉಗುಲು ಸೊಟ್ಟ ಬೆಣಿ' 'ಹಳೇ ಅಂಗಿ ಮೊಳೆ ಪಾಲು ಮುದುಕನ ಹೇಣ್ತಿ ಹುಡುಗರ ಪಾಲು' ಎಂಬಿತ್ಯಾದಿ ನುಡಿಗಟ್ಟುಗಳು ಗೊತ್ತು? 'ಬೆಡ್‌ಶೀಟ್' ಎನ್ನುವ ಬದಲು ಹಚ್ಚಡ-ಪಚ್ಚಡ-ದುಪಟ (ದುಪ್ಪಡಿ) ಎಂದು ಇವರು ಅಪ್ಪೀ ತಪ್ಪೀ ಅಂದಾರೆಯೇ? ಕಾಂಪೌಂಡ್ ಎನ್ನುವ ಬದಲು ಪೌಳಿ ಎಂದಾರೆಯೇ? ಛಲೋ ಐತಿ/ಚನ್ನಾಗೈತಿ/ಪಾಡೈತಿ/ಬೇಸೈತಿ/ವೈನಾಗೈತಿ ಎಂಬಿತ್ಯಾದಿ ಶಬ್ದಗಳಿಗೆ ಬದಲು 'ವೆರಿ ನೈಸ್!, ಗುಡ್!' ಇತ್ಯಾದಿ ಇಂಗ್ಲಿಷ್ ಗೂಟಗಳೇ ಪ್ರಚಲಿತ!

ಆದರೆ ನಮ್ಮ ಹಳ್ಳಿಯ ನಿರಕ್ಷರಕುಕ್ಷಿಗಳ ಭಾಷೆ ಹೀಗಲ್ಲ! ಅವರು ಉಪಯೋಗಿಸುವ ಕನ್ನಡವು ನೀರಸ-ಜಡ ಭಾಷೆಯಲ್ಲ! ಅವರ ಮಾತುಗಳು ಅರ್ಥಪೂರ್ಣವಾಗಿರುವುದಲ್ಲದೆ, ಭಾವಪೂರ್ಣವಾಗಿಯೂ ಇರುತ್ತವೆ! ಕಟಕಿ, ವ್ಯಂಗ್ಯ, ಹಾಸ್ಯ-ವಿನೋದ, ಹರಿತತೆ, ಉಪಮೆ-ಹೋಲಿಕೆ ಮುಂತಾದವುಗಳಿಂದ ಅವರ ಭಾಷಾ ಸತ್ವ-ಸೌಂದರ್ಯಗಳೆರಡೂ ವಿದ್ಯಾವಂತರ ಭಾಷೆಗಿಂತ ಅತ್ಯುತ್ತಮವಾಗಿರುತ್ತವೆ. ವಿದ್ಯಾವಂತನೊಬ್ಬ ಯಾರಾದರೂ ತನ್ನನ್ನು ಏನನ್ನಾದರೂ ಕೇಳಿದಾಗ ಆ ವಸ್ತು ತನ್ನ ಬಳಿ ಇಲ್ಲದಿದ್ದರೆ ಕೇವಲ 'ಅಯ್ಯಯ್ಯೋ ಇಲ್ವಲ್ಲ/ಇಲ್ಲ ಮಾರಾಯ್ರೇ ಎಂತ ಮಾಡೋದು' ಎಂದಷ್ಟೇ ಹೇಳಬಹುದು! ಆದರೆ ಅದೇ ಒಬ್ಬ ಹಳ್ಳಿಹೈದ ಉತ್ತರಿಸುವ ಪರಿ ಬೇರೆ: ಒಬ್ಬ ಕುರುಬ ಅಡವಿಯಲ್ಲಿ ಅಕಸ್ಮಾತ್ ಬೀಡಿ ಪೊಟ್ಟಣ ಕಳೆದುಕೊಂಡ! ಭಾಳ ಚಟ ಬಂದಿತ್ತು! ದಾರಿಬದಿಯಲ್ಲಿ ತಾಸುಗಟ್ಟಲೇ ಕೂತು ಕಾಯುತ್ತಿದ್ದ-ಯಾರಾದ್ರೂ ಬಂದಾರೆಂದು. ಅಂದುಕೊಂಡಂತೆಯೇ ಅಲ್ಲೊಬ್ಬ ಬಂದದ್ದು ನೋಡಿ ಖುಷಿಯಾಗಿ, ''ಯಣ್ಣಾ ದೇವ್ರ ಬಂದಾಂಗ ಬಂದೆ ನೋಡು! ಕಲ್ಲಿ ಬಕ್ಕಣ ತೂತು ಬಿದ್ದು ಬೀಡಿ ಪಟ್ನ ನಿಗಿಲಿಟ್ಟೆನಾ! ಇತ್ಲಾಗ ಒಂದು ಬೀಡಿ ಹ್ವಗೀಲ್ಲಿ! ಬಾಯಿ ತಟಗುಟ್ಟಾಕ ಹತ್ತ್ಯಾತಿ!'' ಅಂದ! ಅದಕ್ಕ ಅವ್ನ ಉತ್ತರ ಹೀಂಗ: ''ಹೋಗ್ಗೋ ನಿನಪ್ಪನಾ! ಅದೇನೋ ಅಂತಾರಲ್ಲ, ಹನುಮಪ್ಪ ಹಗ್ಗಾ ತಿನ್ನಬಕಾದ್ರ ಪೂಜಾರಪ್ಪ ಸ್ಯಾವಿಗ್ಗೀ ಬೇಡಿದ್ದನಂತ! ಹಂಗಾತು ನೋಡೀಗ! ನೀನೂ ಕಲ್ಲೀ ಬಕ್ಕಣದಾಗಿನ ಬೀಡಿ ಉದ್ರಿಸಿಗೆಂಡೀ, ನಾನೂ ಖಬ್ರಗೇಡಿ, ನೂರ್ರೂಪಾಯಿ ರೊಕ್ಕಾನೆಲ್ಲ ನಿಗಿಲಿಟ್ಟು ಮನೀಗೆ ಹೊಂಟೀನಿ ನೋಡು! ಕಣ್ಣು ಮುಚ್ಚಿ ಕಣ್ಣ ತಗೀಯಾದ್ರಾಗ ಹದ್ದು ಹಾರಿಬಡಕಂಡು ಹೋದಂಗಾತು!'' ಇನ್ನೊಂದು ಪ್ರಸಂಗ: ಮುದುಕಿಯೊಬ್ಬಳಿಗೆ ಯಾರೋ ಒಬ್ಬರು ಹಾಲನ್ನೋ ಮೊಸರನ್ನೋ ಕೊಡಲಿಲ್ಲ ಎಂದಿಟ್ಟುಕೊಳ್ಳಿ! ಕೇಳಿದವರಿಗೆ ಆ ಮುದುಕಿ ಹೇಳೋ ಉತ್ತರ: ''ಹ್ಲ! ಬಿಡಾ ತಾಯಿ! ಮೂಗಿನ್ಯಾಗಿನ ಮುಸ್ರೀ ಕೊಡ್ರೋಳು ಮೂಲಂಗೀ ಪಚಡೀ ಕೋಡ್ತಾಳೇನೇ?'' – ಹೀಗೆ ಇಂತಹ ಸಾವಿರಾರು ನುಡಿಗಟ್ಟುಗಳನ್ನು, ಒಗಟು, ಗಾದೆ, ವ್ಯಂಗ್ಯೋಕ್ತಿಗಳನ್ನು, ಕತೆ-ಉಪಕತೆಗಳನ್ನು, ಪೌರಾಣಿಕ ಪ್ರಸಂಗಗಳನ್ನು ತಮ್ಮ ನಿತ್ಯ ಜೀವನದ ಸಂದರ್ಭದಲ್ಲಿ, ಮಾತುಗಳಲ್ಲಿ ಅರ್ಥವತ್ತಾಗಿ ಹೆಣೆದು ಮಾತಾಡುವ ಅಶಿಕ್ಷಿತರ ಕನ್ನಡಕ್ಕೆ ಶಿಕ್ಷಿತರ ಕನ್ನಡ ಸಾಟಿಯಾಗದು! ಎಲ್ಲಿಯವರೆಗೆ ಶಿಕ್ಷಿತ ವರ್ಗ ಇಂತಹ ಜನರಿಂದ ಒಂದು ದೂರವನ್ನು ಕಾಯ್ದಿರಿಸಿಕೊಳ್ಳುತ್ತದೋ, ಅವರ ಭಾಷೆಯ ಬಗ್ಗೆ ಅನವಶ್ಯಕ ಮಡಿವಂತಿಕೆ ತೋರಿ, ಶುದ್ಧ ಕನ್ನಡ ಶಬ್ದಕ್ಕಿಂತ ಇಂಗ್ಲಿಷ್ ಶಬ್ದವೇ ತನ್ನ ಕಿಮ್ಮತ್ತನ್ನು ಹೆಚ್ಚಿಸುತ್ತದೆಂದು ಭಾವಿಸಿ ಇಂಗ್ಲಿಷಿಗೆ ಪ್ರಾಧಾನ್ಯತೆ ಕೊಡುವರೋ ಅಲ್ಲಿಯವರೆಗೆ ಆ ಗ್ರಾಮೀಣರ ಕನ್ನಡತನ ಇವರಿಗೆ ದಕ್ಕುವುದಿಲ್ಲ! ಕನ್ನಡಕ್ಕೆ ಉಳಿಗಾಲವಿಲ್ಲ! ವಿದ್ಯಾವಂತರು ಪ್ರಜ್ಞಾಪೂರ್ವಕ ಪ್ರಯತ್ನದಿಂದ ಇಂಗ್ಲಿಷ್ ಪದಗಳನ್ನು ನಡುನಡುವೆ ತೇಪೆ ಹಾಕಿದಂತೆ ಹೆಣೆದು ಮಾತಾಡುವುದನ್ನು ಬಿಡದಿದ್ದಲ್ಲಿ ಕನ್ನಡಕ್ಕೆ ಉಳಿಗಾಲವಿಲ್ಲ, ಈ ಪರಿಸ್ಥಿತಿ ಹೀಗೆ ಮುಂದುವರಿದರೆ, ಹಿಂದೆ 'ವಾಟ್' ಎಂದರೆ 'ಏನು' ಎಂದು ಹೇಳಿಕೊಡುತ್ತಿದ್ದೆವು; ಇನ್ನು ಮುಂದೆ 'ಏನು' ಎಂದರೆ 'ವಾಟ್' ಎಂದು ಹೇಳಿಕೊಡಬೇಕಾದ ಪ್ರಸಂಗ ಬಂದರೆ ಆಶ್ಚರ್ಯ ಪಡಬೇಕಾಗಿಲ್ಲ!


**ಟಿ. ಬಸವರಾಜ್ ತೂಲಹಳ್ಳಿ**
ಆಂಗ್ಲಭಾಷಾ ಉಪನ್ಯಾಸಕ, ಧ.ರಾ.ಮ.ಸ.ಪ.ಪೂ. ಕಾಲೇಜು
ಹರಿಹರ, ದಾವಣಗೆರೆ ಜಿಲ್ಲೆ



**ನ**ಮ್ಮ ದೇಶವನ್ನು ಬ್ರಿಟಿಷರು ೪೦೦ ವರ್ಷಗಳ ಕಾಲ ಆಳಿದರು ಎಂಬುದು ಇತಿಹಾಸದ ಮಾತು. ಈಗಿನ ಯುವಜನಾಂಗಕ್ಕೆ ಇದನ್ನು ಅರ್ಥೈಸಿಕೊಳ್ಳುವುದು ಕಷ್ಟವೇ ಅನ್ನಿಸಬಹುದು. ಆದರೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ತೂಲಹಳ್ಳಿ ಬಳಿಯ ಹನುಮನಹಳ್ಳಿ ಗ್ರಾಮಕ್ಕೆ ಹೋದರೆ ಅಲ್ಲಿನ ಬಹುತೇಕ ಮನೆಗಳಲ್ಲಿ ಬ್ರಿಟಿಷರ ಕಾಲದ ತಿಜೋರಿಗಳು ಈಗಲೂ ಇವೆ. ಆದರೆ ಅವೆಲ್ಲ ಪಳೆಯುಳಿಕೆಗಳಂತಾಗಿ ಮೂಲೆ ಸೇರಿವೆ. ಇಷ್ಟೊಂದು ತಿಜೋರಿಗಳು ಈ ಗ್ರಾಮದಲ್ಲಿ ಹೇಗೆ ಸೇರಿದವೆಂಬುದೇ ಅಚ್ಚರಿಯ ಸಂಗತಿ. ಗ್ರಾಮಸ್ಥರಿಗೂ ಈ ಕುರಿತು ಗೊತ್ತಿಲ್ಲ. ವಿಶೇಷವೆಂದರೆ ಇವೆಲ್ಲವೂ ಗ್ರಾಮಸ್ಥರಿಗೆ ಸಮಸ್ಯೆಯಾಗಿ ಉಳಿದಿರುವುದು.

ತಾಲೂಕಿನ ತೂಲಹಳ್ಳಿ ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಸೇರಿರುವ ಹನುಮನಹಳ್ಳಿ ಕೂಡ್ಲಿಗಿ ತಾಲೂಕುಕೇಂದ್ರದಿಂದ ಸುಮಾರು ೩೫ ಕಿ.ಮೀ. ದೂರವಿದೆ. ಮೊದಲ ನೋಟಕ್ಕೇ ಕುಗ್ರಾಮದಂತೆ ಕಂಡುಬರುವ ಹನುಮನಹಳ್ಳಿಯಲ್ಲಿನ ಜನತೆ ತಮ್ಮ ಜಮೀನು, ಮನೆಯೊಂದಿಗೆ ನೆಮ್ಮದಿಯಿಂದ ಬದುಕಿದ್ದಾರೆ. ಇಲ್ಲಿ ಒಕ್ಕಲುತನ ಪ್ರಧಾನ ವೃತ್ತಿ. ಕೂಲಿ ಕೆಲಸಕ್ಕೆ ಹೋಗುವ ಬಡಕುಟುಂಬಗಳೂ ಇಲ್ಲಿವೆ. ಆದರೆ ಹಳೆಯ ಮನೆಗಳಲ್ಲಿ ಹೆಜ್ಜೆಯಿರಿಸಿದರೆ ಕಂಡುಬರುವುದು ಬ್ರಿಟಿಷರ ಕಾಲದ ಭದ್ರವಾದ ತಿಜೋರಿಗಳು. ೪-೫ ಅಡಿ ಎತ್ತರದ ಈ ತಿಜೋರಿಗಳು ಬಹುತೇಕ ಮನೆಗಳಲ್ಲಿ ಫ್ರಿಜ್‌ಗಳ ರೀತಿಯಲ್ಲಿವೆ.

ತಿಜೋರಿಗಳ ಮೇಲ್ಭಾಗದಲ್ಲಿ ಹಿತ್ತಾಳೆಯಲ್ಲಿ ಸಿದ್ಧಪಡಿಸಿದ ಬ್ರಿಟಿಷರ ರಾಜಲಾಂಛನವಿದೆ. ಮೇಲ್ಗಡೆ ಬ್ರಿಟಿಷ್ ರಾಜಮನೆತನದ ಕಿರೀಟ, ಆದರೆ ಮೇಲೆ ಸಿಂಹ, ಎರಡೂ ಬದಿಯಲ್ಲಿ ಸಿಂಹ ಮತ್ತು ಕುದುರೆ ಚಿತ್ರಗಳಿವೆ. ಚಿನ್ಹೆಯಲ್ಲಿ ಲ್ಯಾಟಿನ್ ಭಾಷೆಯ ಬರಹವಿದೆ.

# ಹನುಮನಹಳ್ಳಿಯ ಬ್ರಿಟಿಷ್ ಕಾಲದ ತಿಜೋರಿಗಳ ಕಥೆ





ವಿಶೇಷವೆಂದರೆ ಈ ತಿಜೋರಿಗಳು ಎಷ್ಟು ಭದ್ರ ಹಾಗೂ ಉಕ್ಕಿನ ಬಾಗಿಲುಗಳನ್ನು ಹೊಂದಿವೆಯೆಂದರೆ ಇವನ್ನು ಕೊಂಚ ಸರಿಸಲೂ ಸಾಧ್ಯವಿಲ್ಲ. ಟನ್‌ಗಟ್ಟಲೆ ತೂಗುವ ಈ ತಿಜೋರಿಗಳನ್ನು ಎತ್ತಿ ಕೊಂಚ ಸರಿಸಲು ಕನಿಷ್ಠ ಎಂಟು ಜನರಾದರೂ ಬೇಕು. ಅಲ್ಲದೆ ಕೆಲವು ಮನೆಗಳಿಗೆ ಹೊಸರೂಪ ನೀಡಿ ನಿರ್ಮಿಸುವಾಗ ಇವುಗಳನ್ನು ಬೇರೆಡೆ ಸಾಗಿಸಲು ಸಾಧ್ಯವಾಗದೆ ಅವುಗಳನ್ನು ಇದ್ದಲ್ಲಿಯೇ ಇರಲು ಬಿಟ್ಟಿದ್ದಾರೆ. ಮತ್ತೆ ಕೆಲವರು ಇದ್ಯಾವ ಸಮಸ್ಯೆ ಎಂದು ತಮ್ಮ ಸಂಬಂಧಿಕರಿಗೋ, ಸ್ನೇಹಿತರಿಗೋ ಕಾಣಿಕೆಯಾಗಿ ನೀಡಿ ಕೈ ತೊಳೆದುಕೊಂಡಿದ್ದಾರೆ. ಇಂದಿಗೂ ಸುಸ್ಥಿತಿಯಲ್ಲಿರುವ ಈ ತಿಜೋರಿಗಳ ಬಾಗಿಲನ್ನು ತೆರೆಯಲು ೨-೩ ಬೀಗದ ಕೈಗಳಿವೆ. ಎಲ್ಲವನ್ನೂ ಒಟ್ಟಿಗೆ ಬಳಸಿದಾಗ ಮಾತ್ರ ತಿಜೋರಿ ತೆರೆಯುತ್ತದೆ. ಬಾಗಿಲುಗಳೇ ಅಂಗೈಯಗಲ ಗಾತ್ರವನ್ನು ಹೊಂದಿವೆ. ಒಳಗಡೆ ೨-೩ ಖಾನೆಗಳಿವೆ. ಹಿಂದಿನ ಕಾಲದವರು ಹಣ, ಒಡವೆಗಳನ್ನಿರಿಸುತ್ತಿದ್ದರೋ ಏನೋ, ಈಗ ಮಾತ್ರ ಅಲ್ಲಿ ಕೆಲವು ಕಾಗದ ಪತ್ರಗಳನ್ನು ಹೊರತುಪಡಿಸಿದರೆ, ಅವು ಏನೂ ಇಲ್ಲದೆ ಖಾಲಿಯಾಗಿವೆ.

''ಯಾವಾಗಲೋ ನಮ್ಮ ಮುತ್ತಾತರ ಕಾಲದಿಂದ ತಿಜೋರಿಗಳು ಹಂಗೇ ಅದಾವ ಸರ್, ಅವನ್ನು ಮನ್ಯಾಗ ಇಟ್ಟೀವಷ್ಟೇ. ಅದರಿಂದೇನೂ ಪ್ರಯೋಜನವಿಲ್ಲ'' ಎಂದು ಆ ಗ್ರಾಮದ ಕೆ. ಚನ್ನಬಸಪ್ಪ ಹೇಳುತ್ತಾರೆ. ''ನಮ್ ದುಡಿಮೆಯಿಂದ ನಾವು ಆರಾಮದೀವಿ, ಹೊಸಾ ಮನಿ ಕಟ್ಟೇಕಂದ್ರ ಅವನ್ನ ಏನ್ಮಾಡಬೇಕೆಂಬೂದ ದೊಡ್ಡ ಸಮಸ್ಯೆ'' ಎಂದು ಬಣಕಾರ ಚನ್ನಬಸಪ್ಪ, ಮಾಗಡಿ ಹೆಗ್ಗನ ಗೌಡ್ರು ಹೇಳುತ್ತಾರೆ.

ಗ್ರಾಮದಲ್ಲೇನೋ ತಿಜೋರಿಗಳಿವೆ, ಆದರೆ ಎಲ್ಲವೂ ಖಾಲಿಯಾಗಿವೆ. ಇನ್ನೂ ವಿಚಿತ್ರವೆಂದರೆ ಇಲ್ಲಿನ ಜನತೆಗೆ ಅವು ದೊಡ್ಡ ಸಮಸ್ಯೆಯಾಗಿ ಕೂತಿವೆ.

**ಡಾ|| ಅರುಣ್ ಜೋಳದ ಕೂಡ್ಲಿಗಿ**
ಜೋಳದ ಕೂಡ್ಲಿಗಿ, ಕೂಡ್ಲಿಗಿ ತಾಲೂಕು, ಬಳ್ಳಾರಿ ಜಿಲ್ಲೆ

# ಕಲಿಕೆಯಲ್ಲಿ ಹಿಂದುಳಿದ ಮಕ್ಕಳ ಶೈಕ್ಷಣಿಕ ಸ್ಥಿತಿಗತಿ

ಶಿಕ್ಷಕರು ಮತ್ತು ಪೋಷಕರು ಮಕ್ಕಳು ಯಾವ ವಿಷಯದಲ್ಲಿ ಹಿಂದುಳಿದಿದ್ದಾರೆ ಎಂಬುದನ್ನು ಗುರುತಿಸಿ ಪ್ರತಿಭಾವಂತ ಮಕ್ಕಳು ಕಲಿಯುವ ರೀತಿಯನ್ನು ಕಲಿಕೆಯಲ್ಲಿ ಹಿಂದುಳಿದಿರುವ ಮಕ್ಕಳ ಮುಂದೆ ಮನಮುಟ್ಟುವಂತೆ ಪ್ರಸ್ತಾಪಿಸಬೇಕು. ಆಗ ಈ ಮಕ್ಕಳಲ್ಲಿ ಕಲಿಯುವ ಹುಮ್ಮಸ್ಸು ಬೆಳೆಯುತ್ತದೆ. ಶಾಲೆಗೆ ಹೋಗುವ ಮಕ್ಕಳನ್ನು, ಮನೆಯ ಕಷ್ಟದ ಪರಿಹಾರಕ್ಕೆಂದು ದುಡಿಯಲು ಹಚ್ಚುವುದು ಸರಿಯಲ್ಲ. ಪ್ರತಿಭಾವಂತರನ್ನು ಸೃಷ್ಟಿಸುವ ಕಾರ್ಯ ಶಿಕ್ಷಕರಿಂದ ಮಾತ್ರ ಸಾಧ್ಯ. ಶಿಕ್ಷಕನು ಸಹ ಸದಾ ವಿದ್ಯಾರ್ಥಿಯಾಗಿ ನಿರಂತರ ಅಧ್ಯಯನದ ಮೂಲಕ ಹೆಚ್ಚಿನ ವಿಷಯಗಳನ್ನು ಅರಿತು ಬೋಧನೆಯಲ್ಲಿ ತೊಡಗಿಕೊಳ್ಳಬೇಕು. ಮಕ್ಕಳು ಆಕರ್ಷಿತರಾಗಿ ಕಲಿಕೆಯಲ್ಲಿ ತೊಡಗುವಂತೆ ಕಲಿಕಾ ಸಾಮಗ್ರಿಗಳನ್ನು ತಯಾರಿಸಿಕೊಂಡು ಬೋಧಿಸಿದರೆ, ಕಲಿಕೆಯು ಪರಿಣಾಮಕಾರಿಯಾಗುತ್ತದೆ.

**ಭಾಗ್ಯಮ್ಮ ಎನ್.**



ಆಧುನಿಕ ಶಿಕ್ಷಣದ ಪ್ರಮುಖ ಉದ್ದೇಶವೇ ಮಗುವಿನ ಸರ್ವತೋಮುಖ ಅಭಿವೃದ್ಧಿಯನ್ನು ಕಾಣುವುದಾಗಿದೆ. ಈ ಹಿನ್ನೆಲೆಯಲ್ಲಿ ಶಿಕ್ಷಕರು ಬೌದ್ಧಿಕ ಮಟ್ಟವನ್ನು ಮತ್ತು ವಿಭಿನ್ನ ರೀತಿಯ ಜ್ಞಾನವನ್ನು ಹೊಂದಿರಬೇಕು. ತರಗತಿಯಲ್ಲಿ ಕೆಲವರು ಅತೀ ಬುದ್ಧಿವಂತರು, ಸಾಧಾರಣ ಬುದ್ಧಿವಂತರು ಹಾಗೂ ಅಷ್ಟೇನೂ ಬುದ್ಧಿವಂತರಲ್ಲದ ವಿದ್ಯಾರ್ಥಿಗಳು ಇರುತ್ತಾರೆ. ಯಾವ ಮಕ್ಕಳು ಹೇಳಿಕೊಟ್ಟಿದ್ದನ್ನು ಪುನಃ ಹೇಳುವಲ್ಲಿ ಅಸಮರ್ಥರಾಗಿರುತ್ತಾರೆಯೋ, ಅವರು ಕಲಿಕೆಯಲ್ಲಿ ಹಿಂದುಳಿದಂತೆ. ಇದಕ್ಕೆ ಅವರ ಕೌಟುಂಬಿಕ ಪರಿಸ್ಥಿತಿಯು ಕಾರಣವಾಗಿರುತ್ತದೆ. ಅಂದರೆ ಕುಟುಂಬದಲ್ಲಿ ವಯಸ್ಸಾದವರು ಮತ್ತು ಮಕ್ಕಳ ಪೋಷಣೆಯ ಹೊಣೆಗಾರಿಕೆ ಪೋಷಕರದಾಗಿರುತ್ತದೆ. ಇವರ ಪೋಷಣೆಯ ಹಿನ್ನೆಲೆಯಲ್ಲಿ ಅವರ ಆಸಕ್ತಿ ಹಾಗೂ ನಿರಾಸಕ್ತಿಯ ಮೇಲೆ ನೇರವಾದ ಪ್ರಭಾವ ಆಗುವುದುಂಟು. ಪೋಷಕರು ವಯಸ್ಸಾದವರಾದರೆ ಮಕ್ಕಳ ವಿದ್ಯಾಭ್ಯಾಸದ ಮೇಲಿನ ಕಾಳಜಿ ಅಷ್ಟಾಗಿ ಇರುವುದಿಲ್ಲ, ಸೂಕ್ತ ಅವಧಿಯಲ್ಲಿ ವಿವಾಹವಾಗಿ ಮಕ್ಕಳನ್ನು ಹೊಂದಿರುವ ಪೋಷಕರಿಗೆ ಮಕ್ಕಳ ವಿದ್ಯಾಭ್ಯಾಸದ ಕಡೆಗೆ ಹೆಚ್ಚು ಗಮನವಿರುತ್ತದೆ. ವಯಸ್ಸಾದ ಪೋಷಕರಾದರೆ, ಮಕ್ಕಳು ಅವರ ಆರೈಕೆಯಲ್ಲಿ ತಮ್ಮ ಸಮಯವನ್ನು ವ್ಯಯ ಮಾಡುತ್ತಾರೆ. ಇದರಿಂದ ಓದಿನಲ್ಲಿ ಹಿಂದೆ ಉಳಿಯಲೂಬಹುದು.

ಮಕ್ಕಳ ಪ್ರತಿಭೆಯ ಮಟ್ಟಕ್ಕೆ ಸರಿಯಾದ ಮಾರ್ಗದರ್ಶನ ಸಿಗುತ್ತಿಲ್ಲ, ಏಕೆಂದರೆ, ಅವರ ಮನಃಸ್ಥಿತಿ, ಆಸಕ್ತಿಯನ್ನು ಅರಿಯಲು ಪೋಷಕರು ಮನಸ್ಸು ಮಾಡುತ್ತಿಲ್ಲ, ಹಳೆಯ ತಲೆಮಾರಿನ ಅವನತಿ, ಹೊಸ ತಲೆಮಾರಿನ ಗಳಿಕೆಯ ಒತ್ತಡ, ಮಕ್ಕಳನ್ನು ಅಂಕಗಳಿಕೆಗಾಗಿ ಪೋಷಕ ಮತ್ತು ಶಿಕ್ಷಕ ವರ್ಗದ ನಡುವೆ ತಮ್ಮ ಬದುಕನ್ನು ನಿರ್ಮಿಸಿಕೊಳ್ಳುವ ಅವಕಾಶ ದೊರಕುತ್ತಿಲ್ಲ. ಯಾವುದು ಸರಿ, ಯಾವುದು ತಪ್ಪು ಎಂಬುದನ್ನು ಆಯ್ಕೆ ಮಾಡಿಕೊಳ್ಳಲಾಗದ ಪರಿಸ್ಥಿತಿಯಲ್ಲಿ ಇಂದು ಮಕ್ಕಳು ಇದ್ದಾರೆ.

**ಕಲಿಕಾ ಆಸಕ್ತಿ ಕಡಿಮೆಯಾಗಲು ಕಾರಣ**

ಕೆಲವು ಮನೆಯಲ್ಲಿ ಮಕ್ಕಳಿಗೆ ಓದಲು ಸೂಕ್ತ ದೀಪದ ವ್ಯವಸ್ಥೆ, ಪ್ರತ್ಯೇಕ ಕೊಠಡಿ ಇಲ್ಲದೇ ಇರುವುದು. ಹಣಕಾಸಿನ ಕೊರತೆ ಸಾಮಾನ್ಯವಾಗಿರುವ ಕುಟುಂಬದ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಬೇಕೆಂಬ ಆಸಕ್ತಿ ಸಹಜವಾಗಿಯೇ ಕುಗ್ಗುತ್ತದೆ. ಓದುವ ಸಮಯದಲ್ಲಿ ಮಕ್ಕಳಿಗೆ ಕೆಲಸ ಹೇಳುವುದರಿಂದ ಓದಿನ ಕಡೆಗಿನ ಆಸಕ್ತಿ ಕಡಿಮೆಯಾಗಿ ಕಲಿಕೆಯ ಬಗೆಗೆ ಅಸಡ್ಡೆಯ ಭಾವನೆ ಮೂಡುತ್ತದೆ. ಇತ್ತೀಚಿಗಂತೂ ಸಮೂಹ ಮಾಧ್ಯಮಗಳು ಹಾಗೂ ಅಂತರ್ಜಾಲದ ಪ್ರಭಾವದಿಂದ ಮಕ್ಕಳಲ್ಲಿ ಓದುವ ಆಸಕ್ತಿ ಕುಂದುತ್ತಿದೆ. ಓದಿದ ವಿಷಯ ನೆನಪಿನಲ್ಲಿ ಉಳಿಯುವುದು ತೀರ ಕಡಿಮೆ. ಈ ಕಾರಣದಿಂದ ಮಕ್ಕಳು ಕಲಿಕೆಯಲ್ಲಿ ಹಿಂದುಳಿಯುವುದು ಕಂಡುಬರುತ್ತದೆ.

**ಈ ಹಿನ್ನೆಲೆಯಲ್ಲಿ ಇನ್ನೂ ಕೆಲವು ಅಂಶಗಳೆಂದರೆ :**

೧. ಹೆಚ್ಚು ಹೆಚ್ಚು ಅಂಕ ಗಳಿಸಬೇಕೆಂಬ ಒತ್ತಡ
೨. ಶೀಘ್ರವಾಗಿ ಉದ್ಯೋಗ ಪಡೆಯುವುದು
೩. ಕುಟುಂಬದಲ್ಲಿನ ಬಡತನ
೪. ಸಹಪಾಠಿಗಳ ಸಹವಾಸ
೫. ಉತ್ತಮ ಬೋಧನೆಯ ಕೊರತೆ
೬. ಉತ್ತಮ ಪಠ್ಯಗಳ ಕೊರತೆ
೭. ಮಕ್ಕಳ ಆಸಕ್ತಿಯನ್ನು ಅರಿತು ಬೋಧಿಸುವ ಶಿಕ್ಷಕರು ಇಲ್ಲದಿರುವುದು
೮. ಚಟುವಟಿಕೆ, ಚರ್ಚೆ, ಪ್ರವಾಸ ಇಲ್ಲದೆ ಒಂದೇ ಕಡೆ ನಡೆಯುತ್ತಿರುವ ನಾಲ್ಕು ಗೋಡೆಗಳ ಮಧ್ಯೆ ನಡೆಯುತ್ತಿರುವ ತರಗತಿಗಳು. ದಡ್ಡ ಎಂದು ಮಕ್ಕಳನ್ನು ಸಂಬೋಧಿಸುವುದು ಅವರ ಕಲಿಕೆಗೆ ಹಿನ್ನಡೆಯಲ್ಲಿ ಸಹಜತೆ ಮೂಡುವಂತೆ ಮಾಡುತ್ತದೆ.
೯. ಪ್ರತಿಭಾವಂತರೊಂದಿಗೆ ಬೆರೆಯದಿರುವುದು.

**ಪರಿಹಾರೋಪಾಯಗಳು**

ಸಾಮಾನ್ಯವಾಗಿ ಯಾವ ಮಕ್ಕಳೂ ದಡ್ಡರಲ್ಲ, ಆದರೆ, ಅವರ ಮನಸ್ಸು ಆಸಕ್ತಿಗಳನ್ನು ಅರಿತು ಕ್ರಿಯಾಶೀಲತೆಯಿಂದ ಕಲಿಕೆಯಲ್ಲಿ ತೊಡಗಿಸಿಕೊಳ್ಳುವಲ್ಲಿ ಶಿಕ್ಷಕ ವರ್ಗ ಮುಂದಾಗಬೇಕು. ಶಿಕ್ಷಕರಂತೆ



ಪೋಷಕರಿಗೂ ಸಹ ಮಕ್ಕಳ ವಿದ್ಯಾಭ್ಯಾಸದಲ್ಲಿ ಮಹತ್ವದ ಪಾತ್ರವಿದೆ. **ಮನೆಯೇ ಮೊದಲ ಪಾಠಶಾಲೆ, ಜನನಿಯೇ ಮೊದಲ ಗುರು.** ಆದ್ದರಿಂದ ಕುಟುಂಬದ ಸದಸ್ಯರು ಮಕ್ಕಳ ಮನಸ್ಸನ್ನು ಅರಿತು ಅವರ ಆಸಕ್ತಿಗೆ ಅನುಗುಣವಾದ ವಿಷಯದ ಆಯ್ಕೆಯ ಸ್ವಾತಂತ್ರ್ಯ ನೀಡಬೇಕು. ಹಾಗೆಯೇ ಮಕ್ಕಳನ್ನು ಪ್ರೋತ್ಸಾಹಿಸುತ್ತಾ, ಸೂಕ್ತ ಮಾರ್ಗದರ್ಶನ ನೀಡುತ್ತಾ ಮುಂದುವರಿದಿದ್ದೇ ಆದರೆ ಅವರ ಕಲಿಕೆಯಲ್ಲಿ ಯಾವ ಕೊರತೆಯೂ ಕಂಡುಬರುವುದಿಲ್ಲ. ಇಂದಿಗೂ ಮನೆಯಲ್ಲಿ ಓದಲು ಸೂಕ್ತ ದೀಪದ ವ್ಯವಸ್ಥೆ ಹಾಗೂ ಪ್ರತ್ಯೇಕ ಕೊಠಡಿ ಇಲ್ಲದಿದ್ದರೂ, ಕೂಲಿ ಕೆಲಸ ಮಾಡಿ, ಓದಿ ವಿದ್ಯಾಭ್ಯಾಸ ಮಾಡಿ ರ್‍ಯಾಂಕ್ ಪಡೆದ ಅದೆಷ್ಟೋ ಮಕ್ಕಳು ನಮ್ಮ ಕಣ್ಣೆದುರೇ ಇರುವಾಗ ಓದಿಗೆ ಯಾವುದೇ ಸಮಸ್ಯೆ ಅಡ್ಡಿ ಅನ್ನಿಸುವುದಿಲ್ಲ. ಓದಬೇಕೆಂಬ ಆಸಕ್ತಿ, ಛಲ ಇದ್ದರೆ, ಮೇಲೆ ತಿಳಿಸಿದ ಯಾವ ಸಮಸ್ಯೆ ಇದ್ದರೂ ಅದು ಶೂನ್ಯ ಎನಿಸುತ್ತದೆ.

**ಮಕ್ಕಳ ಓದಿನಲ್ಲಿ ಶಿಕ್ಷಕರ ಪ್ರೋತ್ಸಾಹ**

೧. ಶಿಕ್ಷಕರು ಅಂಕಗಳ ಆಧಾರದ ಮೇಲೆ ಮಕ್ಕಳ ಬೌದ್ಧಿಕ ಮಟ್ಟವನ್ನು ಅಳೆಯಬಾರದು, ಈ ಮನೋಭಾವನೆಯನ್ನು ಬದಲಾಯಿಸಿಕೊಂಡು ಎಲ್ಲಾ ಮಕ್ಕಳನ್ನು ಸಮಾನ ರೀತಿಯಲ್ಲಿ ನೋಡಬೇಕು.

೨. ಕಲಿಕೆಯಲ್ಲಿ ಹಿಂದುಳಿದ ಮಕ್ಕಳನ್ನು ಪಾಠದಲ್ಲಿ ತೊಡಗಿಸಿಕೊಳ್ಳಬೇಕು.

೩. ತರಗತಿಯಲ್ಲಿ ಮಕ್ಕಳು ಪಾಠವನ್ನು ಗ್ರಹಿಸದಿರುವಾಗ ಅವರಲ್ಲಿರುವ ಭಯ, ತಪ್ಪು ಉಚ್ಚಾರಣೆ. ಏಕಾಗ್ರತೆಯ ಕೊರತೆ, ವೈಕಲ್ಯತೆಯುಳ್ಳ ಮಕ್ಕಳು, ಪ್ರತಿಭಾವಂತ ಮಕ್ಕಳು ಹಾಗೂ ಕಲಿಕೆಯಲ್ಲಿ ಹಿಂದೆ ಉಳಿದ ಮಕ್ಕಳನ್ನು ಗುರುತಿಸಿ ಅವರಿಗೆ ಸೂಕ್ತ ಮಾರ್ಗದರ್ಶನ ನೀಡಬೇಕು.

೪. ಶಿಕ್ಷಕರಾದವರು ಮಕ್ಕಳೇ ತಮ್ಮನ್ನು ಅನುಸರಿಸಲಿ ಎಂದು ಬಯಸದೆ, ಅವರ ಮನಸನ್ನು ಅರಿತು ಕಲಿಕೆಯಲ್ಲಿ ತೊಡಗಿಕೊಳ್ಳಬೇಕು. ಏಕೆಂದರೆ, ಪೋಷಕರಷ್ಟೇ ಶಿಕ್ಷಕರ ಜವಾಬ್ದಾರಿಯೂ ಮಹತ್ವದ್ದಾಗಿದೆ.

೫. ಪ್ರತಿಭಾವಂತ ಮಕ್ಕಳನ್ನು ಗುರುತಿಸಿ ಜಾಣ್ಮೆಯಿಂದ ಪ್ರೋತ್ಸಾಹಿಸುತ್ತಾ ಅವರ ಸಮಸ್ಯೆಯನ್ನು ಬಗೆಹರಿಸಬೇಕು.

೬. ಪ್ರತಿಭಾವಂತ ಮಕ್ಕಳಿಗೆ ವಿಶೇಷ ತರಗತಿ, ಹೆಚ್ಚು ಹೋಂವರ್ಕ್ ಕೊಡಬೇಕು. ಏಕೆಂದರೆ, ಇವರು ಶಿಕ್ಷಕರು ನೀಡಿದ ಕೆಲಸ ಮುಗಿಸಿ ಕಾಲಹರಣ ಮಾಡುವರು.

**ಕಲಿಕೆಯಲ್ಲಿ ಹಿಂದುಳಿದ ಮಕ್ಕಳ ಬಗ್ಗೆ ಶಿಕ್ಷಕರು ಗಮನ ಹರಿಸಬೇಕಾದ ಅಂಶಗಳು**

೧. ಕಲಿಕೆಯಲ್ಲಿ ಹಿಂದುಳಿದವರನ್ನು ಗುರುತಿಸಿ ಕಾರಣ ತಿಳಿದು ಪ್ರತ್ಯೇಕ ವಿಧಾನದಲ್ಲಿ ಬೋಧಿಸುತ್ತಾ ಅವರನ್ನು ಪ್ರೀತಿ, ವಿಶ್ವಾಸ, ಸಹಾನುಭೂತಿಯಿಂದ ಕಾಣಬೇಕು.

೨. ಆಕರ್ಷಕ ಶಾಲಾ ವಾತಾವರಣ, ನವನವೀನ ಮಾದರಿಯ ಬೋಧನಾ ವಿಧಾನಗಳನ್ನು ಬಳಸಿಕೊಳ್ಳಬೇಕು.

೩. ಸಹಪಠ್ಯ ಚಟುವಟಿಕೆಯಲ್ಲಿ ಭಾಗಿಯಾಗುವಂತೆ ಪ್ರೋತ್ಸಾಹಿಸುವ ಮೂಲಕ ಬುದ್ಧಿವಂತ ಮಕ್ಕಳೊಂದಿಗೆ ತೊಡಗಿಕೊಳ್ಳುವಂತೆ ಮಾಡಬೇಕು.

೪. ಕಲಿಸುವ ವಿಷಯವು ವಿದ್ಯಾರ್ಥಿಗಳ ಆಸಕ್ತಿಗೆ ಅನುಗುಣವಾಗಿರಬೇಕು.

ಒಟ್ಟಿನಲ್ಲಿ, ಶಿಕ್ಷಕರು ಮತ್ತು ಪೋಷಕರು ಮಕ್ಕಳು ಯಾವ ವಿಷಯದಲ್ಲಿ ಹಿಂದುಳಿದಿದ್ದಾರೆ ಎಂಬುದನ್ನು ಗುರುತಿಸಿ ಪ್ರತಿಭಾವಂತ ಮಕ್ಕಳು ಕಲಿಯುವ ರೀತಿಯನ್ನು ಕಲಿಕೆಯಲ್ಲಿ ಹಿಂದುಳಿದಿರುವ ಮಕ್ಕಳ ಮುಂದೆ ಮನಮುಟ್ಟುವಂತೆ ಪ್ರಸ್ತಾಪಿಸಬೇಕು. ಆಗ ಈ ಮಕ್ಕಳಲ್ಲಿ ಕಲಿಯುವ ಹುಮ್ಮಸ್ಸು ಬೆಳೆಯುತ್ತದೆ. ಶಾಲೆಗೆ ಹೋಗುವ ಮಕ್ಕಳನ್ನು, ಮನೆಯ ಕಷ್ಟದ ಪರಿಹಾರಕ್ಕೆಂದು ದುಡಿಯಲು ಹಚ್ಚುವುದು ಸರಿಯಲ್ಲ. ಪ್ರತಿಭಾವಂತರನ್ನು ಸೃಷ್ಟಿಸುವ ಕಾರ್ಯ ಶಿಕ್ಷಕರಿಂದ ಮಾತ್ರ ಸಾಧ್ಯ. ಶಿಕ್ಷಕನು ಸಹ ಸದಾ ವಿದ್ಯಾರ್ಥಿಯಾಗಿ ನಿರಂತರ ಅಧ್ಯಯನದ ಮೂಲಕ ಹೆಚ್ಚಿನ ವಿಷಯಗಳನ್ನು ಅರಿತು ಬೋಧನೆಯಲ್ಲಿ ತೊಡಗಿಕೊಳ್ಳಬೇಕು. ಮಕ್ಕಳು ಆಕರ್ಷಿತರಾಗಿ ಕಲಿಕೆಯಲ್ಲಿ ತೊಡಗುವಂತೆ ಕಲಿಕಾ ಸಾಮಗ್ರಿಗಳನ್ನು ತಯಾರಿಸಿಕೊಂಡು ಬೋಧಿಸಿದರೆ, ಕಲಿಕೆಯು ಪರಿಣಾಮಕಾರಿ ಯಾಗುತ್ತದೆ. ವಿದ್ಯಾಭ್ಯಾಸ ಮಾಡುವುದರಿಂದ ಆಗುವ ಲಾಭವನ್ನು ಮಾದರಿಗಳು, ನಿದರ್ಶನಗಳ ಮೂಲಕ ವಿವರಿಸಿ ವಿದ್ಯಾರ್ಥಿಗಳಿಗೆ ಕಲಿಯುವ ಆಸಕ್ತಿ, ಹುಮ್ಮಸ್ಸು ಮೂಡಿಸಬೇಕು. ಓದಿದಂತಹ ವಿಷಯವನ್ನು ಪುನರಾವರ್ತನೆ ಮಾಡುವುದರಿಂದ, ಓದಿದ ವಿಷಯ ಹೆಚ್ಚು ನೆನಪುಳಿಯಲು ಸಾಧ್ಯ. ಹಾಗೆಯೇ ಅರ್ಥಪೂರ್ಣವಾಗಿ ಮಕ್ಕಳಿಗೆ ಆಸಕ್ತಿ ಹೆಚ್ಚಿ ಕಲಿಕೆಯಲ್ಲಿ ಹಿಂದುಳಿದ ಮಕ್ಕಳು ಮುನ್ನಡೆಯಲು ಸಾಧ್ಯವಾಗುತ್ತದೆ.

ಇಂದು ಶಾಲೆಯಲ್ಲಿ ರೇಡಿಯೋ ಮೂಲಕ ಚುಕ್ಕಿ ಚಿನ್ನ, ಚಿಣ್ಣರ ಚುಕ್ಕಿ ಇಂಗ್ಲಿಷ್ ಪಾಠ ಕಲಿಸುತ್ತಿರುವುದು, ತರಗತಿಯಲ್ಲಿ ಕಂಪ್ಯೂಟರ್ ಬಳಕೆಯಿಂದ ಶಿಕ್ಷಕ ಕಲಿಸುತ್ತಿರುವುದರಿಂದ, ಕಲಿಕೆಯಲ್ಲಿ ಹಿಂದುಳಿದ ಮಕ್ಕಳಿಗೆ ಚಟುವಟಿಕೆಯಿಂದ ಕಲಿಯಲು ಸಾಧ್ಯವಾಗುತ್ತಿದೆ. ಭೂಗೋಳದ ಪಾಠ ಮಾಡುವಾಗ ಗ್ಲೋಬ್ ಬಳಸುತ್ತಾ ಪ್ರಪಂಚದ ವಿಸ್ತೀರ್ಣ, ವಿವಿಧ ದೇಶಗಳು ಹಾಗೂ ಇತರೆ ಗ್ರಹಗಳ ಬಗ್ಗೆ ತಿಳಿಸುವುದರಿಂದ ಮಕ್ಕಳಲ್ಲಿ ಚಿಕ್ಕಂದಿನಿಂದಲೇ ವಿಜ್ಞಾನ ಜಗತ್ತಿನ ಅರಿವು ಮೂಡುತ್ತದೆ. ಖಗೋಳ, ಅಂತರಿಕ್ಷ ಯಾನಿಗಳ ಬಗ್ಗೆ ತಿಳಿಸಬೇಕು. ಮಕ್ಕಳು ಯಾವ ವಿಷಯದಲ್ಲಿ ಹಿಂದುಳಿದಿದ್ದಾರೆ ಎಂಬುದನ್ನರಿತು, ಯಾವ ವಿಷಯದ ಆಯ್ಕೆಯಿಂದ ಅವರಿಗೆ ಭವಿಷ್ಯತ್ತಿನಲ್ಲಿ ಒಳ್ಳೆಯ ಅವಕಾಶ ಇದೆ ಎಂಬುದನ್ನು ಉಚಿತ ಹೆಲ್ಪ್‌ಲೈನ್ ಮೂಲಕ ಕೌನ್ಸಿಲಿಂಗ್ ಮಾಡಿ ತಿಳಿಸುವುದರಿಂದ ಮಕ್ಕಳು ಸಹಜವಾಗಿಯೇ ಶಿಕ್ಷಣದಲ್ಲಿ ತೊಡಗುತ್ತಾರೆ.



**ಭಾಗ್ಯಮ್ಮ ಎಸ್.**
ಪಿಎಚ್.ಡಿ., ಸಂಶೋಧನಾ ವಿದ್ಯಾರ್ಥಿನಿ
ಸಮಾಜಶಾಸ್ತ್ರ ಅಧ್ಯಯನ ವಿಭಾಗ, ಕುವೆಂಪು ವಿಶ್ವವಿದ್ಯಾಲಯ
ಶಂಕರಘಟ್ಟ, ಶಿವಮೊಗ್ಗ ಜಿಲ್ಲೆ

# ರಾಜ್ಯದ ಮಕ್ಕಳನ್ನು ಕಾಡುತ್ತಿರುವ ಅಪೌಷ್ಟಿಕತೆಯ ಸಮಸ್ಯೆ

ಇತ್ತೀಚಿನ ಒಂದು ವರದಿ ಅತಿ ಬಡದೇಶ ಇಥಿಯೋಪಿಯಾದ ಮಕ್ಕಳಿಗಿಂತ ಭಾರತದ ಮಕ್ಕಳು ಅಪೌಷ್ಟಿಕತೆಯಿಂದ ಸಾಯುತ್ತಿವೆ ಎಂದು ಹೇಳುತ್ತದೆ. ವಿಶ್ವಬ್ಯಾಂಕಿನ ಇತ್ತೀಚಿನ ವರದಿಯ ಪ್ರಕಾರ ಬಾಂಗ್ಲಾ ದೇಶ ಬಿಟ್ಟರೆ ಭಾರತದ ಮಕ್ಕಳೇ ಜಗತ್ತಿನಲ್ಲಿ ಅತಿ ಹೆಚ್ಚು ಕುಂಠಿತ ಬೆಳವಣಿಗೆಗೆ ತುತ್ತಾದ ಮಕ್ಕಳು. ಭ್ರೂಣ ಹತ್ಯೆ, ಶಿಶು ಮರಣ ಇವುಗಳು ಸಹ ನಮ್ಮ ದೇಶದಲ್ಲೇ ಅತೀ ಹೆಚ್ಚು ಎಂದು ವಿಶ್ವ ಆರೋಗ್ಯ ಸಂಸ್ಥೆ ವರದಿ ತಿಳಿಸಿದೆ. ಅದಕ್ಕಿಂತ ಗಾಬರಿ ಉಂಟುಮಾಡುವ ವಿಷಯವೆಂದರೆ ದೇಶದಲ್ಲೇ ಅಪೌಷ್ಟಿಕತೆಯಿಂದ ನರಳುತ್ತಿರುವ ಮಕ್ಕಳು ಮತ್ತು ೫ ವರ್ಷಕ್ಕಿಂತ ಕಡಿಮೆ ವಯಸ್ಸಿನ ಶಿಶುಗಳ ಸಾವು ಸಹ ನಮ್ಮ ರಾಜ್ಯದಲ್ಲೇ ಹೆಚ್ಚು ಎಂದು ಮಾನವ ಅಭಿವೃದ್ಧಿ ವರದಿ ತಿಳಿಸಿದೆ. ಅಲ್ಲದೆ ಮೂರು ವರ್ಷದೊಳಗಿನ ಅತಿ ಕಡಿಮೆ ತೂಕದ ಶಿಶುಗಳು ಸಹ ಕರ್ನಾಟಕದಲ್ಲಿ ಹೆಚ್ಚು ಎಂದು ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆಯು ತನ್ನ ಮೂರನೇ ವರದಿಯಲ್ಲಿ ದೃಢಪಡಿಸಿದೆ. ಇತ್ತೀಚಿನ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವರದಿ ಪ್ರಕಾರ ಅಪೌಷ್ಟಿಕತೆಯಿಂದ ನರಳುವ ಸುಮಾರು ಸಾವಿರ ಮಕ್ಕಳನ್ನು ಅತಿ ಹಿಂದುಳಿದ ರಾಯಚೂರು ಜಿಲ್ಲೆಯಲ್ಲಿ ಕಾಣಬಹುದು. ಅದರಲ್ಲೂ ಸುಮಾರು ೧೨೦೦ ಮಕ್ಕಳು ಅತಿ ಗಂಭೀರವಾದ, ಎಂದರೆ ಮೂರು ಮತ್ತು ನಾಲ್ಕನೇ ಹಂತದ ಅಪೌಷ್ಟಿಕತೆ ಸಮಸ್ಯೆಯಿಂದ ದಿನಗಳನ್ನು ಎಣಿಸುತ್ತಿವೆ. ಕಳೆದ ೨ ವರ್ಷಗಳಲ್ಲಿ ರಾಯಚೂರು ಜಿಲ್ಲೆಯಿಂದಲೇ ೨೮೦೦ ಮಕ್ಕಳು (ಆರು ವರ್ಷದೊಳಗಿನ) ಇದುವರೆಗೆ ಮೃತಪಟ್ಟಿವೆ. ಪಕ್ಕದ ಕೊಪ್ಪಳ ಜಿಲ್ಲೆಯಲ್ಲಿ ಪರಿಸ್ಥಿತಿ ಇನ್ನಷ್ಟು ಗಂಭೀರವಾಗಿದ್ದು ರಾಜ್ಯದ ಒಟ್ಟು ಸರಾಸರಿಗಿಂತ ಹೆಚ್ಚಿನ ಮಕ್ಕಳು ಅಪೌಷ್ಟಿಕತೆಯಿಂದ ನರಳುತ್ತಿವೆ. ಬಾಗಲಕೋಟೆ ಮತ್ತು ಬಳ್ಳಾರಿ ಜಿಲ್ಲೆಗಳು ಸ್ವಲ್ಪ ದಿನಗಳಲ್ಲಿ ರಾಯಚೂರನ್ನು ಮೀರಿಸುವ ಸಾಧ್ಯತೆ ಇದೆ ಎಂದು ತಜ್ಞರ ವರದಿ ಎಚ್ಚರಿಸಿದೆ. ಅಲ್ಲದೆ, ಕರ್ನಾಟಕದ ಶೇಕಡ ೮೪ರಷ್ಟು ಮಕ್ಕಳು (ಮೂರು ವರ್ಷ ಒಳಗಿನ) ರಕ್ತಹೀನತೆ ಸಮಸ್ಯೆಯಿಂದ ನರಳುತ್ತಿವೆ.

**ಡಾ|| ಡಿ. ಸಿ. ನಂಜುಂಡ**

ಈ ಎಲ್ಲ ಸಮಸ್ಯೆಗಳಿಗೆ ಕಾರಣ ಹುಡುಕುತ್ತ ಹೋದರೆ ಹಲವಾರು ಸಂಗತಿಗಳು ಬೆಳಕಿಗೆ ಬರುತ್ತವೆ. ರಾಯಚೂರು, ಕೊಪ್ಪಳ, ಬಾಗಲಕೋಟೆ, ಬಳ್ಳಾರಿ ಇವುಗಳು ರಾಜ್ಯದಲ್ಲೇ ಅತೀ ಹೆಚ್ಚು ಹಿಂದುಳಿದ ಜಿಲ್ಲೆಗಳಾಗಿವೆ. ಬಡತನ ಅಪೌಷ್ಟಿಕತೆಗೆ ಒಂದು ಕಾರಣ, ಆದರೆ ಅದೇ ಅತಿ ಮುಖ್ಯ ಕಾರಣವಾಗುವುದಿಲ್ಲ. ಆಶ್ಚರ್ಯದ ಸಂಗತಿಯೆಂದರೆ ಬಡತನ ರೇಖೆಗಿಂತ ಕೆಳಗಿರುವವರಿಗಿಂತ ಬಡತನ ರೇಖೆಯ ಮೇಲಿರುವ ಜನರಲ್ಲೇ ಈ ಸಮಸ್ಯೆ ಸ್ವಲ್ಪ ಹೆಚ್ಚು ಎಂದು ಕೆಲವು ವರದಿಗಳು ಹೇಳುತ್ತವೆ. ಹಸಿವು, ಲಿಂಗಭೇದ, ಹುಟ್ಟಿದಾಗಿನಿಂದ ಬರುವ ಜೀರ್ಣಾಂಗ ವ್ಯವಸ್ಥೆಯ ದೋಷಗಳು, ಸಾಮಾಜಿಕ, ಸಾಂಸ್ಕೃತಿಕ ನಂಬಿಕೆಗಳು, ಬಾಲ್ಯ ವಿವಾಹ ಮತ್ತು ಅತಿ ಹೆಚ್ಚಿನ ಗರ್ಭಧಾರಣೆ, ಮೂಢನಂಬಿಕೆ, ಆಹಾರ ಸೇವನೆ ಪದ್ಧತಿ, ಅಪೌಷ್ಟಿಕತೆಯ ಬಗ್ಗೆ ಅರಿವು ಇಲ್ಲದಿರುವುದು, ತಾಯಿ ಮತ್ತು ಮಗುವಿನ ಆರೋಗ್ಯ ಸೇವೆ ಇತ್ಯಾದಿ ಅಪೌಷ್ಟಿಕತೆಗೆ ಕಾರಣವಾಗುತ್ತವೆ ಎಂದು ಮಾನವ ಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಬಡತನ, ನಿರುದ್ಯೋಗ, ಕುಂಠಿತ ಆರೋಗ್ಯ ಸೇವೆ, ಅನಕ್ಷರತೆ, ಸರ್ಕಾರದ ನಿರ್ಲಕ್ಷ್ಯ, ತಳಮಟ್ಟದ ಅಧಿಕಾರಿಗಳ ಬೇಜವಾಬ್ದಾರಿ, ಕಾಡುವ ಬರಗಾಲ, ಉದ್ಯೋಗ ಖಾತ್ರಿ ಯೋಜನೆಯು ಸರಿಯಾಗಿ ಜಾರಿಯಾಗದೆ ಇರುವುದು, ಭ್ರಷ್ಟಾಚಾರ ಇತ್ಯಾದಿಗಳಿಂದಲೂ ಈ ಸಮಸ್ಯೆ ತಲೆದೋರುತ್ತದೆ. ಇಂದಿಗೂ ರಾಯಚೂರು ಮತ್ತು ಪಕ್ಕದ ಜಿಲ್ಲೆಯ ಜನರು ಕೆಲಸ ಅರಸಿ ದೂರದ ಹೈದ್ರಾಬಾದ್ ಮತ್ತು ಬೆಂಗಳೂರಿನಂತಹ ಜಿಲ್ಲೆಗಳಿಗೆ ವಲಸೆ ಹೋಗುತ್ತಾರೆ. ಕುಡಿಯುವ ನೀರಿನ ಕೊರತೆ, ಪಡಿತರ ಪದ್ಧತಿಯ ಅವ್ಯವಸ್ಥೆ, ಸರಿಯಾದ ಸಾರಿಗೆ ವ್ಯವಸ್ಥೆಯ ಕೊರತೆ, ಇಂತಹ ಹಲವಾರು ಸಮಸ್ಯೆಗಳಿಂದ ಇಂದಿಗೂ ಈ ಭಾಗದ ಸಾವಿರಾರು ಹಳ್ಳಿಗಳು ಕುಗ್ರಾಮಗಳಾಗಿಯೇ ಉಳಿದಿವೆ. ಅಲ್ಲದೆ ಜಿಲ್ಲಾಧಿಕಾರಿಯೂ



ಕರ್ನಾಟಕದಲ್ಲಿ ಪೂರೈಕೆಯಾಗುತ್ತಿರುವ ಇಂತಹ ಆಹಾರ ಪೊಟ್ಟಣಗಳಲ್ಲಿನ ಪೌಷ್ಟಿಕತೆಯ ಮಟ್ಟ ಚರ್ಚೆಯ ವಸ್ತುವಾಗಿದೆ. ಅದಕ್ಕಿಂತ ಮುಖ್ಯವಾದುದು ಇಂತಹ ಪೊಟ್ಟಣಗಳನ್ನು ಹೆಚ್ಚಾಗಿ ಮಕ್ಕಳು ಇಷ್ಟಪಡದಿರುವುದು ಮತ್ತು ಭೌಗೋಳಿಕ ಪ್ರದೇಶಕ್ಕೆ ಅನುಗುಣವಾಗಿ ಆಹಾರ ಸೇವನೆಯ ಸಂಪ್ರದಾಯ ಬದಲಾಗುವುದರ ಬಗ್ಗೆ ಮತ್ತು ಇದಕ್ಕೆ ಅನುಗುಣವಾಗಿ ಆಹಾರ ಪೂರೈಕೆಗೆ ತಜ್ಞರು ಚಿಂತಿಸುವುದಕ್ಕೆ ಇದು ಸರಿಯಾದ ಸಮಯ. ಈ ವಿಷಯಕ್ಕೆ ಸಂಬಂಧಿಸಿದಂತೆ ಕರ್ನಾಟಕದ ಲೋಕಾಯುಕ್ತದಲ್ಲಿ ಒಂದು ದಾವೆ ಹೂಡಲಾಗಿದ್ದು ಅದರ ತೀರ್ಪು ಇನ್ನೂ ಬರಬೇಕಿದೆ. ದೇಶದಲ್ಲೇ ಕರ್ನಾಟಕ ರಾಜ್ಯವು ಸಮಗ್ರ ಪೌಷ್ಟಿಕ ಯೋಜನೆಯನ್ನು ಜಾರಿಗೆ ತಂದ ರಾಜ್ಯವಾಗಿದೆ. ಇದಕ್ಕೆ ಈಗಾಗಲೇ ೫ ಕೋಟಿ ಹಣವನ್ನು ಸಹ ಮೀಸಲಿಡಲಾಗಿದೆ. ಆದರೆ ಇದುವರೆಗೂ ಈ ಕಾರ್ಯಕ್ರಮದ ಸ್ವರೂಪ, ಯೋಜನೆ ಮತ್ತು ಅನುಷ್ಠಾನದ ಬಗ್ಗೆ ಯಾವುದೇ ಸುದ್ದಿಯಿಲ್ಲ. ಮಕ್ಕಳ ಅಭಿವೃದ್ಧಿಗೆಂದೇ ಆರಂಭವಾದ ಐ.ಸಿ.ಡಿ.ಎಸ್. ಯೋಜನೆಯ ಕತೆ ಮತ್ತೊಂದು ರೀತಿಯದು. ನಿಯಮದ ಪ್ರಕಾರ ಐ.ಸಿ.ಡಿ.ಎಸ್. ಕೇಂದ್ರಗಳು ಅಂಗನವಾಡಿಗಳ ಮೂಲಕವೇ ಪೌಷ್ಟಿಕ ಆಹಾರ ಮತ್ತು ಆರೋಗ್ಯ ಸೇವೆಯನ್ನು ನೀಡಬೇಕಿದೆ. ಆದರೆ ಉತ್ತರ ಕರ್ನಾಟಕದ ಹೆಚ್ಚಿನ ಜಿಲ್ಲೆಗಳಲ್ಲಿ ಈ ಕಾರ್ಯಕ್ರಮವು ಸಮರ್ಪಕವಾಗಿ ಅನುಷ್ಠಾನವಾಗಿಲ್ಲ.

ಸೇರಿದಂತೆ ನಿರಂತರವಾಗಿ ನಡೆಯುವ ಸರ್ಕಾರಿ ಅಧಿಕಾರಿಗಳ ವರ್ಗಾವಣೆ ಸಹ ಈ ಭಾಗದ ಜನರನ್ನು ಹೈರಾಣಾಗಿಸಿದೆ. ಇವೆಲ್ಲದರ ಒಟ್ಟು ಪರಿಣಾಮದಿಂದಾಗಿ ಮಕ್ಕಳಿಗೆ ಸಂಬಂಧಿಸಿದ ಯಾವುದೇ ಸರ್ಕಾರಿ ಕಾರ್ಯಕ್ರಮಗಳು ಆ ಮಕ್ಕಳನ್ನು ತಲುಪದೆ ಅವು ಅಪೌಷ್ಟಿಕತೆಯಿಂದ ಸಾಯುತ್ತಿವೆ.

ಇದುವರೆಗೆ ಹಲವಾರು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮಕ್ಕಳ ಅಭಿವೃದ್ಧಿಗೆಂದು ಕೋಟಿ ಕೋಟಿ ಹಣ ಸುರಿಯುತ್ತಿದ್ದರೂ ಅವುಗಳು ಮಕ್ಕಳಿಗೆ ತಲುಪುವ ಮುಂಚೆಯೇ ಕರಗಿಹೋಗುತ್ತವೆ. ಇಂದಿಗೂ ಉತ್ತರ ಕರ್ನಾಟಕದ ನೂರಾರು ಹಳ್ಳಿಗಳು ಅಂಗನವಾಡಿ ಕೇಂದ್ರಗಳನ್ನೇ ಕಂಡಿಲ್ಲ. ಎಷ್ಟೋ ಹಳ್ಳಿಗಳಲ್ಲಿ ಬಯಲು ಪ್ರದೇಶದಲ್ಲಿ ಅಂಗನವಾಡಿ ಕೇಂದ್ರಗಳು ನಡೆಯುತ್ತಿವೆ. ಸಮಗ್ರ ಮಕ್ಕಳ ಅಭಿವೃದ್ಧಿ ಯೋಜನೆಯು (ಐ.ಸಿ.ಡಿ.ಎಸ್) ಹೆಚ್ಚೂ ಕಡಿಮೆ ಈ ಭಾಗದ ಜಿಲ್ಲೆಗಳಲ್ಲಿ ವೈಫಲ್ಯ ಕಂಡಿದೆ. ಉತ್ತರ ಕರ್ನಾಟಕದ ಎಷ್ಟೋ ಜಿಲ್ಲೆಗಳಲ್ಲಿರುವ ಐ.ಸಿ.ಡಿ.ಎಸ್. ಕೇಂದ್ರಗಳಲ್ಲಿ ಅಧಿಕಾರಿಗಳನ್ನೇ ನೇಮಿಸಿಲ್ಲ, ಅದಕ್ಕಿಂತಲೂ ಗಂಭೀರ ಸಮಸ್ಯೆಯೆಂದರೆ ಅಂಗನವಾಡಿ ಕೇಂದ್ರದ ಮೂಲಕ ಆರು ವರ್ಷದ ಕೆಳಗಿನ ಮಕ್ಕಳಿಗೆ ಪೂರೈಸುವ ಆಹಾರದ ಪೊಟ್ಟಣಗಳು ತೀರಾ ಕಳಪೆ ಎಂಬುದು. ಇದನ್ನು ಸ್ವತಃ ಅಂಗನವಾಡಿ ಶಿಕ್ಷಕರೇ ದೃಢಪಡಿಸಿದ್ದಾರೆ, ಬಿಸಿ ಊಟದ ವ್ಯವಸ್ಥೆ ಇರುವ ಕಡೆ ತರಕಾರಿಗಳನ್ನು ಬಳಸುವುದೇ ಅಪರೂಪ. ಈಗ ನೀಡುತ್ತಿರುವುದು ಪ್ಯಾಕ್ ಮಾಡಿರುವ ಆಹಾರದ ಪೊಟ್ಟಣಗಳು. ಈ ಪೊಟ್ಟಣಗಳಲ್ಲಿರುವ ಆಹಾರವನ್ನು ದನಕರುಗಳು ಸಹ ತಿನ್ನುವುದಿಲ್ಲ - ಅಷ್ಟರ ಮಟ್ಟಿಗೆ ಅವು ಕೆಟ್ಟದಾಗಿರುತ್ತದೆ. ಕೆಲವೊಮ್ಮೆ ಅವಧಿ ಮೀರಿದ ಆಹಾರದ ಪೊಟ್ಟಣಗಳನ್ನು ವಿತರಿಸಲಾಗುತ್ತದೆ. ಕೆಲವೊಮ್ಮೆ ಆಹಾರ ಪೊಟ್ಟಣಗಳನ್ನು ತಯಾರಿಸಿ ಹಲವು ತಿಂಗಳುಗಳೇ ಕಳೆದಿರುತ್ತವೆ. ಇದರೊಂದಿಗೆ ಕುಡಿಯುವ ಶುದ್ಧ ನೀರಿನ ಕೊರತೆ ಮತ್ತು ಸ್ವಚ್ಛತೆ ಇವುಗಳ ಅಭಾವದಿಂದ ಮಕ್ಕಳು ಇನ್ನಷ್ಟು ಅಪೌಷ್ಟಿಕತೆಯಿಂದ ಬಳಲುತ್ತವೆ. ಉತ್ತರ ಕರ್ನಾಟಕದ ಬಹುತೇಕ ಉಪ ಆರೋಗ್ಯ ಕೇಂದ್ರ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರಗಳದ್ದು ಇನ್ನೊಂದು ಸಮಸ್ಯೆ. ಇಲ್ಲಿ ವೈದ್ಯಾಧಿಕಾರಿಗಳು ಇರುವುದೇ ಅಪರೂಪ. ಇಂತಹ ಕೇಂದ್ರಗಳಿಗೆ ವಿಟಮಿನ್‌ಗಳು ಅಥವಾ ಇತರೆ ಅವಶ್ಯಕ ಔಷಧಿಗಳು ಸಹ



ಪೂರೈಕೆಯಾಗುವುದಿಲ್ಲ. ಕೆಲವೊಮ್ಮೆ ಇಂತಹ ಆರೋಗ್ಯ ಕೇಂದ್ರಗಳು ಹಳ್ಳಿಗಳಿಂದ ಬಹಳ ದೂರದಲ್ಲಿರುತ್ತವೆ. ಅಲ್ಲದೆ, ಆರೋಗ್ಯ ಕೇಂದ್ರಗಳು ವಾರಕ್ಕೆ ಒಮ್ಮೆ ಅಥವಾ ಎರಡು ಬಾರಿ ತೆರೆಯುವ ಉದಾಹರಣೆಯು ಸಹ ಉಂಟು. ಕೆಲವೊಂದು ಆರೋಗ್ಯ ಕೇಂದ್ರಗಳಿಗೆ ಸ್ವಂತ ಕಟ್ಟಡಗಳೇ ಇಲ್ಲ. ಇಂತಹ ಆರೋಗ್ಯ ಕೇಂದ್ರಗಳು ಸ್ಥಳೀಯ ಜನರಲ್ಲಿ ಪೌಷ್ಟಿಕತೆ ಮತ್ತು ರಕ್ತಹೀನತೆಯ ಬಗ್ಗೆ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಆಗಾಗ್ಗೆ ನಡೆಸಬೇಕು ಎಂಬ ನಿಯಮವಿದ್ದರೂ ಇಂದು ರಾಜ್ಯದ ಎಷ್ಟೋ ಪ್ರಾಥಮಿಕ ಆರೋಗ್ಯ ಕೇಂದ್ರಗಳು ಇಂತಹ ಕಾರ್ಯಕ್ರಮ ನಡೆಸುವುದೇ ಇಲ್ಲ. ಇವುಗಳ ಬೇಜವಾಬ್ದಾರಿತನದಿಂದ ಗ್ರಾಮೀಣ ಭಾಗದ ಜನರಿಗೆ ಪೌಷ್ಟಿಕ ಆಹಾರಗಳ ಅವಶ್ಯಕತೆಯ ಬಗ್ಗೆ ಅರಿವೇ ಇಲ್ಲ.

ಇನ್ನೊಂದು ಸಂಗತಿ ಎಂದರೆ ಪಕ್ಕದ ತಮಿಳುನಾಡು, ಆಂಧ್ರಪ್ರದೇಶ ಮತ್ತು ಕೇರಳ ರಾಜ್ಯಗಳಲ್ಲಿ ಅಂಗನವಾಡಿ ಕೇಂದ್ರಗಳಿಗೂ ಬಿಸಿ ಊಟದ ವ್ಯವಸ್ಥೆ ಮಾಡಲಾಗಿದೆ. ಆದುದರಿಂದ ಇಲ್ಲಿ ತರಕಾರಿ ಬಳಸುವುದಕ್ಕೆ ಹೆಚ್ಚಿನ ಅವಕಾಶವಿದೆ. ಆದರೆ ಕರ್ನಾಟಕದ ಅಂಗನವಾಡಿಗಳಿಗೆ ತಮಿಳುನಾಡು ಮೂಲದ ಕಂಪನಿಯೊಂದು ಆಹಾರದ ಪೊಟ್ಟಣಗಳನ್ನು ಕರ್ನಾಟಕದ ಅಂಗನವಾಡಿ ಕೇಂದ್ರಗಳಿಗೆ ಪೂರೈಸುತ್ತಿದೆ. ಈ ಕಂಪನಿ ರಾಜ್ಯದ ಸಂಬಂಧಿಸಿದ ಇಲಾಖೆಯೊಂದಿಗೆ ಗುತ್ತಿಗೆ ಪಡೆದಿದ್ದು ಮಹಿಳಾ ಪೂರಕ ಪೌಷ್ಟಿಕ ಆಹಾರ ತಯಾರಿಕಾ ಕೇಂದ್ರಗಳು (ಎಂ.ಎಸ್.ಎನ್.ಪಿ.ಸಿ.) ಎನ್ನುವ ಹೆಸರಿನಲ್ಲಿ ತಮಿಳುನಾಡಿನಲ್ಲಿ ಕಾರ್ಯನಿರ್ವಸುತ್ತಿದೆ. ಕೆಲವು ಸ್ಥಳೀಯ ತಜ್ಞರ ಪ್ರಕಾರ ಈ ಕಂಪನಿ ರಾಜ್ಯದಲ್ಲಿ ಮಹಿಳಾ ಅಭಿವೃದ್ಧಿ ಹೆಸರಿನಲ್ಲಿ ಏಕಸ್ವಾಮ್ಯತೆಯನ್ನು ಸಾಧಿಸಿದೆ. ೨೦೦೪ರಲ್ಲಿ ಸುಪ್ರೀಂಕೋರ್ಟ್ ಸಹ ತನ್ನ ಒಂದು ತೀರ್ಪಿನಲ್ಲಿ ಅಂಗನವಾಡಿ ಕೇಂದ್ರಗಳಿಗೆ ಯಾವುದೇ ಕಾರಣಕ್ಕೂ ಗುತ್ತಿಗೆದಾರರ ಮೂಲಕ ಆಹಾರ ಸರಬರಾಜು ಮಾಡಬಾರದು ಮತ್ತು ಮಕ್ಕಳ ಬೆಳವಣಿಗೆ ಕಾರ್ಯಕ್ರಮಕ್ಕೆ (ಐ.ಸಿ.ಡಿ.ಎಸ್.) ಹಣವನ್ನು ಸ್ಥಳೀಯರಿಂದ, ಸ್ವಸಹಾಯ ಸಂಘಗಳು ಮಹಿಳಾ ಉದ್ದಿಮೆದಾರರಿಂದ ಆಹಾರ ಪದಾರ್ಥಗಳನ್ನು ಖರೀದಿಸಿ ಅಂಗನವಾಡಿ ಕೇಂದ್ರಗಳಲ್ಲಿ ತಾಜಾ ಆಹಾರವನ್ನು ತಯಾರಿಸಬೇಕೆಂದು ಆದೇಶ ನೀಡಿದೆ. ಆದರೆ ನಮ್ಮ ರಾಜ್ಯದಲ್ಲಿ ಈ ಆದೇಶ ಸರಿಯಾಗಿ ಜಾರಿಗೆ ಬಂದಿಲ್ಲ.

ಕರ್ನಾಟಕದಲ್ಲಿ ಪೂರೈಕೆಯಾಗುತ್ತಿರುವ ಇಂತಹ ಆಹಾರ ಪೊಟ್ಟಣಗಳಲ್ಲಿನ ಪೌಷ್ಟಿಕತೆಯ ಮಟ್ಟ ಚರ್ಚೆಯ ವಸ್ತುವಾಗಿದೆ. ಅದಕ್ಕಿಂತ ಮುಖ್ಯವಾದುದು ಇಂತಹ ಪೊಟ್ಟಣಗಳನ್ನು ಹೆಚ್ಚಾಗಿ ಮಕ್ಕಳು ಇಷ್ಟಪಡದಿರುವುದು ಮತ್ತು ಭೌಗೋಳಿಕ ಪ್ರದೇಶಕ್ಕೆ ಅನುಗುಣವಾಗಿ ಆಹಾರ ಸೇವನೆಯ ಸಂಪ್ರದಾಯ ಬದಲಾಗುವುದರ ಬಗ್ಗೆ ಮತ್ತು ಇದಕ್ಕೆ ಅನುಗುಣವಾಗಿ ಆಹಾರ ಪೂರೈಕೆಗೆ ತಜ್ಞರು ಚಿಂತಿಸುವುದಕ್ಕೆ ಇದು ಸರಿಯಾದ ಸಮಯ. ಈ ವಿಷಯಕ್ಕೆ ಸಂಬಂಧಿಸಿದಂತೆ ಕರ್ನಾಟಕದ ಲೋಕಾಯುಕ್ತದಲ್ಲಿ ಒಂದು ದಾವೆ ಹೂಡಲಾಗಿದ್ದು ಅದರ ತೀರ್ಪು ಇನ್ನೂ ಬರಬೇಕಿದೆ. ದೇಶದಲ್ಲೇ ಕರ್ನಾಟಕ ರಾಜ್ಯವು ಸಮಗ್ರ ಪೌಷ್ಟಿಕ ಯೋಜನೆಯನ್ನು ಜಾರಿಗೆ ತಂದ ರಾಜ್ಯವಾಗಿದೆ. ಇದಕ್ಕೆ ಈಗಾಗಲೇ ೫ ಕೋಟಿ ಹಣವನ್ನು ಸಹ ಮೀಸಲಿಡಲಾಗಿದೆ. ಆದರೆ ಇದುವರೆಗೂ ಈ ಕಾರ್ಯಕ್ರಮದ ಸ್ವರೂಪ, ಯೋಜನೆ ಮತ್ತು ಅನುಷ್ಠಾನದ ಬಗ್ಗೆ ಯಾವುದೇ ಸುದ್ದಿಯಿಲ್ಲ. ಮಕ್ಕಳ ಅಭಿವೃದ್ಧಿಗೆಂದೇ ಆರಂಭವಾದ ಐ.ಸಿ.ಡಿ.ಎಸ್. ಯೋಜನೆಯ ಕತೆ ಮತ್ತೊಂದು ರೀತಿಯದು. ನಿಯಮದ ಪ್ರಕಾರ ಐ.ಸಿ.ಡಿ.ಎಸ್. ಕೇಂದ್ರಗಳು ಅಂಗನವಾಡಿಗಳ ಮೂಲಕವೇ ಪೌಷ್ಟಿಕ ಆಹಾರ ಮತ್ತು ಆರೋಗ್ಯ ಸೇವೆಯನ್ನು ನೀಡಬೇಕಿದೆ. ಆದರೆ ಉತ್ತರ ಕರ್ನಾಟಕದ ಹೆಚ್ಚಿನ ಜಿಲ್ಲೆಗಳಲ್ಲಿ ಈ ಕಾರ್ಯಕ್ರಮವು ಸಮರ್ಪಕವಾಗಿ ಅನುಷ್ಠಾನವಾಗಿಲ್ಲ. ಅಧಿಕಾರಿಗಳ ದಿವ್ಯನಿರ್ಲಕ್ಷ್ಯ, ಮಾನವ ಸಂಪನ್ಮೂಲಗಳ ಕೊರತೆ, ಹಣಕಾಸಿನ ಕೊರತೆ, ಭ್ರಷ್ಟಾಚಾರ ಇವುಗಳಿಂದಾಗಿ ಈ ಕಾರ್ಯಕ್ರಮದ ಮೂಲಭೂತ ಆಶಯವೇ ಕಣ್ಮರೆಯಾಗಿದೆ. ಈ ಸಮಸ್ಯೆ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯನ್ನು ಸಹ ಬಿಟ್ಟಿಲ್ಲ. ಇದರಿಂದ ಸರ್ಕಾರ ಜಾರಿಗೆ ತಂದಿರುವ ಇತರೆ ಮಕ್ಕಳ ಆರೋಗ್ಯಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳು ಸಹ ಯಶಸ್ವಿಯಾಗುತ್ತಿಲ್ಲ. ಇದರಿಂದ ಶಾಲೆ ಬಿಡುವ ಮಕ್ಕಳ ಸಂಖ್ಯೆ ಹೆಚ್ಚಾಗುತ್ತಿದೆ. ಅಲ್ಲದೆ ಸ್ಥಳೀಯ ಗ್ರಾಮಸಭೆಗಳು ಅಥವಾ ಗ್ರಾಮಪಂಚಾಯಿತಿಗಳು ಇದರ ಬಗ್ಗೆ ಆಲೋಚಿಸುವುದೇ ಕಡಿಮೆ.

ಅಪೌಷ್ಟಿಕ ಸಮಸ್ಯೆಯಿಂದ ಮಕ್ಕಳನ್ನು ಪಾರುಮಾಡಲು ಇಂದು ತುರ್ತು ಕ್ರಮವನ್ನು ತೆಗೆದುಕೊಳ್ಳಬೇಕಾದ ಅಗತ್ಯವಿದೆ. ತ್ವರಿತವಾಗಿ ಪೌಷ್ಟಿಕ ಆಹಾರದ ಅವಶ್ಯಕತೆಯ ಬಗ್ಗೆ ಗ್ರಾಮೀಣ ಜನರಲ್ಲಿ ಅರಿವು ಮೂಡಿಸಲು ಕ್ರಮ ಕೈಗೊಳ್ಳಬೇಕಿದೆ. ಪಡಿತರ ವ್ಯವಸ್ಥೆಯ ಮೂಲಕ ಕಡಿಮೆ ದರದಲ್ಲಿ ಪೌಷ್ಟಿಕ ಆಹಾರವನ್ನು ಬಡಜನರಿಗೆ ವಿತರಿಸಬೇಕಿದೆ. ಜನರಿಗೆ ಆರೋಗ್ಯಕರ, ಸರಿಯಾದ ಆಹಾರ ಪದ್ಧತಿಯನ್ನು ಪಾಲಿಸುವಂತೆ ಮಾಡಲು ಮಾಧ್ಯಮಗಳ ಮೂಲಕ ವಿವಿಧ ರೀತಿಯ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ತಳಮಟ್ಟದಲ್ಲಿ ಆರಂಭಿಸಬೇಕಿದೆ. ಲಸಿಕೆ ಕಾರ್ಯಕ್ರಮ, ವಿಟಮಿನ್ ಮತ್ತು ಕಬ್ಬಿಣದ ಅಂಶವುಳ್ಳ ಮಾತ್ರೆಗಳ ಪೂರೈಕೆ, ಶುದ್ಧ ಕುಡಿಯುವ ನೀರಿನ ಪೂರೈಕೆ ಮತ್ತು ನೈರ್ಮಲ್ಯತೆ ಕಾಪಾಡುವ ಯೋಜನೆಗಳು ಏಕರೂಪವಾಗಿ ಜಾರಿಗೆ ಬರಬೇಕಿದೆ ಮತ್ತು ಇವುಗಳ ಮೇಲ್ವಿಚಾರಣೆಯನ್ನು ಕ್ರಮಬದ್ಧವಾಗಿ ನಡೆಸಬೇಕಿದೆ. ಶಿಶುಗಳ ಆರೋಗ್ಯ, ಬಾಣಂತಿಯರ ಆರೈಕೆ, ಹದಿಹರೆಯದಲ್ಲಿ ಗರ್ಭಧಾರಣೆಯ ಸಮಸ್ಯೆಗಳು, ಇಂತಹ ಪ್ರಮುಖ ವಿಷಯಗಳ ಬಗ್ಗೆ ಅಂಗನವಾಡಿ ಕೇಂದ್ರಗಳಲ್ಲಿ ಪೋಷಕರಿಗೆ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ನಡೆಸಬೇಕಿದೆ. ಬಡತನ ನಿವಾರಣೆ, ಎಲ್ಲರನ್ನೂ ಒಳಗೊಂಡ ಬೆಳವಣಿಗೆ, ಉದ್ಯೋಗ ಖಾತ್ರಿ ಯೋಜನೆಯಂತಹ ಕಾರ್ಯಕ್ರಮಗಳು ತ್ವರಿತವಾಗಿ ರಾಜ್ಯದ ಅತಿ ಹಿಂದುಳಿದ ಪ್ರದೇಶಗಳನ್ನು ತಲುಪಬೇಕಿದೆ. ದೇಶದ ಆರೋಗ್ಯನೀತಿಯನ್ನು ಪುನರ್‌ರೂಪಿಸಬೇಕಿದೆ. ಅಪೌಷ್ಟಿಕತೆಯನ್ನು ತೊಲಗಿಸಲು ವಿಜ್ಞಾನ ಮತ್ತು ತಂತ್ರಜ್ಞಾನದ ಸಹಾಯವನ್ನು ಪಡೆಯಬೇಕಿದೆ. ಬಡಜನರು ಅತಿಯಾಗಿ ವಾಸಿಸುವ ಪ್ರದೇಶಗಳಲ್ಲಿ ಪೌಷ್ಟಿಕ ಆಹಾರವನ್ನು ಪೂರೈಸಲು ಸ್ವಯಂ ಸೇವಾ ಸಂಸ್ಥೆಗಳು ಮತ್ತು ಸ್ವ-ಸಹಾಯ ಸಂಘಗಳ ಸಹಾಯವನ್ನು ಪಡೆಯಬೇಕು. ಶಿಶುವಿನ ಕುಂಠಿತ ಬೆಳವಣಿಗೆಯನ್ನು ತಡೆಯಲು ಸಮುದಾಯ ಆಧಾರಿತ ಪೌಷ್ಟಿಕ ಆಹಾರ ಶಿಕ್ಷಣ ಕಾರ್ಯಕ್ರಮಗಳನ್ನು ಜಾರಿಗೆ ತರಬೇಕು. ಬೇರೆ ರಾಜ್ಯಗಳು ಅಪೌಷ್ಟಿಕತೆಯಂತಹ ಸಮಸ್ಯೆಗಳನ್ನು ನಿವಾರಿಸುವ ದಿಶೆಯಲ್ಲಿ ರೂಪಿಸಿರುವ ನೀತಿಗಳ ಬಗ್ಗೆ ಅವಲೋಕಿಸಿ ಈ ಸಮಸ್ಯೆಗೆ ತ್ವರಿತ ಮಾರ್ಗೋಪಾಯಗಳನ್ನು ಕಂಡುಹಿಡಿಯಬೇಕಿದೆ. ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ಮುಂದಿರುವ ಕರ್ನಾಟಕ ರಾಜ್ಯ ಇಂತಹ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸುವ ಅಗತ್ಯವಿದೆ.


**ಡಾ|| ಡಿ. ಸಿ. ನಂಜುಂಡ**

ಪ್ರವಾಚಕರು/ಉಪನಿರ್ದೇಶಕರು, ಸೆಂಟರ್ ಫಾರ್ ದ ಸ್ಟಡಿ ಆಫ್ ಸೋಷಿಯಲ್ ಎಕ್ಸ್‌ಕ್ಲೂಷನ್ ಅಂಡ್ ಇನ್‌ಕ್ಲೂಸಿವ್ ಪಾಲಿಸಿ, ಹ್ಯುಮ್ಯಾನಿಟೀಸ್ ಬ್ಲಾಕ್, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.




# ಕೂಳಿಲ್ಲದ ಹಾಡು

ನೆಲವನ್ನು
ನಂಬಿದ್ದೆವು
ಮಳೆ ದ್ರೋಹವೆಸಗಿತು
ಹಳ್ಳಿಗಳಲ್ಲಿ ಕಣ್ಣೀರು ಒತ್ತೆಯಿಟ್ಟು

ನಾವು
ನಗರಗಳ ಕಡೆ ಮುಖ ಮಾಡಿ
ಸಾಲು ಇರುವೆಗಳಂತೆ
ಗುಳೇವು ಕಿತ್ತೆವು

ನಿಮ್ಮ
ಸುಖದ ಮಹಲ್ಲುಗಳಿಗೆ
ಕಲ್ಲು ಮಣ್ಣು ಹೊರಲೆಂದು
ಪಟ್ಟಣಕ್ಕೆ ಬಂದೆವು
ಇಲ್ಲಿ
ಸ್ಲಮ್ಮುಗಳು
ನಿರ್ಮಾಣವಾದವು

ಬುಲ್ಡೋಜರುಗಳು
ತಲೆ ಕೆಟ್ಟಾಗ
ನಮ್ಮ ಮೇಲಕ್ಕೆರಗುತ್ತವೆ
ನಾವು ಸುಮ್ಮನೆ ಇರುತ್ತೇವೆ
ಚಿರತೆ ಜಿಂಕೆಯ
ಬೇಟೆಯಾಡುವಂತೆ

ನಮ್ಮ
ಹೊಲಗಳಿಗೆ
ಯಾರೋ ಬೆಲೆ
ನಿಗದಿ ಮಾಡುತ್ತಾರೆ

ನಾವು
ಒಪ್ಪಿಕೊಂಡು ಬಿಡುತ್ತೇವೆ
ಅದೊಂದು ಎಲ್ಲೊ ಸಿಕ್ಕ
ಅಪಾರ ನಿಧಿ ಎಂಬಂತೆ

ನಾವು
ನೀರಿನಿಂದ
ಹೊರಬಿದ್ದ ಮೀನುಗಳಂತೆ
ಸದಾ ಒದ್ದಾಡುತ್ತೇವೆ
ಸದಾ ತಿರುಗುತ್ತಲೇ ಇರುತ್ತೇವೆ
ಹೊಟ್ಟೆಗೆ
ಗಂಜಿ ಕಾಯಿಸಲು


**ಕಾಲಕಾಲೇಶ್ವರ ಹಾದಿಮನಿ**

ರಾ.ಕು.ನಿ. ಕೇಂದ್ರ, (ಸರಕಾರಿ ಆಸ್ಪತ್ರೆ), ಗಜೇಂದ್ರಗಡ ಅಂಚೆ
ರೋಣ ತಾಲೂಕು, ಗದಗ ಜಿಲ್ಲೆ

# ಐವತ್ತು ವರ್ಷಗಳ ಹಿಂದಿನ ಎರಡು ಘಟನೆಗಳು

**ಒ**ಂದು, ಜಗತ್ತನ್ನು ಮೂರನೇ ಮಹಾಯುದ್ಧದ ಅಂಚಿಗೆ ದೂಡಿದ್ದ 'ಬೇ ಆಫ್ ಪಿಗ್ಸ್' ಎಂದೇ ಹೆಸರಾಗಿರುವ ಕ್ಯೂಬಾದ ಕ್ಷಿಪಣಿ ಬಿಕ್ಕಟ್ಟು. ಇನ್ನೊಂದು ಭಾರತಕ್ಕೆ ವಿಶ್ವಾಸದ್ರೋಹ ಬಗೆದು ಗಡಿಯಲ್ಲಿ ಚೀಣಾ ನಡೆಸಿದ ದುರಾಕ್ರಮಣ. ಎರಡೂ ಘಟನೆಗಳು ಸಂಭವಿಸಿದ್ದು ೧೯೬೨ರ ವರ್ಷದ ಕೊನೆಯಲ್ಲಿಯೆ. ಈ ಘಟನೆಗಳಿಗೆ ಸಂಬಂಧಪಟ್ಟ ಹಲವು ದಸ್ತಾವೇಜುಗಳು ಈಚೆಗೆ ಪ್ರಕಟಗೊಂಡಿವೆ. ಎರಡೂ ಘಟನೆಗಳ ಪರಿಣಾಮ ಮಾತ್ರ ಇನ್ನೂ ಇದೆ. ಭಾರತ-ಚೀಣಾ ಗಡಿವಿವಾದ ಇತ್ಯರ್ಥವಾಗದೆ ಎರಡೂ ದೇಶಗಳ ನಡುವಣ ಸಂಬಂಧಗಳಲ್ಲಿ ಕಿರಿಕಿರಿ ಮುಂದುವರಿಯುತ್ತಿದೆ. ಇನ್ನೂ ಕ್ಯೂಬಾದ ಮೇಲೆ ದ್ವೇಷ ಸಾಧಿಸುತ್ತಿರುವ ಅಮೆರಿಕ ಆರ್ಥಿಕ ದಿಗ್ಬಂಧನವನ್ನು ಮುಂದುವರಿಸುತ್ತಿದೆ. ಎರಡೂ ಅನಿರೀಕ್ಷಿತ. ಜಗತ್ತನ್ನೇ ತಲ್ಲಣಗೊಳಿಸಿದ ಘಟನೆಗಳು.

ಭಾರತ ಸ್ವತಂತ್ರಗೊಂಡ ಮೂರು ವರ್ಷಗಳ ನಂತರ ೧೯೫೦ರಲ್ಲಿ ಅಸ್ತಿತ್ವಕ್ಕೆ ಬಂದ ಕಮ್ಯೂನಿಸ್ಟ್ ನೇತೃತ್ವದ ಚೀಣಾ ಜನತಾ ಗಣರಾಜ್ಯದೊಂದಿಗೆ ಸಂಬಂಧಗಳು ಪರಸ್ಪರ ವಿಶ್ವಾಸದಿಂದಲೇ ಇದ್ದುವು. ಪರಸ್ಪರ ಸಹಕಾರ, ಆಂತರಿಕ ವ್ಯವಹಾರಗಳಲ್ಲಿ ತಲೆ ಹಾಕದಿರುವ ಪಂಚಶೀಲ ಸೂತ್ರಗಳನ್ನು ಅಂಗೀಕರಿಸಿದ್ದ ಎರಡೂ ದೇಶಗಳ ಸಂಬಂಧಗಳು ಅನುಕರಣೀಯವಾಗಿದ್ದುವು. ಟಿಬೆಟ್ಟಿನ ಮೇಲೆ ಚೀಣಾದ ಪರಮಾಧಿಕಾರಕ್ಕೆ ಮನ್ನಣೆ ನೀಡಿದ್ದ ಭಾರತ ವಿಶ್ವಸಂಸ್ಥೆಯಲ್ಲಿ ಚೀಣಾದ ನ್ಯಾಯಬದ್ಧವಾದ ಸ್ಥಾನಕ್ಕಾಗಿ ಸತತವಾಗಿ ಪ್ರಯತ್ನಿಸುತ್ತಿತ್ತು. ಟಿಬೆಟ್‌ನಲ್ಲಿ ಚೀಣೀ ಆಳ್ವಿಕೆಯ ವಿರುದ್ಧ ಭುಗಿಲೆದ್ದ ಬಂಡಾಯ, ಇನ್ನೂ ನಿಷ್ಕರ್ಷೆಯಾಗದೇ ಇದ್ದ ಗಡಿಗಳು, ಚೀಣೀಯರ ಸಂಕುಚಿತ ರಾಷ್ಟ್ರೀಯ ದುರಭಿಮಾನ ಸಂಬಂಧಗಳು ಹಳಸಲು ಕಾರಣ ವಾಯಿತು. ೧೯೫೯ರಲ್ಲಿ ಟಿಬೆಟ್ಟಿನ ಧರ್ಮಗುರು ದಲಾಯಿಲಾಮಾ ಭಾರತಕ್ಕೆ ಆಗಮಿಸಿ ಆಶ್ರಯ ಪಡೆದದ್ದು, ಗಡಿಪ್ರದೇಶವಾದ ಅಕ್ಸೈಚಿನ್‌ನಲ್ಲಿ ಅಕ್ರಮವಾಗಿ ಭಾರತದ ಭೂಪ್ರದೇಶದಲ್ಲಿ ಚೀಣೀಯರು ನಿರ್ಮಿಸಿದ್ದ ಟಿಬೆಟ್-ಸಿಂಕಿಯಾಂಗ್ ಹೆದ್ದಾರಿ ಪರಿಸ್ಥಿತಿಯನ್ನು ಉಲ್ಬಣಗೊಳಿಸಿ ಭಾರತ-ಚೀಣಾ ಯುದ್ಧದಲ್ಲಿ ಪರ್ಯವಸಾನಗೊಂಡಿತು. ೧೯೬೨ರ ಅಕ್ಟೋಬರ್‌ನಲ್ಲಿಯೇ ಗಡಿಯಲ್ಲಿ ಪ್ರಾರಂಭವಾದ ಸಣ್ಣಪುಟ್ಟ ಘರ್ಷಣೆಗಳು ನವೆಂಬರ್ ಕೊನೆಯಲ್ಲಿ ಪೂರ್ಣಪ್ರಮಾಣದ ಯುದ್ಧಕ್ಕೆ ಎಡೆಕೊಟ್ಟಿತ್ತು. ದುರಾಕ್ರಮಣಕ್ಕೆ ಸಜ್ಜಾಗಿದ್ದ ಚೀಣೀ ಸೇನೆ ಈಶಾನ್ಯ ಗಡಿಯಲ್ಲಿ ತನಗೆ ಸೇರಿದ್ದೆಂದು ಹೇಳುತ್ತಿದ್ದ ಭಾರತದ ಭೂಭಾಗಗಳನ್ನೂ ಆಕ್ರಮಿಸಿಕೊಂಡು ಏಕಪಕ್ಷೀಯವಾಗಿ ಯುದ್ಧಸ್ಥಂಭನ ಪ್ರಕಟಿಸಿತು.

ಐವತ್ತು ವರ್ಷಗಳಿಂದ ಆಕ್ರಮಿತ ಪ್ರದೇಶಗಳು ಚೀಣೀಯರ ವಶದಲ್ಲಿಯೇ ಇದೆ. ಕೆಲವರ್ಷಗಳ ನಂತರ ಗಡಿವಿವಾದ ಕುರಿತು ಸಮಸ್ಯೆಯನ್ನು ಮಾತುಕತೆಗಳ ಮೂಲಕ ಬಗೆಹರಿಸಲು ಎರಡೂ ದೇಶಗಳು ಒಪ್ಪಿ ಪರಸ್ಪರ ಸಂಬಂಧಗಳನ್ನು ಸಹಜಗೊಳಿಸಲು ನಿರ್ಧರಿಸಿದುವು. ಸಂಬಂಧಗಳು ಸುಧಾರಿಸಿದ್ದಾಗ್ಯೂ ಗಡಿಸಮಸ್ಯೆ ಮಾತ್ರ ಬಗೆಹರಿದಿಲ್ಲ. ಜಿಗುಟು ಸ್ವಭಾವದ ಚೀಣೀಯರ ನಿಲುವಿನಿಂದಾಗಿ ಮಾತುಕತೆಗಳು ಎಳೆದಾಡುತ್ತಿವೆ. ಸಮಸ್ಯೆಯ ಇತ್ಯರ್ಥದತ್ತ ಮುಂದಾಗಿವೆ. ಈ ಕಿರಿಕಿರಿ ಇಲ್ಲದೇ ಹೋಗಿದ್ದರೆ, ಪರಸ್ಪರ ನಂಬಿಕೆ ಉಳಿದಿದ್ದರೆ ಭಾರತ-ಚೀಣಾಗಳು ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಪ್ರಮುಖಪಾತ್ರವಹಿಸ ಬಹುದಾಗಿತ್ತು. ಭಾರತ-ರಷ್ಯಾ-ಚೀಣಾಗಳು ಒಂದಾಗಿದ್ದರೆ ಅಮೆರಿಕದ ಏಕಸ್ವಾಮ್ಯವನ್ನು ಮುರಿಯಲು ಸಾಧ್ಯವಿತ್ತು. ಈಗ ಚೀಣಾ ಬದಲಾಗಿದೆ, ಭಾರತವೂ ಬದಲಾಗಿದೆ, ಪರಸ್ಪರರಲ್ಲಿ ವಿಶ್ವಾಸಕ್ಕಿಂತ ಸಂಶಯವೇ ಹೆಚ್ಚಾಗಿದೆ. ಆದರೂ ಮುಂದೊಂದು ದಿನ ಭಾರತ, ಬ್ರೆಜಿಲ್, ದಕ್ಷಿಣ ಆಫ್ರಿಕಾ, ರಷ್ಯಾ ಮತ್ತು ಚೀಣಾಗಳ ಗುಂಪು ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ನಿರ್ಣಾಯಕ ಪಾತ್ರವಹಿಸುವ ನಿರೀಕ್ಷೆ ಇದೆ. ಆ ದಿನ ಬರಲು ಗಡಿಸಮಸ್ಯೆಯು ಪರಿಹಾರ ಕಾಣಬೇಕಾಗಿದೆ.

ಒಂದು ತಿಂಗಳ ಅಂತರದಲ್ಲಿ ಪ್ರಪಂಚದ ಇನ್ನೊಂದು ಭಾಗದಲ್ಲಿ, ಅಟ್ಲಾಂಟಿಕ್ ಮಹಾಸಾಗರದ ಕೆರೆಬಿಯನ್ ಸಮುದ್ರಪ್ರದೇಶದಲ್ಲಿ ಪುಟ್ಟ ಕ್ಯೂಬಾದ ಮೇಲೆ ಕೆಂಗಣ್ಣು ಬೀರಿ ದುರಾಕ್ರಮಣ ನಡೆಸಲು ಅಮೆರಿಕ ಸಿದ್ಧತೆ ನಡೆಸಿದಾಗ ಇಡೀ ಜಗತ್ತು ತಲ್ಲಣಗೊಂಡಿತು. ಶೀತಯುದ್ಧದ ಸೆಣಸಾಟ ಪರಮಾವಧಿಗೆ ತಲಪಿ ಭಯಾನಕವಾದ ನ್ಯೂಕ್ಲಿಯರ್ ಯುದ್ಧದ ಭೀತಿ ಆವರಿಸಿತು. ೧೯೬೨ರ ಅಕ್ಟೋಬರ್ ೧೬ರಿಂದ ೨೮ರ ವರೆಗಿನ ಹದಿಮೂರು ದಿನಗಳು ಮೂರನೇ ಮಹಾಯುದ್ಧದ ಕಾರ್ಮೋಡ ಆವರಿಸಿತ್ತು. ಸೋವಿಯೆತ್ ಒಕ್ಕೂಟ ಮತ್ತು ಅಮೆರಿಕಗಳು ನ್ಯೂಕ್ಲಿಯರ್ ಸಿಡಿತಲೆಯ ಕ್ಷಿಪಣಿಗಳಿಂದ ಸಜ್ಜಾಗಿ ನಿಂತಿದ್ದುವು ಕ್ಯೂಬಾದ ಸಮೀಪದಲ್ಲಿ. ಎರಡೂ ದೇಶಗಳು ತೋರಿದ ರಾಜಕೀಯ ಮುತ್ಸದ್ದಿತನದಿಂದಾಗಿ ಬಿಕ್ಕಟ್ಟು ಬಗೆಹರಿದರೂ ಕ್ಯೂಬಾದ ಬವಣೆ ಮಾತ್ರ ಮುಂದುವರಿದಿದೆ. ಅಮೆರಿಕ ಅಂದು ವಿಧಿಸಿದ ಆರ್ಥಿಕ ದಿಗ್ಬಂಧನ ಇಂದೂ ಕೂಡ ಮುಂದುವರಿಯುತ್ತಿದೆ.

೧೯೫೯ರಲ್ಲಿ ಕ್ಯೂಬಾದಲ್ಲಿ ಸರ್ವಾಧಿಕಾರಿ ಆಡಳಿತವನ್ನು ಅಂತ್ಯಗೊಳಿಸಿ ಫೀಡೆಲ್ ಕ್ಯಾಸ್ಟ್ರೋ ನೇತೃತ್ವದಲ್ಲಿ ಸಮಾಜವಾದಿ ಸಮಾಜದ ಸ್ಥಾಪನೆಯ ಗುರಿ ಹೊಂದಿ ಸ್ಥಾಪನೆಗೊಂಡ ಆಡಳಿತವನ್ನು ಅಂತ್ಯಗೊಳಿಸಲು ಅಮೆರಿಕ ಪಣತೊಟ್ಟಿತು. ತನ್ನ ನೆರೆಯಲ್ಲೇ, ತನ್ನ ಹಿತಾಸಕ್ತಿಗಳಿಗೆ ಸವಾಲಾಗಿ ನಿಂತ ಸರಕಾರವನ್ನು ಪದಚ್ಯುತಗೊಳಿಸಲು ಸತತವಾಗಿ ಪ್ರಯತ್ನಿಸಿದೆ. ೧೯೬೨ರಲ್ಲಿ ವಿಧಿಸಿದ ಆರ್ಥಿಕ ದಿಗ್ಬಂಧನ ಕ್ಯೂಬಾದ ಆರ್ಥಿಕಾಭಿವೃದ್ಧಿಗೆ ಕಂಟಕವಾಗಿದೆ. ಇದು ೧೯೪೮ರ ಜಿನೀವಾ ಅಂತರರಾಷ್ಟ್ರೀಯ ನೀತಿಸಂಹಿತೆಯ ಉಲ್ಲಂಘನೆಯಾಗಿದೆ. ಅರ್ಧ ಶತಮಾನದ ಅವಧಿಯಲ್ಲಿ ಇದರಿಂದ ಕ್ಯೂಬಾಗೆ ೧೦೬೬ ಟ್ರಿಲಿಯನ್ ಡಾಲರುಗಳು ನಷ್ಟವಾಗಿದೆ ಎಂದು ಅಂದಾಜು ಮಾಡಲಾಗಿದೆ. ಆರ್ಥಿಕ ದಿಗ್ಬಂಧನದಿಂದಾಗಿ ಜನಸಾಮಾನ್ಯಜೀವನ ದುಸ್ತರವಾಗಿದೆ. ಎಲ್ಲ ಅಂತರರಾಷ್ಟ್ರೀಯ ನಿಯಮಗಳನ್ನೂ ಗಾಳಿಗೆ ತೂರಿ ಅಮೆರಿಕ ಅತ್ಯಗತ್ಯವಾದ ಔಷಧ ಸಾಮಗ್ರಿಗಳ ಮೇಲೂ ನಿಷೇಧ ಹೊರಿಸಿದೆ. ಕ್ಯೂಬಾಗೆ ವೈದ್ಯಕೀಯ ಮಾಹಿತಿ ಒದಗಿಸುವುದನ್ನೂ ಅಡ್ಡಿಪಡಿಸಲಾಗಿದೆ. ವಿಶ್ವಸಂಸ್ಥೆಯ ಮಹಾಸಭೆಯ ನಿರ್ಣಯಗಳನ್ನು ಅಮೆರಿಕ ಕಡೆಗಣಿಸಿದೆ. ಕ್ಯೂಬಾದ ಮೇಲೆ ವಿಧಿಸಿರುವ ಆರ್ಥಿಕ ದಿಗ್ಬಂಧನವನ್ನು ರದ್ದುಗೊಳಿಸಬೇಕು ಎಂಬುದಾಗಿ ವಿಶ್ವಸಂಸ್ಥೆಯ ಮಹಾಸಭೆಯಲ್ಲಿ ೧೮೬ ದೇಶಗಳ ಬೆಂಬಲದಿಂದ ಅಂಗೀಕಾರ ವಾಗಿರುವ ನಿರ್ಣಯವನ್ನು ವಿರೋಧಿಸುತ್ತಿರುವುದು ಅಮೆರಿಕ ಮತ್ತು ಇಸ್ರೇಲ್ ಮಾತ್ರ. ಮುವ್ವತ್ತು ವರ್ಷಗಳ ಹಿಂದೆ ಅಮೆರಿಕ ಕ್ಯೂಬಾವನ್ನು ಭಯೋತ್ಪಾದಕ ರಾಷ್ಟ್ರವೆಂದು ಹೆಸರಿಸಲು ಪ್ರಯತ್ನಿಸಿತ್ತು. ಆದರೆ ಅದು ಫಲಕಾರಿಯಾಗಲಿಲ್ಲ. ಒಬಾಮಾ ಅಧ್ಯಕ್ಷತೆಯಲ್ಲಿ ಕ್ಯೂಬಾದ ಬಗ್ಗೆ ಅಮೆರಿಕದ ಧೋರಣೆ ಬದಲಾದೀತೆಂಬ ನಿರೀಕ್ಷೆ ಹುಸಿಯಾಗಿದೆ.

ಅಮೆರಿಕದೊಂದಿಗೆ ಸಂಬಂಧಗಳನ್ನೂ ಸಹಜಗೊಳಿಸಲು ಕ್ಯೂಬಾ ಹಲವು ಪ್ರಯತ್ನಗಳನ್ನು ನಡೆಸಿದೆ. ೧೯೬೨ರಲ್ಲಿ ಬೇ ಆಫ್ ಪಿಗ್ಸ್ ಪ್ರಕರಣದ ನಂತರ ಕ್ಯೂಬಾದ ಸರಕಾರ ಅಮೆರಿಕ ಸರಕಾರದೊಂದಿಗೆ ಮಾತುಕತೆ ನಡೆಸಲು ಕ್ರಮ ಕೈಗೊಂಡಿತು. ಅಧ್ಯಕ್ಷ ಕೆನ್ನಡಿಯವರ ಸಲಹೆಗಾರರಲ್ಲೊಬ್ಬರಾದ ರಿಚರ್ಡ್ ಗುಡ್ವಿನ್‌ರೊಂದಿಗೆ ರಹಸ್ಯವಾಗಿ ಮಾತುಕತೆ ನಡೆಸಲು ಚೆ ಗುವೆರಾರನ್ನು ಕಳಿಸಿಕೊಟ್ಟಿತ್ತು. ಆದರೆ ಅದು ಫಲಕಾರಿಯಾಗಲಿಲ್ಲ. ಚೆ ಗುವೆರಾ ಮಾತುಕತೆಗಳ ಸಮಯದಲ್ಲಿ ರಾಷ್ಟ್ರೀಕರಣ ಮಾಡಲಾದ ಅಮೆರಿಕನ್ ಉದ್ದಿಮೆಗಳಿಗೆ ಕ್ಯೂಬಾದ ಸರಕಾರ ಪರಿಹಾರ ಧನನೀಡಲು ಸಿದ್ಧವಿರುವುದಾಗಿ ತಿಳಿಸಿದರೂ ಪ್ರಯೋಜನವಾಗಲಿಲ್ಲ. ಈಗ ಕ್ಯೂಬಾ ಏಕಾಂಗಿಯಾಗಿಲ್ಲ. ಸೋವಿಯೆತ್ ಒಕ್ಕೂಟದ ವಿಘಟನೆಯ ನಂತರ ತೀವ್ರವಾದ ಪ್ರತಿಕೂಲ ಪರಿಸ್ಥಿತಿಯನ್ನು ಅನುಭವಿಸಿದ ಕ್ಯೂಬಾಗೆ ಬೆಂಬಲವಾಗಿ ಇಂದು ಲ್ಯಾಟಿನ್ ಅಮೆರಿಕದ ದೇಶಗಳು ನಿಂತಿವೆ. ಇಪ್ಪತ್ತೊಂದನೆ ಶತಮಾನದಲ್ಲಿ ಎಚ್ಚೆತ್ತುಕೊಂಡಿರುವ ಲ್ಯಾಟಿನ್ ಅಮೆರಿಕದ ದೇಶಗಳು ನೆರೆಯ ಬಲಿಷ್ಠ ಅಮೆರಿಕಾಗೆ ಸವಾಲೊಡ್ಡುತ್ತಿವೆ. ಅಮೆರಿಕದ ಮುಕ್ತಮಾರುಕಟ್ಟೆಯ ಅರ್ಥವ್ಯವಸ್ಥೆಗೆ ಪರ್ಯಾಯವಾಗಿ ಹೊಸ ಹಾದಿ ನಿರ್ಮಿಸಲು ಅಡಿಯಿರಿಸಿವೆ. ಐವತ್ತು ವರ್ಷಗಳಿಂದ ಅಮೆರಿಕ ನೀಡುತ್ತಿರುವ ಎಲ್ಲ ಕಿರುಕುಳಗಳನ್ನು ಸಹಿಸಿಕೊಂಡು, ದಿಟ್ಟವಾಗಿ ನಿಂತಿರುವ ಕ್ಯೂಬಾದ ಜನತೆ ಮುನ್ನಡೆಯಲು ಸನ್ನದ್ಧರಾಗಿದ್ದಾರೆ.

ಅಮೆರಿಕ ತನ್ನ ದುರಾಕ್ರಮಣ ಚಾಳಿಯನ್ನು ಮುಂದುವರಿಸುತ್ತಿದ್ದರೂ ೨೦೧೨ ಖಂಡಿತ ೧೯೬೨ ಅಲ್ಲ. ಐವತ್ತು ವರ್ಷಗಳಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ಅಂದಿನ ಘಟನೆಗಳನ್ನು ನೆನಪಿನಲ್ಲಿರಿಸಿಕೊಂಡು ಹೊಸ ಹಾದಿ ತುಳಿಯಲು ಪ್ರಪಂಚದ ಜನತೆ ಸಿದ್ಧರಾಗಬೇಕಾಗಿದೆ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಹಿಡಿಯದ ಹಾದಿ







ಲೇಖಕರು : **ಗಿರಡ್ಡಿ ಗೋವಿಂದರಾಜ**
ಪುಟ : ೧೨೮ ಬೆಲೆ : ರೂ. ೬೦
ಪ್ರಕಾಶಕರು : ಮನೋಹರ ಗ್ರಂಥಮಾಲೆ, ಧಾರವಾಡ

ಗಿರಡ್ಡಿ ಗೋವಿಂದರಾಜ ಅವರ 'ಹಿಡಿಯದ ಹಾದಿ' ಕೃತಿಯು ಹಲವು ಕಾರಣಗಳಿಂದಾಗಿ ಮಹತ್ವದ್ದಾಗಿದೆ. ಮೊದಲನೆಯದಾಗಿ ಲೇಖಕರು ತಮ್ಮ ಬದುಕಿನ ಹಲವು ಪ್ರಸಂಗಗಳನ್ನು ಆತ್ಮಕಥಾನಕ ಧಾಟಿಯಲ್ಲಿ ನಿರೂಪಿಸಿರುವುದು. ತಮ್ಮ ಜೀವನದ ಅನುಭವದಿಂದಲೇ ವಸ್ತುವನ್ನು ಆಯ್ಕೆಮಾಡಿಕೊಂಡಿರುವುದರಿಂದ ಅದರ ಆಶಯಕ್ಕೆ ತರ್ಕ ಮತ್ತು ಕಲ್ಪನೆಗಳನ್ನು ಕಥನ ಮಾದರಿಯಲ್ಲಿ ಐಕ್ಯಗೊಳಿಸಿರುವುದು. ಎರಡನೆಯದಾಗಿ, ಇಲ್ಲಿಯ ಕೆಲವು ಪ್ರಬಂಧಗಳುದ್ದಕ್ಕೂ ಲಘು ಹಾಸ್ಯ ಶೈಲಿಯೊಂದು ನಿರೂಪಣೆಯ ಭಾಷೆಯಲ್ಲಿ ಹದವಾಗಿ ಬೆರೆತಿರುವುದು. ಲೇಖಕರು ತಮ್ಮ ಹಲವು ವೈಯಕ್ತಿಕ ದೌರ್ಬಲ್ಯ ಮತ್ತು ಮಿತಿಗಳನ್ನು ಕಂಡುಕೊಂಡು ತಮ್ಮನ್ನು ತಾವೇ ಗೇಲಿ ಮಾಡಿಕೊಳ್ಳುತ್ತಾರೆ.

**ಸುಭಾಷ್ ರಾಜಮಾನೆ**

**ಕ**ನ್ನಡದ ಯಾವುದೋ ಒಂದು ಪತ್ರಿಕೆಯ ಸಂದರ್ಶನಕ್ಕಾಗಿ ಗಿರಡ್ಡಿ ಗೋವಿಂದರಾಜ ಅವರನ್ನು ಸಂದರ್ಶನಕಾರ ಒಂದು ಪ್ರಶ್ನೆ ಕೇಳುತ್ತಾನೆ: ''ನಿಮ್ಮ ಜೀವನದಲ್ಲಿ ನೀವು ಎಂದಾದರೂ ನಕ್ಕಿದ್ದೀರಾ ?'' ಎಂದು. ಗಿರಡ್ಡಿ ಅವರ ಗಂಭೀರ ಮುಖಭಾವವನ್ನು ಕಂಡು ಈ ಪ್ರಶ್ನೆಯನ್ನು ಕೇಳಿದಂತಿದೆ. ಆದರೆ ಗಿರಡ್ಡಿ ಅವರು ತಮ್ಮ ಗೆಳೆಯರೊಂದಿಗೆ ಹಾಗೂ ಆಪ್ತರೊಂದಿಗೆ ಸಾಕಷ್ಟು ನಕ್ಕಿರುವುದನ್ನು ಮತ್ತು ನೋಡಿದ ಪ್ರವೃತ್ತಿಯು ಅವರ ಬದುಕಿನಲ್ಲಿ ಹಾಸುಹೊಕ್ಕಾಗಿದೆ ಎಂಬುದಕ್ಕೆ ಅವರ 'ಹಿಡಿಯದ ಹಾದಿ' ಪ್ರಬಂಧ ಸಂಕಲನವು ಸಾಕಷ್ಟು ಕುರುಹುಗಳನ್ನು ಒದಗಿಸುತ್ತದೆ.

ಗಿರಡ್ಡಿ ಅವರು ಕಳೆದ ಐದು ದಶಕದಿಂದ ತಮ್ಮನ್ನು ಗಂಭೀರವಾದ ಸಾಹಿತ್ಯ ವಿಮರ್ಶೆಯ ಬರವಣಿಗೆಯಲ್ಲಿ ತೊಡಗಿಸಿಕೊಂಡವರು. ಅವರು ನಿಷ್ಠಾವಂತ ನವ್ಯಪಂಥದ ವಿಮರ್ಶಕರಾಗಿ ಸಾಹಿತ್ಯ ವಿಮರ್ಶಾ ಪರಂಪರೆಯಲ್ಲಿ ಚಿರಪರಿಚಿತರು. ಆದರೆ ಗಿರಡ್ಡಿಯವರೇನೂ ಮೊದ ಮೊದಲು ವಿಮರ್ಶೆಯನ್ನೇ ಬರೆದವರಲ್ಲ; ಆದರೆ ಅವರು ವಿಮರ್ಶೆಯನ್ನು ಬರೆಯುವ ಮೊದಲೇ ಕೆಲವು ಕತೆ, ಕವಿತೆ, ಪ್ರಬಂಧಗಳನ್ನೂ ಬರೆದವರು. ಮುಂದೆ ಅವರು ಪ್ರಧಾನವಾಗಿ ಕೆಲಸ ಮಾಡಿದ್ದು ಗಂಭೀರವಾದ ಸಾಹಿತ್ಯ ವಿಮರ್ಶೆಯ ಕ್ಷೇತ್ರದಲ್ಲೇ. ಆದರೆ ಪ್ರಾಸಂಗಿಕವಾಗಿ ಆಗೊಮ್ಮೆ ಈಗೊಮ್ಮೆ ಲಲಿತ ಪ್ರಬಂಧ ಗಳನ್ನೂ ಬರೆಯಲು ಹಂಬಲಿಸಿದವರು.

ಗಿರಡ್ಡಿ ಅವರು ವಿಮರ್ಶೆ ಬರೆಯುವ 'ಪ್ರಕಾರ'ವನ್ನು ಬದಲಿಸಿದ ಕಾರಣವನ್ನು ಹೀಗೆ ಹೇಳುತ್ತಾರೆ: ''ವಿಮರ್ಶೆಯಲ್ಲಿ ನಗಲಿಕ್ಕೇ ಬರುವುದಿಲ್ಲ. ಪ್ರತಿಯೊಂದು ಸಾಹಿತ್ಯ ಪ್ರಕಾರದ ಜೀವವಾಹಿನಿಯಲ್ಲೂ ಅದಕ್ಕೇ ವಿಶಿಷ್ಟವಾದ ಲಕ್ಷಣಗಳಿರುತ್ತವೆ. ವಿಧಿಲಿಖಿತದಂತೆ ಅವುಗಳನ್ನು ಮೀರಲಾಗದು. ಹಾಗೆ ವಿಮರ್ಶೆಗೆ ಗಾಂಭೀರ್ಯ ಎನ್ನುವುದೊಂದು ಶಾಪ. ತುಸು ಸಡಿಲುಬಿಟ್ಟರೆ ಅದು ಹರಟೆಯಾಗಿ, ಅಪಹಾಸ್ಯವಾಗಿ, ಅನಿಸಿಕೆಗಳ ಸಡಿಲ ಲಹರಿಯಾಗಿ - ವಿಮರ್ಶೆಯೊಂದನ್ನು ಬಿಟ್ಟು- ಇನ್ನೇನೋ ಆಗಿಬಿಡುತ್ತದೆ. ಜನ ನನ್ನನ್ನು ವಿಮರ್ಶಕ ಎಂದು ಒಪ್ಪಿದ್ದೇ ನೆಪವಾಗಿ, ಅದರ ಗಾಂಭೀರ್ಯ ನನ್ನ ಎಲ್ಲ ಬರವಣಿಗೆ, ಭಾಷಣ, ಅಧ್ಯಾಪನ, ಸ್ವಭಾವಗಳನ್ನು ಆವರಿಸಿಕೊಂಡಿರಬೇಕು. ಸಾಹಿತ್ಯ ಪ್ರಕಾರಕ್ಕೂ ಮತ್ತು ಅದರ ಭಾಷೆಗೂ ಹಾಗೂ ಅದು ಅಭಿವ್ಯಕ್ತಿಸುವ ಜೀವನ ಧೋರಣೆಗೂ ಆಂತರಿಕ ಸಂಬಂಧವಿರುತ್ತದೆ. ವಿಮರ್ಶೆ ಅಪಾರವಾದ ವಿದ್ವತ್ತು ಹಾಗೂ ಹೆಚ್ಚಿನ ಬೌದ್ಧಿಕ ಶ್ರಮವನ್ನು ಅಪೇಕ್ಷಿಸುವ ಪ್ರಕಾರ. ವಿಮರ್ಶೆ ಎಂಬುದು ಒಂದು ನಿರ್ದಿಷ್ಟವಾದ ಮತ್ತು ಖಚಿತವಾದ ದಿಕ್ಕಿನಲ್ಲಿ ಚಲಿಸುತ್ತದೆ. ಆದರೆ ಪ್ರಬಂಧವು ಊಹೆ ತರ್ಕ ಹಾಗೂ ಮಾನವ ಸಹಜ ಗುಣ ಸ್ವಭಾವಗಳ ಪರಿಚಯ ಮತ್ತು ಹೆಚ್ಚಾಗಿ ಕಾಮನ್‌ಸೆನ್ಸ್‌ಅನ್ನು ಬಯಸುತ್ತದೆ; ಪ್ರಬಂಧಗಳ ಭಾಷೆಯಂತೂ ನದಿಯಂತೆ ಅಂಕುಡೊಂಕಾಗಿ ಹೇಗೆ ಬೇಕಾದರೂ ಹರಿಯುವಂತಹದ್ದು. ಈ ವಿಮರ್ಶೆ ಎಂಬ ರಾಜಗಾಂಭೀರ್ಯದಿಂದ ಬಿಡುಗಡೆ ಪಡೆಯಲು ಗಿರಡ್ಡಿ ಅವರು ಪ್ರಬಂಧಗಳ ಕವಲು ದಾರಿಯ ಕಡೆಗೆ ಹೊರಳಿದ್ದಿರಬಹುದು. ಲೇಖಕರು ಅಥವಾ ವಿಮರ್ಶಕರು ಮತ್ತೊಂದು ಪ್ರಕಾರಕ್ಕೆ ಜಿಗಿಯಬಾರದೆಂಬ ಯಾವ ನಿಯಮವೂ ಇರುವುದಿಲ್ಲ. ಹಾಗೆ ನೋಡಿದರೆ, ನವೋದಯದ ಬಹುತೇಕ ಲೇಖಕರೆಲ್ಲ ಬಹು ಪ್ರಕಾರಗಳಲ್ಲಿ ತಮ್ಮ ಸೃಜನಶೀಲತೆಯನ್ನು ಸವೆಸಿದವರೇ ಆಗಿದ್ದಾರೆ. ಇದಕ್ಕೆ ಬೇಂದ್ರೆ, ಕುವೆಂಪು, ಮಾಸ್ತಿ, ಪುತಿನ ಅತ್ಯುತ್ತಮ ನಿದರ್ಶನರಾಗಿದ್ದಾರೆ.

ಆದರೆ ಇತ್ತೀಚೆಗೆ ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಪ್ರಸಿದ್ಧರಾಗಿರುವ ಅನೇಕ ವಿಮರ್ಶಕರು ಬೇರೆ ಬೇರೆ 'ಪ್ರಕಾರ'ಗಳತ್ತ ಹೊರಳುತ್ತಿರುವುದೇಕೆ ? ಈ ಬದಲಾವಣೆ ಅವರ ವೈಯಕ್ತಿಕ ತುಡಿತವೇ ? ಓದುಗ ವಲಯದ ಪ್ರಭಾವ ಪ್ರೇರಣೆಗಳಿದ್ದಿರ ಬಹುದೇ ? ಈ ಕುರಿತ ಅಧ್ಯಯನವು ಕುತೂಹಲಕರ ಹಾಗೂ ಮಾರ್ಮಿಕವಾಗಿರುತ್ತದೆ. ಸಿ. ಎನ್. ರಾಮಚಂದ್ರನ್ ಅವರು ಕತೆಗಳ ಬರವಣಿಗೆಯ ಕಡೆ ವಾಲಿದರು; ರಾಜೇಂದ್ರ ಚೆನ್ನಿ ಅವರು 'ಮಳೆಯಲ್ಲಿ ಬಂದಾತ' ಎಂಬ ಕಥಾಸಂಕಲನ ಮತ್ತು 'ಮಡ್ ಟೌನ್' ಕಾದಂಬರಿಯನ್ನು ಬರೆದಿದ್ದಾರೆ. ನಟರಾಜ ಹುಳಿಯಾರ್ ಅವರು 'ಡೇಡ್ ಸಾಹೇಬರು ಮತ್ತು ಇತರ ಕತೆಗಳು' ಬರೆದರು; ರಹಮತ್ ತರೀಕೆರೆ ಅವರ ಸುತ್ತಾಟದ ಕಥನಗಳಾದ 'ಕದಳಿ ಹೊಕ್ಕು ಬಂದೆ' ಕೃತಿ ಬಂತು. ನರಹಳ್ಳಿ ಬಾಲಸುಬ್ರಹ್ಮಣ್ಯ ಅವರ ಮೊದಲ ಪ್ರಬಂಧ ಸಂಕಲನ 'ಅಂತರಂಗದ ಮೃದಂಗ' ಪ್ರಕಟವಾಗಿದೆ. ಕೇಶವ ಶರ್ಮ ಅವರು 'ಒಡೆದ ಕನ್ನಡಿ' ಎಂಬ ಕಾದಂಬರಿಯನ್ನು ಬರೆದರು.

ಹಾಗಂತ ಇವರು ಯಾರೂ ಕೂಡ ಗಂಭೀರ ವಿಮರ್ಶೆಯ ಬರವಣಿಗೆಯನ್ನು ನಿಲ್ಲಿಸಿದವರಲ್ಲ. ಆದರೆ ಈ ವಿಮರ್ಶಕರು ತಾವು ಬರೆಯುತ್ತಿರುವ ವಿಮರ್ಶಾ 'ಪ್ರಕಾರ'ವನ್ನು ಬದಲಿಸಲು ಅನೇಕ ಕಾರಣಗಳಿವೆ. ಹಲವು ದಶಕಗಳಿಂದ ಕೇವಲ ವಿಮರ್ಶೆಯ ಕ್ಷೇತ್ರದಲ್ಲೇ ತೊಡಗಿಸಿಕೊಂಡಿರುವುದರಿಂದ ತಮ್ಮ ಬರವಣಿಗೆಯು 'ಏಕತಾನತೆ'ಯ ಜಾಡಿಗೆ ಬೀಳುತ್ತಿರುವ ಸಮಸ್ಯೆಯನ್ನು ಎದುರಿಸುತ್ತಿರಬಹುದು. ಅದು ಬರೆದದ್ದನ್ನೇ ಬರೆಯುವ, ಹೇಳಿದ್ದನ್ನೆ ಮತ್ತೆ ಮತ್ತೆ ಹೇಳುವ ಅಪಾಯದಿಂದ ಪಾರಾಗುವ ಹಾಗೂ ಸೃಜನಶೀಲತೆಯ ಅನ್ಯ ದಾರಿಗಳನ್ನು ಅರಸುತ್ತಿರುವ ತಂತ್ರವೂ ಆಗಿರಬಹುದು. ವಿಮರ್ಶೆಯು

ಶ್ರೀಸಾಮಾನ್ಯನಿಗೆ ತಲುಪುವುದು ಕಷ್ಟಕರ ಎಂಬ ಅಭಿಪ್ರಾಯವೂ ಇದ್ದಿರಬಹುದು. ವರ್ತಮಾನ ಪತ್ರಿಕೆಗಳು, ಮಾಸಿಕಗಳು, ಪುಸ್ತಕ ಪ್ರಕಾಶಕರು ಹಾಗೂ ಈ ಕಾಲದ ಅಂತರ್ಜಾಲ ತಾಣ ಮತ್ತು ಬ್ಲಾಗ್‌ಗಳು ಉಂಟುಮಾಡುತ್ತಿರುವ ಒತ್ತಡವೂ ಕಾರಣವಾಗಿದ್ದಿರಬಹುದು. ಇದು ಸಾಹಿತ್ಯ ವಿಮರ್ಶಕರಲ್ಲಿ ಆಗಿರುವ ಹೊಸ ಬದಲಾವಣೆ.

ಗಿರಡ್ಡಿ ಗೋವಿಂದರಾಜ ಅವರ 'ಹಿಡಿಯದ ಹಾದಿ' ಕೃತಿಯು ಹಲವು ಕಾರಣಗಳಿಂದಾಗಿ ಮಹತ್ವದ್ದಾಗಿದೆ. ಮೊದಲನೆಯದಾಗಿ ಲೇಖಕರು ತಮ್ಮ ಬದುಕಿನ ಹಲವು ಪ್ರಸಂಗಗಳನ್ನು ಆತ್ಮಕಥಾನಕ ಧಾಟಿಯಲ್ಲಿ ನಿರೂಪಿಸಿರುವುದು. ತಮ್ಮ ಜೀವನದ ಅನುಭವದಿಂದಲೇ ವಸ್ತುವನ್ನು ಆಯ್ಕೆಮಾಡಿಕೊಂಡಿರುವುದರಿಂದ ಅದರ ಆಶಯಕ್ಕೆ ತರ್ಕ ಮತ್ತು ಕಲ್ಪನೆಗಳನ್ನು ಕಥನ ಮಾದರಿಯಲ್ಲಿ ಐಕ್ಯಗೊಳಿಸಿರುವುದು. ಎರಡನೆಯದಾಗಿ, ಇಲ್ಲಿಯ ಕೆಲವು ಪ್ರಬಂಧಗಳುದ್ದಕ್ಕೂ ಲಘು ಹಾಸ್ಯ ಶೈಲಿಯೊಂದು ನಿರೂಪಣೆಯ ಭಾಷೆಯಲ್ಲಿ ಹದವಾಗಿ ಬೆರೆತಿರುವುದು. ಲೇಖಕರು ತಮ್ಮ ಹಲವು ವೈಯಕ್ತಿಕ ದೌರ್ಬಲ್ಯ ಮತ್ತು ಮಿತಿಗಳನ್ನು ಕಂಡುಕೊಂಡು ತಮ್ಮನ್ನು ತಾವೇ ಗೇಲಿ ಮಾಡಿಕೊಳ್ಳುತ್ತಾರೆ. ಇಲ್ಲಿಯ ನಿರೂಪಣೆಯು ಮುಖ್ಯವಾಗಿ ಓದುಗನನ್ನು ಉದ್ದೇಶಿಸಿಯೇ ಮಾತನಾಡುವುದರಿಂದ ಈ ಪ್ರಬಂಧಗಳು ಓದುಗನಿಗೆ ಮತ್ತಷ್ಟು ಆಪ್ತವಾಗುವಂತೆ ಮಾಡಿದೆ.

ಈ ಸಂಕಲನದ 'ಪುಸ್ತಕಗಳು', 'ಇನ್ನಷ್ಟು ಪುಸ್ತಕಗಳು', 'ಪ್ರಶಸ್ತಿ ಎಂಬ ಆಕಸ್ಮಿಕ', 'ಮುನ್ನುಡಿ ಎಂಬ ವ್ರತ', 'ಹಿಡಿಯದ ಹಾದಿ' ಮತ್ತು 'ಜಿಂಕೆ ಎಂಬ ಮಾಯಾಮೃಗ' ಇವು ಅತ್ಯುತ್ತಮ ಪ್ರಬಂಧಗಳಾಗಿವೆ. ಈ ಎಲ್ಲ ಪ್ರಬಂಧಗಳಲ್ಲೂ ಎದ್ದು ಕಾಣುವ ಗಮನಾರ್ಹವಾದ ಗುಣಧರ್ಮವೆಂದರೆ ನವಿರಾದ ವಿಡಂಬನಾತ್ಮಕ ಭಾಷಾ ಶೈಲಿಯ ಬಳಕೆ. ಉತ್ತರ ಕರ್ನಾಟಕದ ಗ್ರಾಮ್ಯ ಭಾಷೆ ಅಲ್ಲಲ್ಲಿ ಇಣುಕುತ್ತದೆ. ಈ ಪ್ರಬಂಧಗಳ ನಿರೂಪಣೆಯು ನೇರವಾಗಿ ಓದುಗರೊಂದಿಗೆ ಸಂವಾದ ನಡೆಸುವ ಶೈಲಿಯಲ್ಲಿರುವುದರಿಂದ ಅವು ಓದುಗರ ಮನಸ್ಸನ್ನು ಹಿಡಿದಿಡುವಲ್ಲಿ ಸಫಲವಾಗಿವೆ. 'ಇನ್ನಷ್ಟು ಪುಸ್ತಕಗಳು' ಅತ್ಯುತ್ತಮವಾದ ಲಲಿತ ಪ್ರಬಂಧಗಳ ಸಾಲಿಗೆ ಸೇರುವಂತಹದ್ದು. ಲೇಖಕರು ಆಧುನಿಕತೆಯ ಕೊಡುಗೆಯಾದ 'ಕೊಳ್ಳುಬಾಕ ಸಂಸ್ಕೃತಿ'ಯನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುವುದನ್ನು ಇಲ್ಲಿ ಕಾಣಬಹುದು. ಅಗತ್ಯವಿರದಿದ್ದರೂ ಮನೆಯಲ್ಲಿ ಹೊಸ ಹೊಸ ಭೌತಿಕ ವಸ್ತುಗಳು ಹಳೆಯ ಸಾಮಾನುಗಳ ಜಾಗವನ್ನು ಆಕ್ರಮಿಸಿಕೊಂಡಿವೆ. ಆಧುನಿಕತೆ ಪ್ರತಿಯೊಂದನ್ನೂ ಅನಿವಾರ್ಯ ಗೊಳಿಸುತ್ತಿರುವ ವೈರುಧ್ಯವನ್ನು ಈ ಪ್ರಬಂಧದ ನಿರೂಪಕ ಹೀಗೆ ಹೇಳುತ್ತಾನೆ: ''ಭೌತಿಕ ವಸ್ತುಗಳು ನಮ್ಮನ್ನು ಆಕರ್ಷಿಸುತ್ತ, ಅದೂ ಬೇಕು ಇದೂ ಬೇಕು ಎಂದು ಆಸೆಯನ್ನು ಕೆರಳಿಸುತ್ತ, ಕ್ರಮೇಣವಾಗಿ ನಮ್ಮನ್ನು ಆಕ್ರಮಿಸುತ್ತ ನಮ್ಮ ಬದುಕನ್ನೇ ಕಿರಿದುಗೊಳಿಸಿದಂತೆ, ನಮ್ಮನ್ನು ಬದುಕಿನ ಅಂಚಿಗೆ ಒತ್ತಿಬಿಟ್ಟಂತೆ ಅನಿಸತೊಡಗಿದೆ. ಆದರೂ ನಮಗೆ ಏನೂ ಆಗಿಲ್ಲವೆಂಬಂತೆ ಸಾಮಾನುಗಳನ್ನು ತಂದು ಮನೆಯನ್ನು ತುಂಬಿಕೊಳ್ಳುತ್ತಲೇ ಇದ್ದೇವೆ. ಆದರೆ ಯಾವುದನ್ನೂ ಕಳೆದುಕೊಳ್ಳಲು ಸಿದ್ಧರಿಲ್ಲ.'' ಆಧುನಿಕತೆ ಎಂಬುದು ಇಂದಿನ ಜನರ ಮನಸ್ಸಿನ ಮೂಲೆ ಮೂಲೆಯಲ್ಲೂ ಆವರಿಸಿಕೊಂಡಿರುವುದನ್ನು ಇದು ಧ್ವನಿಸುತ್ತದೆ.

'ಕಿಸೆಗಳ್ಳತನ' ಪ್ರಬಂಧವು ಲೇಖಕರು ಹಣ ಕಳೆದುಕೊಳ್ಳುವ ತಮ್ಮ ಸಾಮಾನ್ಯವಾದ ದೌರ್ಬಲ್ಯವನ್ನು ಯಾವುದೇ ಮುಜುಗರವಿಲ್ಲದೆ ನಿರೂಪಿಸುತ್ತದೆ. ಇಲ್ಲಿ ಲೇಖಕರು ತಮ್ಮನ್ನು ತಾವು ಗೇಲಿ ಮಾಡಿಕೊಳ್ಳುವ ಯಾವ ಒಂದು ಪುಟ್ಟ ಅವಕಾಶವನ್ನೂ ಕಳೆದುಕೊಳ್ಳಲಾರರು. ಯಾಕೆಂದರೆ, ಕಿಸೆಗಳ್ಳರಿಂದ ಆಗಾಗ ಹಣ ಕಳೆದುಕೊಳ್ಳುವುದೇ ಒಂದು ವ್ಯಸನವಾದಾಗ ನಿರೂಪಕ ತನ್ನ ಬೆಪ್ಪುತನವನ್ನು ಮುಲಾಜಿಲ್ಲದೆ ಒಪ್ಪಿಕೊಳ್ಳುತ್ತಾನೆ. ಅಷ್ಟೇ ಅಲ್ಲದೆ, ಕಿಸೆಗಳ್ಳರ ಚಾಣಾಕ್ಷತನದ ಬಗ್ಗೆ ಅಭಿಮಾನ ಮತ್ತು ಅವರು ಸಾರ್ವಜನಿಕವಾಗಿ ಸಿಕ್ಕಿಬಿದ್ದಾಗ ಸಹಾನುಭೂತಿಯೂ ವ್ಯಕ್ತವಾಗುತ್ತದೆ. ಆದರೆ ಕಿಸೆಗಳ್ಳರ ಈ ಕೃತ್ಯದ ಹಿಂದಿರುವ ಸಾಮಾಜಿಕ ಹಾಗೂ ಆರ್ಥಿಕ ಕಾರಣಗಳನ್ನು ಈ ಪ್ರಬಂಧ ಶೋಧಿಸಲು ಪ್ರಯತ್ನಿಸುವುದಿಲ್ಲ.

'ಪ್ರಶಸ್ತಿ ಎಂಬ ಆಕಸ್ಮಿಕ' ಪ್ರಬಂಧವು ಪ್ರಶಸ್ತಿಗಳಿಗಾಗಿ ನಡೆಯುವ ಲಾಬಿಯ ಹಾವಳಿಯನ್ನು ವೈನೋದಿಕ ಧಾಟಿಯಲ್ಲಿಯೇ ಅನಾವರಣಗೊಳಿಸುತ್ತದೆ. ಯಾವುದೇ ಅರ್ಹ ಲೇಖಕನಿಗೆ ಪ್ರಶಸ್ತಿ ಕೈತಪ್ಪುವ ಅಥವಾ ಅನರ್ಹ ಲೇಖಕನಿಗೆ ಅಥವಾ ಕೃತಿಗೆ ಪ್ರಶಸ್ತಿ ಸಿಗುವುದು ಕೇವಲ ಒಂದು 'ಆಕಸ್ಮಿಕ' ಎಂಬುದನ್ನು ತುಂಬ ಸಹಜವಾಗಿ ಚಿತ್ರಿಸುತ್ತದೆ. ಇದರ ನಿರೂಪಕ ಒಂದು ಕಡೆ ಹೇಳುತ್ತಾನೆ : ''ಯೋಗ್ಯತೆಗೂ ಪ್ರಶಸ್ತಿಗೂ ಸಂಬಂಧವೇ ಇಲ್ಲವೇನೋ ಅನಿಸುತ್ತದೆ. ಇದರ ಹಿಂದೆ ಕೆಲಸ ಮಾಡುವ ಇನ್ನೊಂದು ಆಕಸ್ಮಿಕವಿರುತ್ತದೆ. ಎಲ್ಲರ ಅನುಭವಕ್ಕೂ ಬಂದಿದ್ದರೂ ಯಾರೂ ಇದನ್ನು ಗಮನಿಸುವುದಿಲ್ಲ. ಪರೀಕ್ಷೆಗಳಲ್ಲಿ ಬರುವ ರ‍್ಯಾಂಕುಗಳು ಕೆಲಸ ಮಾಡುವುದೂ ಇದೇ ಆಕಸ್ಮಿಕತೆಯ ತತ್ವದ ಆಧಾರದ ಮೇಲೆ. ಹೈಸ್ಕೂಲಿನಲ್ಲಿ ಕಲಿಯುತ್ತಿದ್ದಾಗ ಪ್ರತಿವರ್ಷವೂ ನನಗೆ ಮೊದಲ ರ‍್ಯಾಂಕು ತಪ್ಪುತ್ತಿತ್ತು. ಕಾರಣವೆಂದರೆ, ನನಗಿಂತ ಜಾಣನಾದ ಒಬ್ಬ ವಿದ್ಯಾರ್ಥಿ ನಮ್ಮ ಕ್ಲಾಸಿನಲ್ಲಿದ್ದ. ಒಂದು ವೇಳೆ ಅವನು ನಮ್ಮ ಶಾಲೆಯಲ್ಲಿ ಇರದಿದ್ದರೆ ಖಂಡಿತ ಮೊದಲ ರ‍್ಯಾಂಕು ನನಗೇ ಬರುತ್ತಿತ್ತು. ಆದರೆ ಆಕಸ್ಮಿಕವಾಗಿ ಅಂಥವನೊಬ್ಬ ನನಗೆ ಗಂಟುಬಿದ್ದ. ಒಂದು ವೇಳೆ ಆಕಸ್ಮಿಕವಾಗಿ ಅವನಿಗಿಂತ ಜಾಣನಾದವನೊಬ್ಬ ನಮ್ಮ ಸ್ಕೂಲಿಗೆ ಬಂದಿದ್ದರೆ ಇವನಿಗೂ ರ‍್ಯಾಂಕು ತಪ್ಪುತ್ತಿತ್ತು. ಅವನ ಪುಣ್ಯಕ್ಕೆ ಹಾಗಾಗಲಿಲ್ಲ. ಆಕಸ್ಮಿಕವಾಗಿ ನಾನು ಬೇರೆ ಸ್ಕೂಲಿಗೆ ಹೋಗಿದ್ದರೆ ಮೊದಲ ರ‍್ಯಾಂಕು ಸಿಗುತ್ತಿತ್ತೇನೊ ಎಂದು ನನಗೆ ಆಗ ಅನಿಸುತ್ತಿತ್ತು. ಆದರೆ ಆಕಸ್ಮಿಕವಾಗಿ ಅಲ್ಲಿಯೂ ನನಗಿಂತ ಜಾಣರು ಗಂಟು ಬೀಳುತ್ತಿರಲಿಲ್ಲವೆಂಬುದಕ್ಕೆ ಏನು ಗ್ಯಾರಂಟಿ ? ಎಂದೂ ಅನಿಸುತ್ತಿತ್ತು.'' ನಿರೂಪಕನ ರಸಿಕತೆ ಮತ್ತು ವಿನೋದ ಪ್ರಜ್ಞೆಯ ಹಿಂದೆ ಲೋಕವನ್ನು ಉದಾರ ದೃಷ್ಟಿಕೋನದಿಂದ ನೋಡುವ ಗುಣವಿದೆ.

ಈ ಮೊದಲು ಪ್ರಸ್ತಾಪಿಸಿದಂತೆ ವಿಮರ್ಶೆ ಹಾಗೂ ಪ್ರಬಂಧಗಳ ಗುಣಧರ್ಮಗಳ ನಡುವೆ ಕೆಲವು ವ್ಯತ್ಯಾಸಗಳಿವೆ. ಒಬ್ಬ ವಿಮರ್ಶಕನಿಗೆ ಇಲ್ಲದಿರುವ ಅಪರಿಮಿತವಾದ ಬರವಣಿಗೆಯ ಸ್ವಾತಂತ್ರ್ಯವು ಪ್ರಬಂಧಕಾರನಿಗೆ ಇರುತ್ತದೆ. ಸಾಹಿತ್ಯವನ್ನು ವಿಶ್ಲೇಷಣೆ ಮಾಡುವ ವಿಮರ್ಶಕನಿಗೆ ತನ್ನ ವೈಯಕ್ತಿಕ ಗ್ರಹಿಕೆಯ ನೆಲೆಯೇ ತುಂಬ ಮುಖ್ಯವಾಗಿರುತ್ತದೆ. ಆದರೆ ಪ್ರಬಂಧಕಾರನಿಗೆ ಸಮಸ್ತ ಲೋಕದ ಅನುಭವವನ್ನೆ ತನ್ನದಾಗಿಸಿಕೊಳ್ಳುವ ಹಾಗೂ ಅನ್ಯರಿಂದ ಕೇಳಿದ ಸಂಗತಿಗಳನ್ನು ತನ್ನದೆಂಬಂತೆ ನಿರೂಪಿಸುವ ಹಲವಾರು ಅನುಕೂಲತೆಗಳಿವೆ. ಈ ಹಿನ್ನೆಲೆಯಲ್ಲಿ ಗಿರಡ್ಡಿ ಅವರು ಪ್ರಬಂಧಗಳ ಬರವಣಿಗೆಯಿಂದ ಆಕರ್ಷಿತರಾದಂತೆ ಕಾಣುತ್ತದೆ. ಲೇಖಕರು ಕೊಂಚ ಜನಪ್ರಿಯರಾದ ಮೇಲೆ ಅವರು ಬರೆಯುವ ಪ್ರಬಂಧಗಳ ನಿರೂಪಣೆಯಲ್ಲಿ 'ನಾನು' ಎಂಬ ಸರ್ವನಾಮದ ಬಳಕೆ ಹೆಚ್ಚಾಗಿರುತ್ತದೆ. ಯಾಕೆಂದರೆ ಅದು ಓದುಗನಿಗೆ ಕಟ್ಟಿಕೊಡುವ ಅನುಭವದ ಜಗತ್ತು ಲೇಖಕನದೇ ಎಂಬ ಭಾವನೆಯನ್ನುಂಟುಮಾಡುತ್ತದೆ. ಇದು ಆತ್ಮಕಥನದ ಮಾದರಿಗೆ ಹೆಚ್ಚು ಹತ್ತಿರವಾಗಿರುವಂತಹದ್ದು. ಕನ್ನಡದಲ್ಲಿ ಇತ್ತೀಚೆಗೆ ಬಂದಿರುವ ಹೆಚ್ಚಿನ ಪ್ರಬಂಧಗಳು ಆತ್ಮಕಥನದ ಮಾದರಿಯ ನಿರೂಪಣೆಯನ್ನು ಹೊಂದಿವೆ. ಉದಾಹರಣೆಗೆ ಎ. ಆರ್. ಮಣಿಕಾಂತ್ ಅವರ 'ಅಮ್ಮ ಹೇಳಿದ ಎಂಟು ಸುಳ್ಳುಗಳು', ಎಚ್. ಎಸ್. ವೆಂಕಟೇಶಮೂರ್ತಿ ಅವರ 'ಎಚ್ಚೆಸ್ವಿ ಅನಾತ್ಮ ಕಥನ' ಹಾಗೂ ವಸುಧೇಂದ್ರರ ಬಹುತೇಕ ಪ್ರಬಂಧಗಳು ಇದಕ್ಕೆ ಸ್ಪಷ್ಟ ಸಾಕ್ಷಿಯಾಗಿವೆ. ಹಾಗೆ ನೋಡಿದರೆ 'ಹಿಡಿಯದ ಹಾದಿ'ಯೂ ಇದಕ್ಕೆ ಹೊರತಾಗಿಲ್ಲ. ಆದ್ದರಿಂದ ಕನ್ನಡ ಪ್ರಬಂಧ ಪ್ರಕಾರವು ಖಂಡಿತವಾಗಿ ಹೊರಳು ಹಾದಿಯಲ್ಲಿದೆ ಎಂದು ಅನ್ನಿಸುತ್ತದೆ.

ಕನ್ನಡದಲ್ಲಿ ಲಲಿತ ಪ್ರಬಂಧಗಳ ಪ್ರಕಾರವು ಮೊದಲಿನಿಂದಲೂ ಹೆಚ್ಚು ನಿರ್ಲಕ್ಷಕ್ಕೆ ಒಳಗಾಗುತ್ತ ಬಂದಿದೆ. ಕತೆ ಮತ್ತು ಕಾದಂಬರಿಗಳಂತೆ ಪ್ರಬಂಧಗಳು ವಿಶಾಲವಾದ ಓದುಗ ವಲಯವನ್ನು ಪಡೆಯಲಿಲ್ಲ. ಕನ್ನಡದ ಬಹುತೇಕ ಲೇಖಕರು ಲೋಕಾಭಿರಾಮವಾಗಿ ಮತ್ತು ಪ್ರಾಸಂಗಿಕವಾಗಿ ಪ್ರಬಂಧಗಳನ್ನು ಬರೆದವರು. ಆದರೆ ಎ. ಎನ್. ಮೂರ್ತಿರಾಯರಂತಹವರು ಇದಕ್ಕೊಂದು ಅಪವಾದ; ಅಷ್ಟೇ ಅಲ್ಲದೆ ಅವರು ಲಲಿತ ಪ್ರಬಂಧಗಳನ್ನು ಕಲಾಕೃತಿಯ ಮಟ್ಟಕ್ಕೂ ಏರಿಸಿದವರು. ಆದರೆ ಕನ್ನಡ ಲಲಿತ ಪ್ರಬಂಧಗಳ ಕುರಿತು ಚರ್ಚೆಯಾದದ್ದು ಕೂಡ ಕಡಿಮೆಯೇ. ಅದರಲ್ಲೂ ನವ್ಯ ಪಂಥವು ಪ್ರಬಂಧ ಪ್ರಕಾರವನ್ನು ದೂರವೇ ಇಟ್ಟಿತ್ತು. ಯಾಕೆಂದರೆ, ಲಲಿತ ಪ್ರಬಂಧಗಳು ಬದುಕಿನ ದ್ವಂದ್ವ ಹಾಗೂ ಸಂಕೀರ್ಣತೆಗಳನ್ನು ಕಟ್ಟಿಕೊಡಲಾರವು ಎಂಬುದು ನವ್ಯ ಪಂಥದ ನಂಬಿಕೆಯಾಗಿತ್ತು. ಲಲಿತ ಪ್ರಬಂಧಗಳ 'ಪ್ರಕಾರ'ಕ್ಕೆ ಅದರದೇ ಆದ ಮಿತಿಗಳಿರುವುದು ನಿಜ. ಆದರೆ ಅದೇ ನವ್ಯ ಪಂಥದ ಮುಖ್ಯ ವಿಮರ್ಶಕರಾದ ಗಿರಡ್ಡಿಯವರು ತಮ್ಮ ನಂಬಿಕೆಯನ್ನು ಬದಲಿಸಿಕೊಂಡು ಈ ಪ್ರಬಂಧಗಳನ್ನು ಬರೆದಿರುವುದೇ ಮಹತ್ವದ ಸಂಗತಿಯಾಗಿದೆ.

**ಸುಭಾಷ್ ರಾಜಮಾನೆ**
ಕನ್ನಡ ಉಪನ್ಯಾಸಕ, ಸ.ಪ.ಪೂ. ಕಾಲೇಜು, ವಂಡ್ಸೆ-ನೆಂಪು
ಕುಂದಾಪುರ ತಾಲೂಕು, ಉಡುಪಿ ಜಿಲ್ಲೆ

**ನ**ವೆಂಬರ್ ೧೦ನ್ನು ವಿಶ್ವ ಸಂಸ್ಥೆಯು 'ಮಲಾಲಾ ದಿನ'ವನ್ನಾಗಿ ಆಚರಿಸಲು ಕರೆ ನೀಡಿತು. ಪಾಕಿಸ್ತಾನದಲ್ಲಿ ಹೆಣ್ಣುಮಕ್ಕಳ ಶಿಕ್ಷಣದ ಹಕ್ಕಿಗಾಗಿ ಚಳುವಳಿ ಹೂಡಿದ್ದಕ್ಕಾಗಿ ತಾಲಿಬಾನ್‌ರ ಗುಂಡೇಟು ತಿನ್ನಬೇಕಾಗಿ ಬಂದ ಬಾಲಕಿ ಮಲಾಲಾಳ ಸಾಹಸ, ಸಂಕಲ್ಪವನ್ನು ಗುರುತಿಸಿ ಗೌರವಿಸುವ ಆಚರಣೆಯ ಉದ್ದೇಶ ಇದರ ಹಿಂದಿತ್ತು. ಹೀಗೆಯೇ ವಿಶ್ವದಾದ್ಯಂತ ಶಿಕ್ಷಣದ ಅವಕಾಶದಿಂದ ವಂಚಿತರಾದ, ಶಾಲೆಗೆ ಹೋಗಲಾಗದ ೬.೧ ಮಿಲಿಯನ್ ಹೆಣ್ಣುಮಕ್ಕಳ ಪರವಾಗಿಯೂ ಇದನ್ನು ಆಚರಿಸಲಾಗುತ್ತಿದೆ.

ಮಲಾಲಾಳ ಹೋರಾಟಕ್ಕೆ ನಾಲ್ಕು ವರ್ಷಗಳ ಇತಿಹಾಸವೇ ಇದ್ದರೂ ಅವಳು ವಿಶ್ವದ ಕಣ್ಮಣಿಯಾದದ್ದು ಇತ್ತೀಚೆಗೆ. ಅಕ್ಟೋಬರ್ ೯, ೨೦೧೨ರಂದು ಮಲಾಲಾ ಯೂಸಫ್ ಝೈ ಶಾಲೆಯ ಬಸ್‌ನಲ್ಲಿ ಕುಳಿತು ಮನೆಗೆ ಹಿಂತಿರುಗುತ್ತಿದ್ದಾಗ ತಾಲಿಬಾನನೊಬ್ಬ ಅವಳ ಹಣೆಗೆ ಗುಂಡಿಟ್ಟು ಹೊಡೆದು ಅವಳನ್ನು ಕೊಲ್ಲಲು ಪ್ರಯತ್ನಿಸಿದ. ಗುಂಡೇಟಿನಿಂದ ಗಾಯಗೊಂಡ ಅವಳು ಕೂಡಲೇ ಪ್ರಜ್ಞೆ ತಪ್ಪಿ ಬಿದ್ದು ಗಂಭೀರ ಪರಿಸ್ಥಿತಿಯಲ್ಲಿ ಆಸ್ಪತ್ರೆ ಸೇರಬೇಕಾಯಿತು. ಈಗ ಲಂಡನ್ನಿನ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಾ ಮಲಾಲಾ ಚೇತರಿಸಿಕೊಳ್ಳುತ್ತಿದ್ದಾಳೆ. ಇಡೀ ವಿಶ್ವದ ಹಾರೈಕೆಯ ಮಹಾಪೂರ ಅವಳತ್ತ




ಹರಿದುಬಂದಿದೆ. ಈ ಘಟನೆ ನಡೆದ ನಂತರ ಅಕ್ಟೋಬರ್ ೧೨ರಂದು ಇಸ್ಲಾಮಿ ಗುರುಗಳ ಗುಂಪೊಂದು ಮಲಾಲಾಳನ್ನು ಕೊಲ್ಲಲು ಯತ್ನಿಸಿದವರ ವಿರುದ್ಧ ಫತ್ವಾ ಹೊರಡಿಸಿತು. ಆದರೆ ಇದಕ್ಕೆ ಬಗ್ಗದ ತಾಲಿಬಾನರು ಮಲಾಲಾಳನ್ನು ಮತ್ತು ಅವಳ ತಂದೆಯನ್ನು ಕೊಲ್ಲಲು ಹೊಂಚುಹಾಕುತ್ತಿದ್ದಾರೆ. ಆದರೆ ಮಲಾಲಾ ಪರ ಇಡೀ ಪಾಕಿಸ್ತಾನವೇ ನಿಂತಿದೆ. ಆಕೆಯ ಹತ್ಯೆಗೆ ಯತ್ನಿಸಿದವನ ಪತ್ತೆಗೆ ಪಾಕ್ ಸರಕಾರ ೧೦ ಲಕ್ಷ ರೂಪಾಯಿಗಳ ಬಹುಮಾನ ಘೋಷಿಸಿದೆ.

ಪಾಕಿಸ್ತಾನದ ವಾಯವ್ಯ ಸರಹದ್ದಿನ ಗಲಭೆಗ್ರಸ್ತ ಸ್ವಾಟ್ ಜಿಲ್ಲೆಯಲ್ಲಿ ಹೆಣ್ಣುಮಕ್ಕಳ ಖಾಸಗಿ ಶಾಲೆಗಳನ್ನು ಮುಚ್ಚಬೇಕೆಂಬ ನಿರ್ಧಾರವನ್ನು ತಾಲಿಬಾನ್ ವಿಧಿಸಿದಾಗ ಕಳೆದ ವರ್ಷ ಸುಮಾರು ೧೫೦ ಶಾಲೆಗಳು ಮುಚ್ಚಲ್ಪಟ್ಟವು. ಸರ್ಕಾರ ಇದರ ವಿರುದ್ಧ ತೀವ್ರ ಕ್ರಮಗಳನ್ನು ಕೈಗೊಳ್ಳುವುದಾಗಿ ಹೇಳಿದ್ದರೂ ಮತ್ತೆ ಐದು ಶಾಲೆಗಳು ಮುಚ್ಚಲ್ಪಟ್ಟವು. ಚುನಾಯಿತ ಸರ್ಕಾರವಿದ್ದರೂ ಅದರ ಜೊತೆ ಜೊತೆಗೆ ತಾಲಿಬಾನಿನ ಧಿಕ್ಕತ್‌ಗಳು, ವಿಧಿ ಶಾಸನಗಳು ಈ ಜನರ ಬದುಕಿಗೆ ಮಂತ್ರದಂಡವಾಗಿವೆ. ಶಾಲೆಯಲ್ಲಿ ಅಧ್ಯಾಪಕರು ಹೆಣ್ಣುಮಕ್ಕಳಿಗೆ ಸಮವಸ್ತ್ರ ಧರಿಸಿ ಬರಬೇಡಿ, ಬಣ್ಣದ ಬಟ್ಟೆಗಳನ್ನು ಧರಿಸಿರುವುದೂ ಬೇಡ, ಎಂದೆಲ್ಲ ಎಚ್ಚರಿಕೆ ನೀಡಿದ್ದಾರೆ. ಸ್ವಾಟ್ ಕಣಿವೆಯಂತೂ ಸದಾ ತಾಲಿಬಾನರ ದಬ್ಬಾಳಿಕೆಯಿಂದ ನಲುಗಿದೆ. ೨೦೦೮ರಿಂದಲೇ ಮಲಾಲಾ ಅವಳ ಹನ್ನೊಂದನೆಯ ವಯಸ್ಸಿನಿಂದಲೇ ಮಕ್ಕಳ ಶಿಕ್ಷಣದ ಹಕ್ಕುಗಳ ಬಗ್ಗೆ ಮುಕ್ತವಾಗಿ ಮಾತನಾಡಲಾರಂಭಿಸಿದ್ದಳು. ಬಿಬಿಸಿಯಲ್ಲಿ ಬ್ಲಾಗ್ ಬರೆಯುತ್ತಿದ್ದಳು. ೨೦೦೯ರಲ್ಲಿ ಗುಲ್ ಮಕಾಯ್ ಎನ್ನುವ ಗುಪ್ತ ಹೆಸರಿನಿಂದ ಬಿಬಿಸಿಗಾಗಿ ಉರ್ದುವಿನಲ್ಲಿ ಬರೆದ ಮಲಾಲಾಳ ದಿನಚರಿಯಲ್ಲಿ ಈ ಎಲ್ಲ ವಿಷಯಗಳು ಪ್ರಸ್ತಾಪಿತವಾಗಿವೆ. ೭ನೇ ತರಗತಿಯಲ್ಲಿ ಓದುತ್ತಿದ್ದಾಗಲೇ ಈ ಶಾಲಾ ಬಾಲಕಿ, ತಾಲಿಬಾನರ ನಿಷೇಧವು ಹೇಗೆ ಅವಳ ಸಮಕಾಲೀನ ಸಂದರ್ಭದ ಬಾಲಕಿಯರ ಶಿಕ್ಷಣಕ್ಕೆ ಅಡ್ಡಿಯಾಯಿತು, ಎಂಬುದನ್ನು ಇದರಲ್ಲಿ ವಿವರಿಸಿದ್ದಾಳೆ. ನಂತರ ಬಹಿರಂಗವಾಗಿ ಪತ್ರಿಕೆಗಳಲ್ಲಿ ಮತ್ತು ಮಾಧ್ಯಮಗಳಲ್ಲಿ ಸಂದರ್ಶನ ನೀಡಿ ತಾಲಿಬಾನರ ನೀತಿಯನ್ನು ಧೈರ್ಯವಾಗಿ ಕಟುವಾಗಿ ಟೀಕಿಸಿದ್ದಾಳೆ.

''ಕೆಲವೊಮ್ಮೆ ನಾನು ಯೋಚಿಸುವೆ : ತಾಲಿಬಾನರು ನನ್ನನ್ನು ತಡೆದು ನಿಲ್ಲಿಸಿದರೆ, 'ನೀವು ಮಾಡುತ್ತಿರುವುದು ತಪ್ಪು' ಎಂದು ಅವರಿಗೆ ಹೇಳುತ್ತಾ, ನನ್ನ ಚಪ್ಪಲಿ ತೆಗೆದು ಅವರ ಮುಖಕ್ಕೆ ಹೊಡೆಯಬೇಕೆನಿಸುತ್ತದೆ. ಶಿಕ್ಷಣ ನಮ್ಮ ಹಕ್ಕು. ಅದನ್ನು ನಮ್ಮಿಂದ ಯಾರೂ ಕಸಿಯಲಾರರು. ಎಂತಹುದೇ ಸಂದರ್ಭ ಬಂದರೂ ಅದರ ವಿರುದ್ಧ ನಿಲ್ಲಬಲ್ಲ ಅಂತಸ್ಸತ್ವ ನನ್ನಲ್ಲಿದೆ. ಅವರು ನನ್ನನ್ನು ಕೊಂದರೂ (ದೇವರೇ ಹಾಗಾಗದಿರಲಿ !) ಅವರು ಮಾಡುತ್ತಿರುವುದು ತಪ್ಪೆಂದು ನಾನು ಅವರಿಗೆ ಮೊದಲು ಹೇಳುತ್ತೇನೆ'' ಎನ್ನುವ ಮಲಾಲಾಳ ನಿಲುವು ಅಲ್ಲಿನ ಇತರ ಹೆಣ್ಣುಮಕ್ಕಳ ಆಶಯವೂ ಆಗಿದೆ, ಆಗಬೇಕಿದೆ.

ಪಾಕಿಸ್ತಾನದ ಈ ಕೆಚ್ಚೆದೆಯ ಬಾಲಕಿ ಅಲ್ಲಿನ ಹೆಣ್ಣುಮಕ್ಕಳ ಶಿಕ್ಷಣದ ಸಮಸ್ಯೆಯತ್ತ ವಿಶ್ವದ ಗಮನ ಸೆಳೆದಿದ್ದಾಳೆ. ೨೦೦೯ರಲ್ಲಿ ನ್ಯೂಯಾರ್ಕ್ ಟೈಮ್ಸ್ ಅವಳ ಜೀವನ ಮತ್ತು ಅವಳ ಕಣಿವೆಯ ಹೆಣ್ಣುಮಕ್ಕಳ ದಾರುಣ ಸ್ಥಿತಿಯನ್ನು ಕುರಿತು 'ಸೆಕೆಂಡ್ ಬ್ಯಾಟಲ್ ಆಫ್ ಸ್ವಾಟ್' ಎಂಬ ಸಾಕ್ಷ್ಯಚಿತ್ರವನ್ನು ತೆಗೆದಿದೆ. ಅವಳನ್ನು 'ಸ್ವಾಟ್ ಜಿಲ್ಲಾ ಮಕ್ಕಳ ಪರಿಷತ್ತಿ'ನ ಅಧ್ಯಕ್ಷಳನ್ನಾಗಿ ಮಾಡಿದ್ದರು. ಅವಳ ಸಾಹಸ, ಸಾಧನೆಗಾಗಿ ೨೦೧೧ರ ಅಕ್ಟೋಬರ್‌ನಲ್ಲಿ ಮಲಾಲಾಳ ಹೆಸರನ್ನು ಅಂತರರಾಷ್ಟ್ರೀಯ ಶಾಂತಿ ಪ್ರಶಸ್ತಿಗಾಗಿ ಸೂಚಿಸಿದ್ದರು. ಅದಾದ ಎರಡು ತಿಂಗಳ ನಂತರ ಪಾಕಿಸ್ತಾನದ ಮೊದಲ ರಾಷ್ಟ್ರೀಯ ಯುವ ಪ್ರಶಸ್ತಿಯು ಮಲಾಲಾಳಿಗೆ ಸಂದಿತು.

ಮಲಾಲಾಳ ಸಮಸ್ಯೆ ಕೇವಲ ಪಾಕಿಸ್ತಾನಕ್ಕೆ ಮಾತ್ರ ಸೀಮಿತವಲ್ಲ. ವಿಶ್ವದ ಚರಿತ್ರೆಯಲ್ಲಿ ಸ್ತ್ರೀಶಿಕ್ಷಣಕ್ಕಾಗಿ ಹೋರಾಟ ನಡೆಸಿದವರ ದೀರ್ಘ ಪರಂಪರೆಯಿದೆ. ಭಾರತದ ಹೆಣ್ಣುಮಕ್ಕಳೂ ಕೂಡ ಇಂತಹ ಕಷ್ಟದ ಹಾದಿಯನ್ನೇ ತುಳಿದಿದ್ದಾರೆ. ಸುಮಾರು ಎರಡು ಶತಮಾನದ ಹಿಂದೆ ಸಾವಿತ್ರಿ ಬಾಯಿ ಫುಲೆಯಂತಹವರು ಶಿಕ್ಷಣ ಪಡೆಯಲು ಮತ್ತು ಅದರ ಪ್ರಸಾರ ಮಾಡಲು ಪಟ್ಟ ಕಷ್ಟ ಭಾರತದ ಚರಿತ್ರೆಯಲ್ಲಿ ಮರೆಯಲಾಗದ್ದು. ಈಗಲೂ ಬಡತನ, ಬಾಲ್ಯವಿವಾಹ ಮತ್ತು ಕಂದಾಚಾರಗಳೇ ಆಳುತ್ತಿರುವ ಗ್ರಾಮೀಣ ಭಾರತದಲ್ಲಿಯಂತೂ ಶಿಕ್ಷಣ ಹೆಣ್ಣುಮಕ್ಕಳಿಗೆ ಗಗನ ಕುಸುಮವಾಗಿದೆ. ಕಳೆದ ಶತಮಾನದ

ಡಾ|| ಎನ್. ಗಾಯತ್ರಿ

ಹಿಟ್ಲರನ ನಾಜಿವಾದದಂತೆಯೇ ಎಂಭತ್ತರ ದಶಕದಲ್ಲಿ ಹುಟ್ಟಿಕೊಂಡ ತಾಲಿಬಾನೀಕರಣವು ಆಧುನಿಕ ಜಗತ್ತಿನ ಎಲ್ಲ ತಂತ್ರಕೌಶಲಗಳನ್ನು ಬಳಸಿಕೊಂಡು ಹೆಣ್ಣಿನ ದಮನ ಮಾಡುತ್ತಿದೆ. ಧರ್ಮದ ಬಿಗಿಹಿಡಿತದಲ್ಲಿ ಹೆಣ್ಣಿನ ಸ್ವಾತಂತ್ರ್ಯಕ್ಕೆ ತಡೆಯೊಡ್ಡುವ ತಾಲಿಬಾನೀಕರಣದ ಹಲವಾರು ಛಾಯೆಗಳು ಭಾರತದಲ್ಲಿಯೂ ಇಂದು ನಮ್ಮ ಮುಂದೆ ವಿಜೃಂಭಿಸುತ್ತಿವೆ. ಪ್ರಗತಿಯ ಮಂತ್ರ ಹೇಳುತ್ತಲೇ ಪಿತೃ ಪ್ರಾಧಾನ್ಯತೆಯೊಂದಿಗೆ ತಾಲಿಬಾನೀಕರಣದ ಕೊಡಲಿಯು ಹೆಣ್ಣಿನ ಶಿಕ್ಷಣವಷ್ಟೇ ಅಲ್ಲ, ಅವಳ ದೇಹ ಮತ್ತು ಮನಸ್ಸಿನ ಎಲ್ಲಾ ಸ್ವಾತಂತ್ರ್ಯವನ್ನೂ ಕಸಿದುಕೊಳ್ಳುತ್ತಿದೆ. ಇಂದು ದೇಶದಲ್ಲಿ ವ್ಯಾಪಕವಾಗಿ ಆವರಿಸಿರುವ ಕೋಮುವಾದಿ ರಾಜಕಾರಣ ಹೆಣ್ಣಿನ ಮನಸ್ಸಿನಲ್ಲಿ ಆತಂಕದ ದಟ್ಟ ನೆರಳನ್ನು ಹಬ್ಬಿಸಿದೆ. ಶಾಲೆಗೆ ಬರುವ ಹೆಣ್ಣುಮಕ್ಕಳ ಮೇಲೆ 'ಸಂಸ್ಕೃತಿ'ಯ ಹೆಸರಿನಲ್ಲಿ ವಸ್ತ್ರಸಂಹಿತೆಯನ್ನು ವಿಧಿಸುವ ಸಂಪ್ರದಾಯ ಇಂದು ದಿನನಿತ್ಯ ಹೆಚ್ಚುತ್ತಿದೆ. ದಕ್ಷಿಣ ಕನ್ನಡದ ಶಾಲೆಯೊಂದರಲ್ಲಿ ಹೆಣ್ಣುಮಕ್ಕಳು ತಮ್ಮ ಬುರ್ಖಾವನ್ನು ತರಗತಿಯೊಳಗೆ ಬಿಚ್ಚಿಡಬೇಕೋ, ಇಲ್ಲವೆ ಶಾಲೆಯ ಆವರಣದ ಹೊರಗೆ ಬಿಚ್ಚಿಡಬೇಕೋ ಎಂಬುದೇ ಇತ್ತೀಚೆಗೆ ಒಂದು ದೊಡ್ಡ ಸಮಸ್ಯೆಯಾದದ್ದನ್ನು ಇನ್ನೂ ಯಾರೂ ಮರೆತಿಲ್ಲ.



ಇಂದು ಭಾರತದಲ್ಲಿ ನಡೆಯುತ್ತಿರುವ ಮರ್ಯಾದಾ ಹತ್ಯೆಗಳು ನಮ್ಮ ಸಾಮಾಜಿಕ ಜೀವನವನ್ನು ಮಧ್ಯಯುಗದ ಕಾಲಕ್ಕೆ ಕೊಂಡೊಯ್ಯುತ್ತಿವೆ. ಹೆಚ್ಚುತ್ತಿರುವ ಸ್ತ್ರೀಭ್ರೂಣ ಹತ್ಯೆ ಮತ್ತು ಹೆತ್ತವರೇ ತಮ್ಮ ಮಕ್ಕಳನ್ನು ಕೈಯಾರೆ ಕೊಲ್ಲುತ್ತಿರುವ ಘಟನೆಗಳು ದಿನನಿತ್ಯ ಕೇಳಿಬರುತ್ತಿವೆ. ಜಾತಿ, ಮತಗಳ ಎಲ್ಲೆಯನ್ನು ಮೀರಿ ಮದುವೆಯಾಗುತ್ತಿರುವ ಯುವಜನಾಂಗದ ಮೇಲೆ ಖಾಪ್ ಪಂಚಾಯತಿಯು ತನ್ನ ನೇರ ನೈತಿಕ ದಂಡವನ್ನು ಬೀಸುತ್ತಿದೆ. ಆಧುನಿಕತೆ, ಸಂಪ್ರದಾಯ ಮತ್ತು ಪಿತೃಪ್ರಾಧಾನ್ಯತೆ - ಮೂರೂ ಮುಪ್ಪುರಿಗೊಂಡು ಇಂದು ಭಾರತದಲ್ಲೂ ತಾಲಿಬಾನೀಕರಣ ವಿಜೃಂಭಿಸುತ್ತಿದೆ. ಮೀಸಲಾತಿಯಿಂದಾಗಿ ಕೆಳಹಂತದ ಅಧಿಕಾರ ಕೇಂದ್ರಗಳಲ್ಲಿ ಮಹಿಳೆಯರ ಪ್ರಾತಿನಿಧ್ಯ ಮತ್ತು ಉದ್ಯೋಗಕ್ಷೇತ್ರಗಳಲ್ಲಿ ಹೆಚ್ಚುತ್ತಿರುವ ಮಹಿಳೆಯರ ಭಾಗವಹಿಸುವಿಕೆಯಿಂದಾಗಿ ಶ್ರೇಣೀಕೃತ ಸಮಾಜದಲ್ಲಿನ ಪಲ್ಲಟಗಳು ಗಂಡು ಮನಸ್ಸಿಗೆ ಪಥ್ಯವಾಗುತ್ತಿಲ್ಲ. ಇದರ ಜೊತೆಗೆ ಕೋಮುವಾದವೂ ಸೇರಿದರೆ, ಮಂಗನಿಗೆ ಹೆಂಡ ಕುಡಿಸಿದಂತೆ. ಕೆಲವು ತಿಂಗಳ ಹಿಂದೆ ಗುವಾಹತಿಯಲ್ಲಿ ಅಪ್ರಾಪ್ತ ವಯಸ್ಸಿನ ಹೆಣ್ಣುಮಗಳೊಬ್ಬಳ ಮೇಲೆ ಪುರುಷರು ಸಾರ್ವಜನಿಕವಾಗಿ ಆಕ್ರಮಣ ಮಾಡಿದ್ದು, ಮಂಡ್ಯದ ಬಳಿ ರೈಲಿನಲ್ಲಿಯೇ ಹೆಣ್ಣನ್ನು ಮಾರಾಟಕ್ಕೆ ಕರೆದು, ಒಪ್ಪದ ಅವಳನ್ನು ರೈಲಿನಿಂದ ಹೊರಕ್ಕೆ ತಳ್ಳಿದ ಘಟನೆ, ಮಂಗಳೂರಿನ ಖಾಸಗಿ 'ಹೋಂ ಸ್ಟೇ'ನಲ್ಲಿ ಹುಟ್ಟಿದ ಹಬ್ಬ ಆಚರಿಸುತ್ತಿದ್ದ ಕಾಲೇಜು ವಿದ್ಯಾರ್ಥಿಗಳ ಮೇಲೆ ಹಿಂದೂ ಜಾಗರಣ ವೇದಿಕೆ ಕಾರ್ಯಕರ್ತರು ನಡೆಸಿರುವ ದೈಹಿಕ ಹಲ್ಲೆ – ಈ ಎಲ್ಲ 'ನೈತಿಕ ಪೊಲೀಸ್‌ಗಿರಿ'ಯು ಮಾನವ ಸಭ್ಯತೆಯ ಎಲ್ಲ ಗಡಿರೇಖೆಗಳನ್ನು ಮೀರಿ ನಿಂತದ್ದು.

ವಿಶ್ವದಲ್ಲೇ ಅತ್ಯಂತ ಪ್ರಗತಿಪರವಾದ ಸಂವಿಧಾನ ಭಾರತದ್ದು ಎಂದು ಹೆಮ್ಮೆಯಿಂದ ಹೇಳುವ ನಾವು ಸಂವಿಧಾನದ ಆಶಯಗಳನ್ನು ಮಣ್ಣುಗೂಡಿಸುವ ನಮ್ಮ ದೇಶದ ಖಾಪ್ ಪಂಚಾಯತಿಗಳ ಅಟ್ಟಹಾಸವನ್ನು ತಡೆಗಟ್ಟಲು ಏನು ಮಾಡಿದ್ದೇವೆ ? ಸರಕಾರ ಈ ದಿಕ್ಕಿನಲ್ಲಿ ಯಾವ ಕ್ರಮ ಕೈಗೊಂಡಿದೆ ? ರಾಜಕೀಯದ ಅಧಿಕಾರದ ಗೂಟ ಹಿಡಿದ ಚುನಾಯಿತ ಮಂದಿಯೂ ದಿನಬೆಳಗಾದರೆ ಆಡುತ್ತಿರುವ ಮಾತು, ನಡೆಯುತ್ತಿರುವ ನೀತಿ ಸ್ತ್ರೀವಿರೋಧಿಯಷ್ಟೇ ಅಲ್ಲ ಅಮಾನವೀಯವೂ ಆಗಿದೆ. ಹೆಣ್ಣುಮಕ್ಕಳು ಮೇಲಿನ ಅತ್ಯಾಚಾರ ತಪ್ಪಿಸಲು ಅವರಿಗೆ ಬೇಗ ಮದುವೆ ಮಾಡಬೇಕು ಎನ್ನುವ, ಅವರಿಗೆ ವಸ್ತ್ರಸಂಹಿತೆಯನ್ನು ವಿಧಿಸುವ, ಹೆಣ್ಣುಮಕ್ಕಳು ನಾಪತ್ತೆಯಾಗುವುದನ್ನು ತಪ್ಪಿಸಲು ಅವರಿಗೆ ಮೊಬೈಲ್ ಕೊಡಬಾರದು ಎನ್ನುವ ಪರಿಹಾರ ನೀತಿಗಳು ನಮ್ಮ ಅಧಿಕಾರ ಕೇಂದ್ರಗಳ ಬೇಜವಾಬ್ದಾರಿ ಧೋರಣೆಯನ್ನು ತೋರಿಸುತ್ತದೆ.

'ನಾನು ಮಲಾಲಾ' ಎನ್ನುವ ಘೋಷಣೆಯೊಂದಿಗೆ ೨೦೧೫ರ ಕೊನೆಯ ವೇಳೆಗೆ ವಿಶ್ವದ ಎಲ್ಲಾ ಮಕ್ಕಳು ಶಾಲೆಗೆ ಹೋಗುವಂತಹ ಸನ್ನಿವೇಶವನ್ನು ಸೃಷ್ಟಿಸಬೇಕು ಎಂಬ ವಿಶ್ವಸಂಸ್ಥೆಯ ಮನವಿಯನ್ನು ವಿಶ್ವಸಂಸ್ಥೆಯ ಜಾಗತಿಕ ಶಿಕ್ಷಣದ ವಿಶೇಷ ಅಧಿಕಾರಿಯಾಗಿರುವ ಗಾರ್ಡನ್ ಬ್ರೌನ್ ಉದ್ಘಾಟಿಸಿದರೆ, ವಿಶ್ವಸಂಸ್ಥೆಯ ಕಾರ್ಯದರ್ಶಿಯವರು ನವೆಂಬರ್ ೧೦ನ್ನು 'ಮಲಾಲಾ ದಿನ'ವನ್ನಾಗಿ ಆಚರಿಸಲು ಕರೆ ನೀಡಿದ್ದರು. ಶಿಕ್ಷಣ, ಸಂಘಟನೆ ಮತ್ತು ಹೋರಾಟ ಮಾತ್ರ ಹೆಣ್ಣಿನ ಅಸ್ತಿತ್ವಕ್ಕೆ ಘನತೆಯನ್ನು ತರಬಲ್ಲುದು ಎಂಬುದನ್ನು ಮತ್ತೆ ಮತ್ತೆ ನೆನಪಿಸುವ ದಿನ ಇದಾಗಬೇಕಿದೆ.

ಡಾ॥ ಎನ್. ಗಾಯತ್ರಿ
ನಂ. ೨೦೧, ಸ್ಕೈಲೈನ್, ಗೋಲ್ಡನ್ ರೇಸ್ ಅಪಾರ್ಟ್‌ಮೆಂಟ್ಸ್
ಛತ್ರಂ ಬ್ಲಾಕ್, ಗವೀಪುರ, ಬೆಂಗಳೂರು - ೫೬೦ ೦೧೯



# ಕೊಕ್ಕು ಮಸೆವ ಆಟ

ಆ ಕ್ಷಣ ರೆಕ್ಕೆ ಬಲಿತು ಅದೇ ಕ್ಷಣ ಹಕ್ಕಿ ಕಲಿತು
ಹಾರುವುದನ್ನು ಹಂಬಲಿಸಿ ಮುಗಿಲತ್ತ ಚಾಚಿತು
ಪುಟ್ಟ ರೆಕ್ಕೆಯನು ದಟ್ಟಗರಿಗಳನು
ಬೀಸುಗಾಳಿ ಬಿರುಗಾಳಿ ಹಕ್ಕಿ ರೆಕ್ಕೆ ತೆರೆದು
ದಿಕ್ಕು ದಿಕ್ಕುಗಳೆಲ್ಲಾ ದಿಕ್ಕೆಟ್ಟವು

ನಭಕೆ ಬಾಯ್ ಬಿಟ್ಟ ರೆಂಬೆ ಬೆಚ್ಚಗಿನ ಮಡಿಲು
ಅಮ್ಮ ಕೊಕ್ಕಿನಲಿ ಹಿಡಿತಂದ ಒಂದೊಂದೇ ಕಾಳು
ಕುಕ್ಕಿ ಕುಕ್ಕಿ ಸವಿದು ನೀರು ಕುಡಿದು ದಣಿವಾರಿದ ಹಕ್ಕಿ
ಗದ್ದೆ ತುಂಬಿದ ಬಣ್ಣ-ಬಣ್ಣದ ಜೋಳ
ಕಣ್ಣ ಬಣ್ಣದಲಿ ಮಿನುಗು ಆಸೆ
ಸಿಗದ ಕಾಳಿಗೆ ಕೊಕ್ಕು ಕುಕ್ಕುವ ಆಟ

ಕಣ್ಣಿನ ಬಿಂಬ ಕಾಣದ ನೆಲೆಗಂಬ
ರಪ್ಪನೆ ಬಡಿದ ತಲೆಯನೆತ್ತಿ
ಹರಿದ ಚಾಟಿ ನೆಲದ ಬುಗುರಿ
ತಿರುತಿರುಗಿ ಆಡುವ ಆಟ
ಹಕ್ಕಿ ಕೊರಳ ಉರುಳಿನ ಆಟ

ಮರದ ತುದಿ ನೆಲದ ತಳ
ಯಾವುದು ಗಟ್ಟಿ ಏರುತ್ತಲೇ ಇತ್ತು ತಲೆಶೂಲ
ಕಂಠಕಟ್ಟಿದ ಕುರುಡು ಕೋಗಿಲೆ
ಇಂಪು ದನಿ ಅಲ್ಲಿ
ಯಾರೋ ಹಚ್ಚಿಟ್ಟ ಹಣತೆ ಥಟ್ಟನೆ
ತಣ್ಣಗಾಯಿತು ಇಲ್ಲಿ

ಟಿ. ಪದ್ಮ
ರಾಜ್ಯಶಾಸ್ತ್ರಪ್ರಾಧ್ಯಾಪಕರು, ನಂ. ೬೫೫, ೬ನೇ ಮುಖ್ಯರಸ್ತೆ, ವಿಜಯನಗರ ಬೆಂಗಳೂರು - ೫೬೦ ೦೪೦

# ಹೆಜ್ಜೆಗುರುತು



''ಅಭಿಮಾನಿಗೆ ವೆರಾಂಡಾದಲ್ಲಿ ಚಾಪೆ ಮತ್ತು ತಲೆದಿಂಬನ್ನು ಹಾಕಿ ಕೊಟ್ಟ ಬಳಿಕ, ''ಬೆಳಗ್ಗೆ ಕಾಣುವ'' ಎಂದು ಹೇಳಿ ರಾಜಕೀಯ ಮುಖಂಡ ಕೋಣೆಯೊಳಗೆ ಹೊಕ್ಕು ಬಾಗಿಲು ಮುಚ್ಚಿದ. ಎರಡು–ಮೂರು ವಾರ್ತಾಪತ್ರಿಕೆಗಳನ್ನು ಹಾಸಿ ಅದರ ಮೇಲೆ ಮಲಗಿದ. ಚಾಪೆ, ದಿಂಬು ಇರಲಿಲ್ಲ. ಹಾಗೆ ಬಹಳಷ್ಟು ಜನರು ಬರಿ ನೆಲದ ಮೇಲೆ ಮಲಗುತ್ತಿರುವರೆಂದು ರಾಜಕೀಯ ಮುಖಂಡ ಅಂದುಕೊಂಡೇ ನಿದ್ದೆಗೆ ಜಾರಿದ. ಎಚ್ಚರಗೊಂಡಾಗ ಹಗಲು ಎಂಟು ಗಂಟೆಯಾಗಿತ್ತು! ಬಾಗಿಲು ತೆರೆದು ವೆರಾಂಡಾದತ್ತ ನೋಡಿದ. ಅಭಿಮಾನಿ ಜಾಗ ಖಾಲಿ ಮಾಡಿದ್ದ! ಅವನು ವಿದಾಯ ಹೇಳದೆ ಹೊರಟುಹೋದುದರ ಬಗ್ಗೆ ರಾಜಕೀಯ ಮುಖಂಡನಿಗೆ ಏನೂ ಅನ್ನಿಸಲಿಲ್ಲ. ಅನೇಕ ಮಂದಿ ಹಾಗೆ ಮಾಡಿದ್ದಾರೆ. ಆ ರಾಜಕೀಯ ಮುಖಂಡನೇ ಹಲವಾರು ಮನೆಗಳಲ್ಲಿ ಮಲಗಿ ವಿದಾಯ ಹೇಳದೆ ಹೊರಟು ಬಂದಿದ್ದಾನೆ.

**'ಹೆ**ಜ್ಜೆಗುರುತು' ಎಂಬ ಈ ಕತೆ ಬಹಳ ವರ್ಷಗಳ ಹಿಂದೆ ಒಂದು ರಾತ್ರಿ ರಾಜಕೀಯ ಕಾರ್ಯಕರ್ತನೊಬ್ಬ ಒಬ್ಬ ಸಾಹಿತಿಯ ಕೋಣೆಗೆ ಹೋಗಿ ಆತನೊಡನೆ ಹೇಳಿದ್ದು.

ಆ ಕತೆಯನ್ನು ಕೇಳಿದಾಗ ತಾನು ಬಹಳ ಹೊತ್ತು ಮೂಕನಾಗಿ ಕುಳಿತಿದ್ದೆನೆಂದು ಆ ಸಾಹಿತಿ ನನ್ನೊಡನೆ ಹೇಳಿದ್ದ.

ಈಗ ನಾನು ಆ ಹಳೆಯ ಕತೆಯನ್ನು ನೆನೆಯಲು ಒಂದು ನಿರ್ದಿಷ್ಟ ಕಾರಣವಿದೆ. ಅದೇನೆಂದು ಕೊನೆಗೆ ಹೇಳುತ್ತೇನೆ.

ಆ ಸಾಹಿತಿಯ ಹಾಗೆ ಆ ರಾಜಕೀಯ ಕಾರ್ಯಕರ್ತ ಕೂಡ ರಾಜಕೀಯ ಕಾರ್ಯಕರ್ತನಾದದ್ದು ತನ್ನ ಒಳ ಸೆಳೆತದಿಂದ. ಅಲ್ಲದೆ, ಯಾರ ಕೇಳಿಕೆಯಿಂದಲೂ ಅಲ್ಲವೆಂದು ಹೇಳಬಹುದು. ಆತ ತನ್ನ ಸುತ್ತಮುತ್ತಲೂ ಇರುವ ಮನುಷ್ಯರ ಜೀವನ ತೀರ ಅಸುಂದರವೂ, ಕೊಳಕೂ, ಗುಲಾಮತನದ್ದೂ ಹೌದು ಎಂದು ಅಂದುಕೊಂಡಿರಬಹುದು. ಅದನ್ನು ಸುಂದರವೂ, ಸ್ವಚ್ಛವೂ ಸ್ವತಂತ್ರವೂ ಆಗುವಂತೆ ರೂಪಿಸಲು ಸುಧಾರಣಾ ಕಾರ್ಯಕ್ರಮವನ್ನೂ ಮನಸ್ಸಿನಲ್ಲಿ ಹಮ್ಮಿಕೊಂಡಿರಬಹುದು. ಹೇಳತಕ್ಕಂಥ ಯಾವುದೇ ಶೈಕ್ಷಣಿಕ ಅರ್ಹತೆಯನ್ನು ಆತ ಹೊಂದಿರಲಿಲ್ಲ. ಆತ ಹುಟ್ಟಿದ್ದು ತೀರಾ ಬಡ ಕುಟುಂಬದಲ್ಲಿ.

ಆತ ಹದಿನೆಂಟನೇ ವಯಸ್ಸಿನಲ್ಲಿ ತನ್ನನ್ನು ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದ. ವಿವಿಧ ಸಂದರ್ಭಗಳಲ್ಲಿ ಒಟ್ಟು ಒಂಬತ್ತು ವರ್ಷಗಳನ್ನು ಜೈಲಿನಲ್ಲಿ ಕಳೆದಿದ್ದ. ಚೆನ್ನಾಗಿ ಭಾಷಣ ಮಾಡುತ್ತಿದ್ದ. ಬಹಳಷ್ಟು ಓದುತ್ತಿದ್ದ. ಉತ್ತಮ ಬುದ್ಧಿಮತ್ತೆಯನ್ನೂ ಹೊಂದಿದ್ದ.

ಮುಂದೆ ಆತ, ವಿಪುಲವಾದ ಕ್ರಾಂತಿಕಾರಿ ಕಾರ್ಯಕ್ರಮಗಳನ್ನು ಹೊಂದಿರುವ ಬೃಹತ್ತಾದ ರಾಜಕೀಯ ಪಕ್ಷದ ಅಧ್ಯಕ್ಷನಾದ.

ಆ ಕಾಲಕ್ಕೂ ಹಿಂದೆಯೇ ಆ ರಾಜಕೀಯ ಕಾರ್ಯಕರ್ತನ ಪರಿಚಯ ಆ ಸಾಹಿತಿಗೆ ಇದ್ದಿತ್ತು. ಅವರಿಬ್ಬರೂ ಜೈಲಿನಲ್ಲಿ ಒಟ್ಟಿಗೆ ಇದ್ದರು. ಅವರ ನಡುವೆ ಹಲವಾರು ಅಸಮಾನತೆಗಳಿದ್ದುವು. ಅವುಗಳಲ್ಲಿ ಮುಖ್ಯವಾದುದು ಹಾಸ್ಯಪ್ರಜ್ಞೆ. ಈ ರಾಜಕೀಯ ಕಾರ್ಯಕರ್ತನಿಗೆ ಹಾಸ್ಯಪ್ರಜ್ಞೆ ಇರಲಿಲ್ಲ. ಆದರೂ ಆತ ಆ ಸಾಹಿತಿಯೊಡನೆ ಮಾತ್ರ ನಗುತ್ತಲೇ ಮಾತನಾಡುತ್ತಿದ್ದ.

ಆ ಸಾಹಿತಿ ಆ ರಾಜಕೀಯ ಕಾರ್ಯಕರ್ತನೊಡನೆ ಆತನ ಮೈಬಣ್ಣ ಮೊದಲಾದುವುಗಳ ಕುರಿತು ಹೇಳುತ್ತಾನೆ :

''ಮುಖಂಡರೇ, ತಮ್ಮ ಮೈಯಲ್ಲಿ ಬೆಳ್ಳಗಿರುವುದು ಹಲ್ಲುಗಳು ಮತ್ತು ಕಣ್ಣಿನ ಬಿಳಿ ಪದರಗಳು ಮಾತ್ರ, ಅಲ್ವೇ ?''

''ಉಗುರುಗಳು ?''

''ಅದು ಸರಿ, ಉಗುರುಗಳೂ ಬೆಳ್ಳಗಿವೆ ! ಆದರೂ ತಾವು ಇಷ್ಟು ಕಪ್ಪಗಿರಲು ಕಾರಣವೇನು ?''

''ಧಿಕ್ಕಾರಿ, ನನ್ನ ಮೈಬಣ್ಣದ ಕುರಿತು ಹಂಗಿಸಿ ನನ್ನನ್ನು ರೇಗಿಸಲು ಯಾರಿಗೂ ಸಾಧ್ಯವಾಗದು !''

ಪೊಲೀಸರು ಆತನ ಮೈಬಣ್ಣವನ್ನು ಕುರಿತು ಆತನನ್ನು ಬೈದಿದ್ದರು. ಪೊಲೀಸರಿಗೆ ಬೈಯಲೂ ಥಳಿಸಲೂ ಪ್ರತ್ಯೇಕ ಕಾರಣವೇನೂ ಬೇಕಿಲ್ಲ. ಆ ಕಾಲದಲ್ಲಿ ದೇಶವನ್ನಾಳುತ್ತಿದ್ದದ್ದು ಬಿಳಿಯರು. ಅವರ ಗುಲಾಮರಾಗಿ ಕಂದುಬಣ್ಣದ ಮಹಾರಾಜರುಗಳಿದ್ದರು. ಆ ಮಹಾರಾಜರುಗಳ ಗುಲಾಮರಾಗಿದ್ದರು ಸಾರ್ವಜನಿಕರು.

ಅಂತಹ ಸಾರ್ವಜನಿಕರಲ್ಲಿ ಒಬ್ಬಾತನು, ಅದರಲ್ಲೂ ಒಬ್ಬ ಕರಿಯನು, ರಾಜಕೀಯ ಮಾತನಾಡುವುದು ಸರಿಯೇನು ?

ಮಲಯಾಳಂ ಮೂಲ : **ವೈಕ್ಕಂ ಮುಹಮ್ಮದ್ ಬಷೀರ್**

ಕನ್ನಡಾನುವಾದ : **ಕೆ. ಕೆ. ನಾಯರ್**

ಅದಕ್ಕೆ ಸಾರ್ವಜನಿಕರಿಂದಲೇ ತೀವ್ರ ವಿರೋಧ ಎದುರಾಯಿತು. ಆದರೂ ಆತನ ರಾಜಕೀಯ ಪಕ್ಷ ಬೆಳೆಯಿತು; ಹಲವಾರು ಹೊಡೆತಗಳನ್ನು ಎದುರಿಸುತ್ತಲೇ ಬೆಳೆಯುತ್ತ ಬಂದಿತು. ಹಾಗೆ ಬೆಳವಣಿಗೆ ಹೊಂದುತ್ತಾ ಇದ್ದ ಕಾಲದಲ್ಲಿ...

ರಾತ್ರಿ ಸುಮಾರು ಹತ್ತು ಗಂಟೆ ಸಮಯ. ಸಾಹಿತಿ ಬಾಗಿಲಿಗೆ ಒರಗಿ ಕುಳಿತು ಓರ್ವ ಯುವತಿಗೆ ಒಂದು ಪ್ರೇಮ ಪತ್ರ ಬರೆಯುತ್ತಿದ್ದ. ಆಗ ಹೊರಗಿನಿಂದ ಒಂದು ಪ್ರಶ್ನೆ ಕೇಳಿಸಿತು :

''ಧಿಕ್ಕಾರಿ ಒಳಗೆ ಇದ್ದಾರಾ ?''

ಪ್ರಶ್ನಿಸಿದ್ದು ಯಾರೆಂದು ಸಾಹಿತಿಗೆ ಗೊತ್ತಾಯಿತು. ಆತ ಹೇಳಿದ :

''ಇಲ್ಲ. ಅಗತ್ಯ ಕಾರ್ಯಕ್ಕಾಗಿ ಒಂದೆಡೆ ಹೋಗಿದ್ದಾರೆ. ಏನು ಬೇಕು ?''

''ಧಿಕ್ಕಾರಿ. ಬಾಗಿಲು ತೆಗೆಯಿರಿ !''

ಸಾಹಿತಿ ಹೇಳಿದ : ''ಮನಸ್ಸಿಲ್ಲ!''

ಆತ ಹೊರಗಿನ ಕತ್ತಲೆಯಲ್ಲಿ ನಿಂತು ಹೇಳಿದ : ''ನಾನು ಎರಡೂವರೆ ಮೈಲಿ ದೂರ ನಡೆದೇ ಬಂದದ್ದು. ಹಾದಿಯಲ್ಲಿ ಬೇರೆಲ್ಲೂ ಸ್ಥಳ ಇಲ್ಲದ್ದರಿಂದೇನು ? ಬಾಗಿಲು ತೆಗೆಯಿರಿ !''

''ರಾಜಕೀಯ ಭಿಕ್ಷುಕರಿಗೆ ಬಂದಿರಲು ನನ್ನ ಕೋಣೆ ಧರ್ಮ ಛತ್ರವೇನೂ ಅಲ್ಲ!''

''ನಾನು ಬಾಗಿಲನ್ನು ಒದ್ದು ಮುರಿಯುತ್ತೇನೆ !''

''ಮುಖಂಡರೇ, ಈ ಕೋಣೆಗೆ ಬಾಡಿಗೆ ಕೊಡುವವನು ನಾನು !''

''ಪರವಾಗಿಲ್ಲ. ಆದರೂ ಬಾಗಿಲು ತೆಗೆಯಿರಿ !''

''ನಾನು ನಿಮ್ಮ ಪಕ್ಷದವನಲ್ಲ.''

''ಹಾಗಾದ್ರೆ, ಯಾರ ಪಕ್ಷದವ ?''

''ಓರ್ವ ಹೆಣ್ಣಿನ ಪಕ್ಷದವ. ಅವಳ ಕಣ್ಣುಗಳಿಗೆ ನೀಲಿ ನೈದಿಲೆಯ ಬಣ್ಣವಿಲ್ಲ, ಅವಳ ಮುಡಿಗೆ ನಿಶಾಗಂಧಿಯ ಸುಗಂಧವೂ ಇಲ್ಲ. ಆದರೂ ನಾನು ಅವಳ ಪಕ್ಷದವನು.''

ಹೊರಗಿನಿಂದ ನಗುವಿನ ಶಬ್ದ.

''ಮನುಷ್ಯರಿಗೆ ಹುಚ್ಚು ಹಿಡಿದರೆ ಏನು ಮಾಡುವುದು ?''

''ನನಗೆ ಹುಚ್ಚು ಹಿಡಿದಿಲ್ಲ!''

''ಹಾಗಾದ್ರೆ ಬಾಗಿಲು ತೆರೆಯಿರಿ !''

''ತೆರೆಯುತ್ತೇನೆ. ಒಂದು ಕೆಲಸ ಮಾಡುವಿರಾ ?''

''ಏನು ಮಾಡ್ಬೇಕು ?''

''ನಿಮ್ಮ ಸಂಗಾತಿಗಳಾದ ರಾಜಕೀಯ ಕಾರ್ಯಕರ್ತರು ಹಗಲು – ರಾತ್ರಿ ಎಂಬ ವ್ಯತ್ಯಾಸವಿಲ್ಲದೆ ಈ ಕೋಣೆಗೆ ನುಗ್ಗಿ ನನ್ನನ್ನು ಪೀಡಿಸ್ತಾರೆ. ಅದನ್ನೊಮ್ಮೆ ತಡೆಗಟ್ಟುವಿರಾ ?''

''ಸಾಧ್ಯವಿಲ್ಲ.''

''ಹಾಗೋ !''

''ಬಾಗಿಲು ತೆರೆಯಿರಿ !''

''ತೆರೆಯುತ್ತೇನೆ. ನೀವೂ ನಿಮ್ಮ ಸಂಗಾತಿಗಳೂ ಈ ದೇಶವನ್ನು ಆಳುವ ಕಾಲದಲ್ಲಿ ನನಗೆ ಏನು ಸಹಾಯ ಮಾಡುವಿರಿ ?''

''ಒಬ್ಬ ಪೊಲೀಸ್ ಪೇದೆಯನ್ನಾಗಿ ಮಾಡ್ತೇನೆ !''

''ಬೇಡ !''

''ಪೊಲೀಸ್ ಇನ್‌ಸ್ಪೆಕ್ಟರ್ ?''

''ಬೇಡ !''

''ಕಮೀಷನರ್ ?''

''ಬೇಡ !''

''ಸ್ವತಂತ್ರ ಸೇನೆಯ ಕಮಾಂಡರ್-ಇನ್-ಚೀಫ್ ?''

''ಅದೂ ಬೇಡ !''

''ಮತ್ತೆ ?''

''ನನ್ನನ್ನು ಒಬ್ಬ ರಾಜನನ್ನಾಗಿ ಮಾಡಿದರೆ ಸಾಕು !''

''ಸಾಧ್ಯವಿಲ್ಲ. ನಮ್ಮ ಕಾರ್ಯಕ್ರಮದಲ್ಲಿ ರಾಜರುಗಳಿಲ್ಲ.''

''ಆದರೂ, ಒಂದು ಚಾರಿತ್ರಿಕ ಪಳೆಯುಳಿಕೆ ಇರಬೇಕು ಎಂಬ



ನೆಲೆಯಲ್ಲಿ ನನ್ನನ್ನು ಒಬ್ಬ ರಾಜನನ್ನಾಗಿ ಮಾಡ್ಬೇಕು. ನನಗೆ ಪ್ರಜೆಗಳು ಬೇಡ. ನನ್ನೀ ಮಾತು ಅಪ್ಪಟ ಸತ್ಯ. ನಾನು ಯಾವಾಗಲೂ ಕತೆ ಬರೆಯುವ ಕಾಯಕವನ್ನೇ ಮಾಡ್ತೇನೆ. ಇದೇ ನನ್ನ ಕಾರ್ಯಕ್ರಮ. ನಮ್ಮ ವಿಶಾಲವಾದ ಕಾಯಲ್ (ಹಿನ್ನೀರ್)ನಲ್ಲಿ ಒಂದು ಚಿಕ್ಕ ನಡುಗಡ್ಡೆ ಇದೆಯಲ್ಲವೆ ? ಆ ನಡುಗಡ್ಡೆಯಲ್ಲಿ ನನಗೆ ಒಂದು ಸಣ್ಣ ಮನೆ ಕಟ್ಟಿಸಿ ಕೊಡ್ಬೇಕು. ಆ ನಡುಗಡ್ಡೆಯಲ್ಲಿ ಧಾರಾಳವಾಗಿ ವೃಕ್ಷಗಳಿರಬೇಕು. ಒಂದು ನೈದಿಲೆ ಕೊಳವೂ ಒಂದು ಹೂದೋಟವೂ ಇರಬೇಕು.''

''ಬೇರೆ ?''

''ಆ ನಡುಗಡ್ಡೆ, ಮನೆ ಮೊದಲಾದ ಎಲ್ಲವನ್ನೂ ಬಾಡಿಗೆ ರಹಿತವಾಗಿ ನನಗೆ ಕೊಡ್ಬೇಕು. ಅಲ್ಲಿ ರೇಡಿಯೊ ಬೇಕು. ಟೆಲಿಫೋನ್ ಬೇಕು. ಇಷ್ಟೇ ಅಲ್ಲದೆ ನನಗೆ ಒಂದು 'ಉಗಿನೌಕೆ' ಕೂಡ ಬೇಕು.''

''ಒಪ್ಪಿದ್ದೇನೆ. ಬಾಗಿಲು ತೆಗೆಯೋಣವಾಗಲಿ !''

ಸಾಹಿತಿ ಬಾಗಿಲು ತೆರೆದ. ರಾಜಕೀಯ ಮುಖಂಡ ಒಳಗೆ ಪ್ರವೇಶಿಸಿದ. ಮುಖಂಡನು ಯಾವತ್ತೂ ಕಂಡಿರದಂಥ ವೇಷ! ಷರಟಿಲ್ಲ, ಮುಂಡೂ ಇಲ್ಲ. ಉಟ್ಟಿರುವುದು ಒಂದು ಹರಕು ಟವೆಲು !

ಆ ಸ್ಥಿತಿಯಲ್ಲೇ ಆತ ಆ ಸಾಹಿತಿಯ ಒರಗು ಕುರ್ಚಿಯಲ್ಲಿ ಕುಳಿತು ಏನೂ ಸಂಭವಿಸಿಲ್ಲ ಎಂಬಂತೆ ಹೇಳಿದ :

''ನನಗೆ ಅತೀವ ಬಾಯಾರಿಕೆ ಆಗುತ್ತಿದೆ, ಅತೀವ ಹಸಿವೂ ಆಗುತ್ತಿದೆ.''

ಸಾಹಿತಿ ಹೇಳಿದ : ''ಬಾಯಾರಿಕೆಯಾದರೆ ಊಟ ಮಾಡಬೇಕು. ಹಸಿವಾದರೆ ... ಹೌದು ಹಸಿವಾದರೆ ಏನು ಮಾಡಬೇಕು ?''

ಆತ ಕೇಳಿಸಲಿಲ್ಲ ಎಂಬ ಮರ್ಜಿಯಲ್ಲಿ ಹೇಳಿದ : ''ಒಂದು ಷರಟು ಬೇಕು ; ಒಂದು ಮುಂಡೂ ಬೇಕು.''

ಸಾಹಿತಿ ತನ್ನ ಪೆಟ್ಟಿಗೆ ತೆರೆದು ಒಂದು ಹೊಸ ಷರಟನ್ನೂ ಒಂದು ಹೊಸ ಮುಂಡನ್ನೂ ತೆಗೆದು ಕೊಟ್ಟ.

''ನಿಮ್ಮಂಥ ಕರಿಯರು ಮುಖಕ್ಕೆ ಬಳಿಯುವ ಕರ್ಪ್ರಗಿನ ಪೌಡರ್ ಬೇಕಾದರೆ...''

''ನನಗೆ ಹಸಿವೆ. ದಾಹವೂ ಇದೆ'' ಆತ ಹೇಳಿದ. ಹಾಗೆ ಹೇಳಿದ್ದು ಕೊಂಚ ಕಂಗಾಲಾಗಿದ್ದ ಸ್ಥಿತಿಯಲ್ಲಿ, ಬಹಳ ದಿನಗಳಿಂದ ಆಹಾರವನ್ನೇ ಸೇವಿಸಿಲ್ಲ ಎಂಬಂತೆ.

ಆದುದರಿಂದ ಸಾಹಿತಿ ಹೋಟೇಲಿಗೆ ಹೋಗಿ ಒಂದು ಪಾರ್ಸೆಲ್ ಊಟವನ್ನು ಕೊಂಡುಕೊಂಡು ಬಂದ.

ಊಟವನ್ನು ಪೂರ್ತಿ ಉಂಡು, ನೀರನ್ನು ಬೇಕಾದಷ್ಟು ಕುಡಿದು, ಒಂದು ಬೀಡಿಯನ್ನು ಪೂರ್ತಿ ಸೇದಿ ಮುಖಂಡ ಹೇಳಿದ :

''ಆಹ್ ! ಆಡಳಿತಾಧಿಕಾರವನ್ನು ವಶಪಡಿಸಿಕೊಂಡ ಬಳಿಕ ನಮ್ಮ ಮೊದಲ ಕಾರ್ಯಕ್ರಮ ಯಾವುದೆಂದು ಗೊತ್ತೆ ?''

''ಗೊತ್ತು !'' ಸಾಹಿತಿ ಹೇಳಿದ :

''ನನ್ನ ವಾಸ್ತವ್ಯಕ್ಕಾಗಿ ಒಂದು ನಡುಗಡ್ಡೆಯನ್ನು ಸುಸಜ್ಜಿತಗೊಳಿಸುವುದು !''

''ಮಣ್ಣಂಗಟ್ಟಿ ! ನಮ್ಮ ಮೊದಲ ಕಾರ್ಯಕ್ರಮ ಯಾವುದೆಂದರೆ : ಸಾಹಿತಿಗಳಲ್ಲಿ ಒಬ್ಬನೂ ಜೀವಂತವಾಗಿ ಉಳಿಯದ ಹಾಗೆ ವಧಿಸುವುದು !''

''ಆಮೇಲೆ ?'' ಆತ ಕೇಳಿದ.

''ಸಾಹಿತಿಗಳ ಹಾಗೂ ರಾಜಕೀಯ ಕಾರ್ಯಕರ್ತರ ನಡುವಿನ ವ್ಯತ್ಯಾಸ ಯಾವುದು ?''

ಸಾಹಿತಿ ಹೇಳಿದ : ''ಅದು.... ಅದು ಎಲ್ಲರಿಗೂ ಗೊತ್ತಿರುವುದೇ ಅಲ್ವೆ ?''

''ಆದರೂ, ಯಾವುದದು ?''

''ರಾಜಕೀಯ ಕಾರ್ಯಕರ್ತರಿಗೆ ಬುದ್ಧಿ ಇಲ್ಲ. ಸಾಹಿತಿಗಳಿಗೆ ಬುದ್ಧಿ ಇದೆ.'' ಆತ ನಗಾಡಿದ. ನಂತರ ಹೇಳಿದ : ''ಸಾಹಿತಿಗಳು ಮೈಗಳ್ಳರು ; ಅಪ್ಪಟ ಕಳ್ಳರು. ಥೇಟ್ –!

ಸಾಹಿತಿ ಹೇಳಿದ : ''ಎದ್ದು ಬಂದು ನನಗೆ ನಮಸ್ಕಾರ

ಮಾಡಿರಿ. ನನ್ನ ಪಾದಗಳನ್ನು ಮುಟ್ಟಿ ಶಿರದಲ್ಲಿರಿಸಿರಿ. ನಾವು ಸಾಹಿತಿಗಳು ನಿಮ್ಮ ಬಗ್ಗೆ, ರಾಜಕೀಯ ಕಾರ್ಯಕರ್ತರ ಬಗ್ಗೆ ಏನಾದರೂ ಹೇಳಿದರೆ ಅದು ಫಲಿಸುತ್ತದೆ. ಅಷ್ಟೊಂದು ಒಳ್ಳೆಯವರು ನಾವು. ನಮ್ಮಂಥ ಕಠಿಣ ದುಡಿಮೆ ಮಾಡುವ ಒಂದು ವರ್ಗ...''

''ನಾನು ಬಂದು ಕರೆದಾಗ ನೀವು ಮಾಡುತ್ತಾ ಇದ್ದದ್ದು ಏನು ?''

''ಓರ್ವ ಸ್ತ್ರೀಗೆ, ಅಂದರೆ ಓರ್ವ ಯುವತಿಗೆ ಒಂದು ಪತ್ರ ಬರೆಯುತ್ತಿದ್ದೆ. ಅವಳೊಬ್ಬಳು ಕಾಲೇಜು ಕನ್ಯೆ.''

''ಅವಳಿಗೆ ಏನು ಬೇಕಾಗಿತ್ತು ?''

''ಅವಳಿಗೆ ಏನು ಬೇಕಾಗಿತ್ತು ಎಂದು ನನಗೆ ಗೊತ್ತಿಲ್ಲ; ಗೊತ್ತಿದೆ ಎಂದರೂ ತಪ್ಪಲ್ಲ. ಅವಳೊಬ್ಬಳು ಉಪಾಯಗಾರ್ತಿ.''

''ಓಹೋ ! ಉಪಾಯಗಾರ್ತಿಯರ ಬಗ್ಗೆ ಜಾಗರೂಕತೆಯಿಂದ ಇರಬೇಕು,'' ಎನ್ನುತ್ತಾ ಆತ ಸಾಹಿತಿಯ ಮಾತಿನ ಮಧ್ಯದಲ್ಲೇ ಬಾಯಿ ಹಾಕಿದ : ''ನಾನು ಈ ಬಾರಿ ಸಬ್‌ಜೈಲಿನಲ್ಲಿದ್ದಾಗ ಒಂದು ಪ್ರಮಾದದಲ್ಲಿ ಸಿಲುಕಿದ್ದೆ.''

''ಯಾವುದು ಆ ಪ್ರಮಾದ ?''

''ಪ್ರೇಮ !''

''ಪ್ರೇಮ, ಪ್ರಮಾದವೇ ?''

''ಓರ್ವ ರಾಜಕೀಯ ಕಾರ್ಯಕರ್ತನ ಮಟ್ಟಿಗೆ ಹೌದು... ಅದೂ ಅಲ್ಲದೆ, ಈ ಅನಿಶ್ಚಿತ ಸಂದರ್ಭದಲ್ಲಿ ... ಅದೇನಿದ್ದರೂ ನಾನು ಅದರಲ್ಲಿ ಸಿಕ್ಕಿಬಿದ್ದೆ. ಹೆಚ್ಚು ವಿಳಂಬಿಸದೆ ಅವಳನ್ನು ವರಿಸಬೇಕು. ಒಂದು ಅನಿಷ್ಟವೆಂದರೆ ಅವಳು ಬಹಳಷ್ಟು ವಿದ್ಯಾವಂತಳಾಗಿರುವುದು.''

''ಚಂದ ಇದ್ದಾಳಾ ?''

''ಪರಮ ಸುಂದರಿ !''

''ಆಶ್ಚರ್ಯ ! ನಿಮ್ಮಂಥ ಒಬ್ಬ ಕರಿಯನನ್ನು ! .... ಹೋಗಲಿ, ಇದು ಹೇಗೆ ಸಂಭವಿಸಿದ್ದು ?''

''ಅವಳು ನನ್ನ ಅಭಿಮಾನಿ.''

''ಅಭಿಮಾನಿ ! ಆಶ್ಚರ್ಯ ! ಕಠ್ರಗಿನ ಓರ್ವ ರಾಜಕೀಯ ಕಾರ್ಯಕರ್ತನಿಗೂ ಅಭಿಮಾನಿ !''

''ಹೌದು. ನನ್ನ ಭಾಷಣ ಕೇಳಿ ಎಷ್ಟು ಮಂದಿ ಸ್ತ್ರೀಯರು ಅತ್ತಿದ್ದಾರೆಂದು ಬಲ್ಲಿರಾ ? ಬಹಳಷ್ಟು ಮಂದಿ ಸ್ತ್ರೀಯರು ನನಗೆ ತಮ್ಮ ಕೊರಳಿನ ಹಾಗೂ ಕೈಯ ಆಭರಣಗಳನ್ನು ಕಳಚಿ ಕೊಟ್ಟಿದ್ದಾರೆ !''

''ನಿಮ್ಮ ಈ ಪರಮ ಸುಂದರಿ ಏನು ಕೊಟ್ಟಿದ್ದಾಳೆ ?''

''ಅವಳು ನನ್ನ ಓರ್ವ ಸಂಬಂಧಿ ಎಂದು ಹೇಳಿಕೊಂಡು ನನ್ನನ್ನು ನೋಡಲು ಬಂದಳು. ಅವಳ ಮನೆ ಸಬ್‌ಜೈಲಿನ ಸಮೀಪದಲ್ಲಿತ್ತು. ಆದುದರಿಂದ ನಿತ್ಯವೂ ಉತ್ತಮ ಆಹಾರವನ್ನು ತಯಾರಿಸಿ ಸ್ವತಃ ತಂದುಕೊಡುತ್ತಿದ್ದಳು. ಹಾಗಾಗಿ ನಾನು ಅದರಲ್ಲಿ ಸಿಕ್ಕಿಬಿದ್ದೆ ! ನಿಮ್ಮ ಆ ಯುವತಿ ಯಾವ ಉಪಾಯವನ್ನು ಹೂಡಿದ್ದು ?''

ಸಾಹಿತಿ ಹೇಳಿದ :

''ನಾನು ಒಬ್ಬ ಬಡವ ಎಂಬುದು...''

''ಜಗತ್ತೆಲ್ಲ ಅರಿತಿರುವ ಸಂಗತಿಯೇ !''

''ಹೌದು, ಕಳೆದ ಶುಕ್ರವಾರ ಅವಳು ನನ್ನ ಕೈಯಲ್ಲಿ ಒಂದು ಲಕೋಟೆಯನ್ನಿರಿಸಿ ಹೇಳಿದಳು : 'ಇದೊಂದು ಕಿರುಕತೆ. ಒಮ್ಮೆ ಓದಿ ನೋಡಿ ತಿದ್ದಿಕೊಟ್ಟರೆ ಉಪಕಾರ.' ನಾನು ಇಲ್ಲಿ ಬಂದು ಲಕೋಟೆಯನ್ನು ಒಡೆದು ನೋಡಿದೆ. ಇನ್ನೇನೂ ಇರಲಿಲ್ಲ, ಹತ್ತು ರೂಪಾಯಿಯ ಐದು ನೋಟುಗಳ ಹೊರತು !''

''ಇದಾಗಿತ್ತೆ ಅವಳ ಕಿರುಕತೆ ? ಐವತ್ತು ರೂಪಾಯಿ ?''

''ಹೌದು !''

''ಅದರಲ್ಲೀಗ ಎಷ್ಟು ಉಳಿದಿದೆ ?''

''ಅದರಿಂದ ಈ ಕೋಣೆಯ ಎರಡು ತಿಂಗಳ ಬಾಕಿ ಬಾಡಿಗೆ ಕೊಟ್ಟೆ. ಹೋಟೇಲಿಗೂ ಕೊಂಚ ಕೊಟ್ಟೆ. ಒಂದು ಹೊಸ ಷರಟು ಮತ್ತು ಮುಂಡು ಖರೀದಿಸಿದೆ. ಅವನ್ನೇ ಮುಖಂಡರೇ, ನೀವು ಈಗ ಉಟ್ಟು – ತೊಟ್ಟುಕೊಂಡಿರುವುದು. ಇನ್ನು ಉಳಿದದ್ದು ಆರೂವರೆ ರೂಪಾಯಿ ಇರಬಹುದು.''

''ಅದರಲ್ಲೂ ಎರಡು ರೂಪಾಯಿ ನನಗೆ ಬೇಕು.''

ಸಾಹಿತಿ ಎರಡು ರೂಪಾಯಿ ಕೊಟ್ಟ.

ಆ ರಾಜಕೀಯ ಕಾರ್ಯಕರ್ತ ಕೇಳಿದ :

''ನಿಮಗೆ ಅನೇಕ ಅಭಿಮಾನಿಗಳಿಲ್ಲವೇ ?''

''ಬಹಳಷ್ಟಿದ್ದಾರೆ !''

''ಅವರಲ್ಲಿ ಯಾರಾದರೂ ನಿಮ್ಮನ್ನು ನೋಡಲು ಬಂದರೆ ನೀವೇನು ಮಾಡ್ತೀರಿ ?''

''ನಾನು ಮೊದಲು ಅವರ ಜೇಬು ತಡಕಾಡಿ ನೋಡುತ್ತೇನೆ. ಏನೂ ಇಲ್ಲವೆಂದಾದರೆ, ನನ್ನನ್ನು ನೋಡ್ಬೇಡಿ, ಹೊರಟುಹೋಗಿ, ಎನ್ನುತ್ತೇನೆ !''

''ನನಗೂ ಬಹಳಷ್ಟು ಅಭಿಮಾನಿಗಳಿದ್ದಾರೆ. ನಾನೊಂದು ಕತೆ ಹೇಳ್ತೇನೆ. ಹೇಗೆ ಶುರು ಮಾಡಬೇಕೆಂದು ಗೊತ್ತಾಗುತ್ತಿಲ್ಲ !''

''ಹೇಗಾದರೂ ಶುರು ಮಾಡಿ... ಒಂದಾನೊಂದು ಕಾಲದಲ್ಲಿ...''

''ಹೌದು'' ... ಆ ರಾಜಕೀಯ ಕಾರ್ಯಕರ್ತ ಹೇಳತೊಡಗಿದ : ''ಬಹಳ ಬಹಳ ಹಿಂದೆ ನನ್ನ ಹಾಗೆ ಕಠ್ರಗಿನ ಒಬ್ಬ ರಾಜಕೀಯ ಕಾರ್ಯಕರ್ತ ಇದ್ದ. ಹದಿನೆಂಟನೇ ವಯಸ್ಸಿನಿಂದ ಆತ ರಾಜಕೀಯ ಚಟುವಟಿಕೆಗಳನ್ನು ಆರಂಭಿಸಿದ. ಪೊಲೀಸರಿಂದ ಬಹಳಷ್ಟು ಪೆಟ್ಟು ತಿಂದ. ಅನೇಕ ದಿನಗಳನ್ನು ಉಪವಾಸದಲ್ಲೇ ಕಳೆದ. ಕಾರ್ಮಿಕರ, ರೈತರ, ಬುದ್ಧಿಜೀವಿಗಳ, ಹೆಚ್ಚೇಕೆ – ಒಟ್ಟು ಜನತೆಯ ಸೌಖ್ಯ ಮತ್ತು ಸಮಾಧಾನಕ್ಕಾಗಿ ಹಗಲಿರುಳು ದುಡಿಯುತ್ತಿರುವ ಅತ್ಯಂತ ಪ್ರಗತಿಪರವಾದ ಒಂದು ರಾಜಕೀಯ ಸಂಘಟನೆಯ ಅಧ್ಯಕ್ಷನಾಗಿರುವವನು ಆ ಮಹಾನುಭಾವ.

''ಆತನ ವಸತಿ ಕೂಡ ಆ ರಾಜಕೀಯ ಸಂಘಟನೆಯ ಆಫೀಸ್ ಕೋಣೆಯೇ. ಅದು ರಾಜಕೀಯ ಭಿಕ್ಷುಗಳಷ್ಟೇ ಅಲ್ಲ, ಯಾರೂ ನೆಲಸಬಹುದಾದ ಧರ್ಮಛತ್ರವಾಗಿದೆ ! ಅದರ ಬಗ್ಗೆ ಆತನಿಗೆ ಯಾವ ತಕರಾರೂ ಇಲ್ಲ. ಜನತೆಗಾಗಿ ದುಡಿಯುವವರ ಬಳಿಗೆ ಜನ ಬರುತ್ತಾರೆ; ಹಗಲು ಇರುಳು ಎನ್ನದೆ ಜನ ಬರುತ್ತಾರೆ. ಅದರಲ್ಲೇನು ತಪ್ಪು ?

''ಹಾಗೆ ಆತ ಜೀವಿಸುತ್ತಿರಲು ಎದುರಾಗುತ್ತದೆ ಆ ಒಂದು ರಾತ್ರಿ. ಆ ರಾತ್ರಿ ಆತನ ಹತ್ತಿರ ಒಬ್ಬ ಅಭಿಮಾನಿ ಬಂದ. ಸಮಯ ಸುಮಾರು ಮಧ್ಯರಾತ್ರಿ. ಮುಂಭಾಗದ ವೆರಾಂಡಾದಲ್ಲಿ ದೀಪ ಇತ್ತು. ಆಗ ಆತ, ಆ ನಮ್ಮ ಕರಿಯ ನೇತಾರ, ತನ್ನ ಏಕಮಾತ್ರ ಷರಟು ಮತ್ತು ಏಕಮಾತ್ರ ಮುಂಡು ಎರಡನ್ನೂ ಸಾಬೂನು ಹಾಕಿ ಶುಭ್ರಗೊಳಿಸಿ ಹಗ್ಗದ ಮೇಲೆ ಒಣಗಲು ಹಾಕುತ್ತಿದ್ದ. ದಾರಿ ತುಳಿಯುತ್ತ ದಣಿದು ಬಂದ ಅಭಿಮಾನಿಯೊಡನೆ ಹೆಚ್ಚೇನೂ ಮಾತಾಡಲಿಲ್ಲ. ಅಭಿಮಾನಿ ಉದ್ಯೋಗವನ್ನರಸಲು ಹತ್ತಿರದ ಪಟ್ಟಣಕ್ಕೆ ಹೋಗುತ್ತಿದ್ದವನು.

''ಅಭಿಮಾನಿಗೆ ವೆರಾಂಡಾದಲ್ಲಿ ಚಾಪೆ ಮತ್ತು ತಲೆದಿಂಬನ್ನು ಹಾಕಿ ಕೊಟ್ಟ ಬಳಿಕ, ''ಬೆಳಗ್ಗೆ ಕಾಣುವ'' ಎಂದು ಹೇಳಿ ರಾಜಕೀಯ ಮುಖಂಡ ಕೋಣೆಯೊಳಗೆ ಹೊಕ್ಕು ಬಾಗಿಲು ಮುಚ್ಚಿದ. ಎರಡು-ಮೂರು ವಾರ್ತಾಪತ್ರಿಕೆಗಳನ್ನು ಹಾಸಿ ಅದರ ಮೇಲೆ ಮಲಗಿದ. ಚಾಪೆ, ದಿಂಬು ಇರಲಿಲ್ಲ. ಹಾಗೆ ಬಹಳಷ್ಟು ಜನರು ಬರಿ ನೆಲದ ಮೇಲೆ ಮಲಗುತ್ತಿರುವರೆಂದು ರಾಜಕೀಯ ಮುಖಂಡ ಅಂದುಕೊಂಡೇ ನಿದ್ದೆಗೆ ಜಾರಿದ. ಎಚ್ಚರಗೊಂಡಾಗ ಹಗಲು ಎಂಟು ಗಂಟೆಯಾಗಿತ್ತು ! ಬಾಗಿಲು ತೆರೆದು ವೆರಾಂಡಾದತ್ತ ನೋಡಿದ. ಅಭಿಮಾನಿ ಜಾಗ ಖಾಲಿ ಮಾಡಿದ್ದ ! ಅವನು ವಿದಾಯ ಹೇಳದೆ ಹೊರಟುಹೋದುದರ ಬಗ್ಗೆ ರಾಜಕೀಯ ಮುಖಂಡನಿಗೆ ಏನೂ ಅನ್ನಿಸಲಿಲ್ಲ. ಅನೇಕ ಮಂದಿ ಹಾಗೆ ಮಾಡಿದ್ದಾರೆ. ಆ ರಾಜಕೀಯ ಮುಖಂಡನೇ ಹಲವಾರು ಮನೆಗಳಲ್ಲಿ ಮಲಗಿ ವಿದಾಯ ಹೇಳದೆ ಹೊರಟು ಬಂದಿದ್ದಾನೆ.

''ಒಂದು ವಿಶೇಷ ಕಂಡದ್ದು ಮಲಗಿದ ಚಾಪೆಯನ್ನು ಸುತ್ತಿಟ್ಟಿರಲಿಲ್ಲ ! ಚಾಪೆಯ ನಟ್ಟ ನಡುವೆ, ಅದರ ಹೃದಯದಲ್ಲೇ ಎಂಬಂತೆ ಕೆಂಪುಮಣ್ಣಿನ ಒಂದು ಹೆಜ್ಜೆ ಗುರುತು !

''ಹಿಂದೆ ಯಾವತ್ತೂ ಹಾಗೆ ಘಟಿಸಿದ್ದಿಲ್ಲವಾದರೂ ಅದೊಂದು ವಿಶೇಷ ಎಂದೇನೂ ರಾಜಕೀಯ ಮುಖಂಡ ಭಾವಿಸಲಿಲ್ಲ. ಸ್ನಾನ ಮುಗಿಸಿ ಬಂದು ಆರಿಸೋ ಕೋಲಿನ ಮೇಲೆ ನೋಡಿದಾಗ ಷರಟು ಮತ್ತು ಮುಂಡು...''

''ಷರಟು ಮತ್ತು ಮುಂಡು ?'' ಸಾಹಿತಿ ಕಾತರದಿಂದ ಕೇಳಿದ. ರಾಜಕೀಯ ಮುಖಂಡ ನಿರಾಳವಾಗಿ ಹೇಳಿದ : ''ನೋಡಿದಾಗ, ಒಗೆದು ಒಣಹಾಕಿದ್ದ ಷರಟು ಮತ್ತು ಮುಂಡು - ಎರಡೂ ಇರಲಿಲ್ಲ !''

''ಇದು ನಿನ್ನೆ ರಾತ್ರಿ ಸಂಭವಿಸಿದ್ದೇ ?''

''ಹೌದು.''

ಅವರಿಬ್ಬರೂ ಸುಮಾರು ಹೊತ್ತು ಸುಮ್ಮನೆ ಕುಳಿತರು. ಕೊನೆಗೆ ಮುಖಂಡ ಹೊರಟುಹೋದ.

ಅನಂತರ ಬಹಳಷ್ಟು ವರ್ಷಗಳು ಕಳೆದವು. ಮುಖಂಡ ಪರಮ ಸುಂದರಿಯನ್ನು ಮದುವೆಯಾದ.

ನನ್ನೊಡನೆ ಈ ಕತೆ ಹೇಳಿದ ಸಾಹಿತಿಗೆ ಯಾಕೋ ಏನೋ ತನ್ನ ಅಭಿಮಾನಿಯನ್ನು ಮದುವೆಯಾಗಲು ಸಾಧ್ಯವಾಗಲಿಲ್ಲ.

ಆ ಕಠ್ರಗಿನ ರಾಜಕೀಯ ಕಾರ್ಯಕರ್ತನನ್ನು ನಾನು ನೆನೆಯಲು ಕಾರಣ ಆತ, ಹಳೆಯ ಪೊಲೀಸರು ಹೊಸ ಸರಕಾರದ ಸಲುವಾಗಿ ಹೊಡೆದು ಕೊಂದದ್ದೊ ಏನೊ, ಹಾವು ಕಚ್ಚಿದ್ದರಿಂದ ಎಂದೂ ಹೇಳಲಾಗುತ್ತಿದೆ, ಮೊನ್ನೆ ರಾತ್ರಿ ನಿಧನ ಹೊಂದಿದನೆಂದು ನಿನ್ನೆಯ ಪತ್ರಿಕೆಯಲ್ಲಿ ಓದಿದಾಗ ನನ್ನ ಕಣ್ಣ ಮುಂದೆ ಮೂಡಿ ಬಂತು ಆ ಕೆಂಪು ಮಣ್ಣಿನ ಹೆಜ್ಜೆ ಗುರುತು.

ಮಲಯಾಳಂ ಮೂಲ : **ವೈಕ್ಕಂ ಮುಹಮ್ಮದ್ ಬಷೀರ್**
ಕನ್ನಡಾನುವಾದ : **ಕೆ. ಕೆ. ನಾಯರ್**
ಸಪ್ತಗಿರಿ ನಗರ, ೪ನೇ ಅಡ್ಡರಸ್ತೆ, ಮಣಿಪಾಲ - ೫೭೬ ೧೦೪




# ಗುರುಗ್ರಹದ ವೈಭವ

ಸಾಧಾರಣವಾಗಿ ಡಿಸೆಂಬರ್ ಎಂದರೆ ಶುಭ್ರವಾದ ಆಕಾಶ ನೋಡಲು ಸಿಗುತ್ತದೆ ಎಂದೇ ಲೆಕ್ಕ. ಸಂಜೆಯ ಆಕಾಶದಲ್ಲಿ ಎದ್ದು ಕಾಣುವ ಗ್ರಹ ಗುರು; ಇದು ಪೂರ್ವದಲ್ಲಿ ಕಾಣುತ್ತದೆ. ೩ರಂದು ಅದರ ಯುತಿ - ಅಂದರೆ ಸೂರ್ಯಾಸ್ತ ವಾಗುವಾಗ ಇದರ ಉದಯ. ಈ ಅವಧಿಯಲ್ಲಿ ಅದು ಭೂಮಿಗೆ ಕನಿಷ್ಠ ದೂರದಲ್ಲಿರುವುದರಿಂದ ಪ್ರಕಾಶವೂ ಗರಿಷ್ಠ. ರಾತ್ರಿ ಇಡೀ ನೋಡಲು ಸಿಗುತ್ತದೆ. ಅದರ ಪಕ್ಕದಲ್ಲಿರುವ ಕೆಂಪು ನಕ್ಷತ್ರವೇ ರೋಹಿಣಿ. ಸ್ವಲ್ಪ ಮೇಲೆ ಕಾಣುವ ನಕ್ಷತ್ರಗುಚ್ಛ ಕೃತ್ತಿಕಾ. ರೋಹಿಣಿಯಿಂದ ಆರಂಭವಾಗುವ ಇಂಗ್ಲಿಷ್ 'ವಿ' ಆಕಾರ ಗೂಳಿಯ ಕೋಡನ್ನು ನೆನಪಿಸುತ್ತದೆ. ಇದು ವೃಷಭ ರಾಶಿಯ ಚಿಹ್ನೆ. ರೋಹಿಣಿ ಮತ್ತು ಕೃತ್ತಿಕಾ ಎರಡನ್ನೂ ಒಳಗೊಂಡ ಒಂದು ಎಲ್ಲೆಯನ್ನು ಗುರುತಿಸಿಕೊಂಡರೆ ಅದು ವೃಷಭ ರಾಶಿಯನ್ನು ಅಂದರೆ ಗೂಳಿಯ ಆಕಾರವನ್ನು ಕಲ್ಪಿಸಿಕೊಳ್ಳಲು ನೆರವಾಗುತ್ತದೆ. ಗುರುಗ್ರಹ ಈ ಎಲ್ಲೆಯೊಳಗೇ ಇರುವುದನ್ನು ಗಮನಿಸಿ. ಗುರು ಗ್ರಹದ ಉತ್ತರಕ್ಕೆ ಇರುವ ಪಂಚಕೋನಾಕೃತಿಯ ಪುಂಜ ಆರಿಗಾ ಅಥವಾ ವಿಜಯಸಾರಥಿ. ಇದರಲ್ಲಿರುವ ಪ್ರಕಾಶಮಾನ ನಕ್ಷತ್ರವೇ ಕಪೆಲ್ಲಾ ಅಥವಾ ಬ್ರಹ್ಮ ಹೃದಯ. ಇದರಿಂದ ಉತ್ತರಕ್ಕೆ ಘ ಆಕಾರದ ಕುಂತಿ (ಕೆಸಿಯೋಪಿಯ) ಮತ್ತು ಪಾರ್ಥ (ಪರ್ಸಿಯಸ್) ಇವುಗಳನ್ನು ಕಾಣ ಬಹುದು. ನಕುಲ ಮತ್ತು ಕುಂತಿಯ ನಡುವೆ ಇರುವ ಪುಂಜವೇ ದ್ರೌಪದಿ (ಆಂಡ್ರೋಮಿಡಾ); ಆಕಾಶ ಶುಭ್ರವಾಗಿದ್ದಾಗ ಇದರಲ್ಲಿರುವ ಗೆಲಾಕ್ಸಿಯನ್ನು ಬರಿಗಣ್ಣಿ ನಿಂದಲೇ ನೋಡಬಹುದು.




ನೆತ್ತಿಯ ಮೇಲೆ ಕಾಣುವ ಚೌಕವೇ ನಕುಲ (ಪೆಗಸಸ್). ಮೀನ ರಾಶಿಯ ಎರಡು ಮೀನುಗಳು ಇದರ ಎರಡು ಪಕ್ಕಗಳಲ್ಲಿವೆ. ಚಂದ್ರನ ಬೆಳಕಿಲ್ಲದಿದ್ದಾಗ ಇವುಗಳನ್ನು ಗುರುತಿಸಬಹುದು. ೧೯-೨೦ ತಾರೀಖುಗಳಂದು ಚಂದ್ರನ ಸ್ಥಾನವನ್ನು ಗುರುತಿಸಿಕೊಳ್ಳಿ; ಮುಂದೆ ಚಂದ್ರ ದೂರ ಸರಿದ ಮೇಲೆ ಅದೇ ಸ್ಥಾನಗಳಲ್ಲಿರುವ ಮೀನುಗಳನ್ನು ಗುರುತಿಸಬಹುದು. ಮೀನಕ್ಕೂ ವೃಷಭಕ್ಕೂ ನಡುವೆ ಇರುವ ಒಂದು ಪುಟ್ಟ ತ್ರಿಕೋಣವೇ ಮೇಷ ರಾಶಿ. ನೆತ್ತಿಯ ಮೇಲೆ ಮೀನ ಇರುವುದರಿಂದ ಅದರ ಪಶ್ಚಿಮಕ್ಕೆ ಕುಂಭ, ಮಕರಗಳನ್ನು ಹುಡುಕುವ ಪ್ರಯತ್ನ ಮಾಡಬಹುದು. ಇವೆರಡೂ ಕ್ಷೀಣ ರಾಶಿಗಳು. ಕುಂಭದ ದಕ್ಷಿಣಕ್ಕೆ ಎರಡು ಪ್ರಕಾಶಮಾನ ಚುಕ್ಕೆ ಗಳಿವೆ; ಅವು ಬಕ ಎಂಬ ನಕ್ಷತ್ರಪುಂಜಕ್ಕೆ ಸೇರಿವೆ. ಬಕಕ್ಕೂ ಕುಂಭಕ್ಕೂ ನಡುವೆ ದಕ್ಷಿಣ ಮೀನ ಇದೆ. ಅದರಲ್ಲಿರುವ ಮೀನಾಕ್ಷಿ (ಫಾಮಲ್ ಹೌಟ್) ಎಂಬ ನಕ್ಷತ್ರವನ್ನೂ ಗುರುತಿಸಬಹುದು.

ವಾಯುವ್ಯದಲ್ಲಿ ಕಾಣುವ ಮೂರು ಪ್ರಕಾಶಮಾನ ಪುಂಜಗಳು ಗರುಡ (ಅಕ್ವಿಲಾ), ರಾಜಹಂಸ (ಸಿಗ್ನಸ್) ಮತ್ತು ಚೀಣಾ (ಲೈರಾ).


೨೬ರಂದು ಗುರು - ಚಂದ್ರ ಜೋಡಿ

ಗುರುಗ್ರಹದ ಹೊರತಾಗಿ ಸಂಜೆ ಕಾಣುವ ಇನ್ನೊಂದು ಗ್ರಹ ಮಂಗಳ; ಇದು ಪಶ್ಚಿಮದ ಅಂಚಿನಲ್ಲಿ ಧನುವಿನಿಂದ ಮಕರಕ್ಕೆ ಚಲಿಸುತ್ತದೆ. ಸಂಧ್ಯಾ ಪ್ರಕಾಶದಲ್ಲಿ ಗುರುತಿಸುವುದು ಕಷ್ಟ.

ಶನಿ, ಬುಧ ಮತ್ತು ಶುಕ್ರ ಮುಂಜಾವಿನಲ್ಲಿ ಪೂರ್ವದಲ್ಲಿ ಕಾಣುತ್ತವೆ. ಬುಧ ಗ್ರಹ ತುಲಾದಿಂದ ಉರಗಧರ (ಒಫಿಯೂಕಸ್) ಪುಂಜಕ್ಕೆ ಚಲಿಸುತ್ತದೆ. ೪ರಂದು ನೋಡಲು ಒಳ್ಳೆಯ ಅವಕಾಶ. ವೃಶ್ಚಿಕದ ಅನುರಾಧಾ ನಕ್ಷತ್ರದ ಸಮೀಪ ಹಾದುಹೋಗುತ್ತದೆ. ೧೨ರಂದು ಚಂದ್ರನ ಜೊತೆಗೂಡುತ್ತದೆಯಾದರೂ ಸಂಧ್ಯಾಪ್ರಕಾಶದ ಕಾರಣ ಗುರುತಿಸುವುದು ಕಷ್ಟ. ಶನಿಗ್ರಹ ಸುಮಾರು ಮೂರು ಗಂಟೆಗೇ ಉದಯಿಸುವುದರಿಂದ ಸ್ಪಷ್ಟವಾಗಿ ನೋಡಬಹುದು. ಕಳೆದ ತಿಂಗಳು ಇದರ ಜೊತೆಯಲ್ಲಿದ್ದ ಶುಕ್ರ ಈಗ ಮುಂದೆ ಸರಿದಿದೆ. ತುಲಾರಾಶಿಯನ್ನು ದಾಟಿ ತಿಂಗಳ ಕೊನೆಗೆ ವೃಶ್ಚಿಕವನ್ನು ಪ್ರವೇಶಿಸುತ್ತದೆ. ಸಾಕಷ್ಟು ಪ್ರಕಾಶಮಾನವಾದ ಈ ಗ್ರಹವನ್ನು ನೋಡಲು ಸಂಧ್ಯಾಪ್ರಕಾಶ ಅಡ್ಡಿಯಾಗುವುದಿಲ್ಲ.

ಈ ತಿಂಗಳಲ್ಲಿ ಋತುಮಾನದ ಸುಳಿವನ್ನು ನೀಡುವ ಉತ್ತರಾಯಣ ಜರುಗಲಿದೆ. ೨೧ರಂದು ಉತ್ತರಾಯಣ ಆರಂಭ. ಅಂದು ವರ್ಷದಲ್ಲಿ ಅತಿ ಕಡಿಮೆ ಅವಧಿಯ ಹಗಲು. ಅದಾದ ಮೇಲೆ ಸೂರ್ಯ ಪುನಃ ಉತ್ತರಕ್ಕೆ ಹೊರಡುತ್ತಾನೆ. ದಿನದ ಅವಧಿ ಕ್ರಮೇಣ ಹೆಚ್ಚಾಗುತ್ತಾ ಹೋಗುತ್ತದೆ.

೧೨-೧೪ರ ಅವಧಿಯಲ್ಲಿ ಮುಂಜಾವಿನಲ್ಲಿ ಆಕಾಶವನ್ನು ಗಮನಿಸಿ. ಗಂಟೆಗೆ ಐವತ್ತು ಉಲ್ಕೆಗಳು ಕಾಣುವುವು ಎಂದು ಎಣಿಕೆ. ಹತ್ತಿಪ್ಪತ್ತಾದರೂ ಕಾಣುವುವು. ಇವು ಮಿಥುನ ರಾಶಿಯಿಂದ ಹೊರಟಂತೆ ಕಾಣುವುದರಿಂದ ಜೆಮಿನಿಡ್ಸ್ ಎಂದು ಹೆಸರು. ಸಾಮಾನ್ಯವಾಗಿ ಧೂಮಕೇತು ಗಳ ಧೂಳು ಹೀಗೆ ವೃಷ್ಟಿಯನ್ನು ಉಂಟು ಮಾಡುವುವು. ಆದರೆ ಈ ಜೆಮಿನಿಡ್ಸ್ ವೃಷ್ಟಿಯ ಮೂಲ ಯಾವುದೇ ಧೂಮಕೇತುವಲ್ಲ; ಫೇಥಾನ್ ಎಂಬ ಹೆಸರಿನ ಕ್ಷುದ್ರ ಗ್ರಹ ಎಂಬ ಸೋಜಿಗದ ಸಂಗತಿ ಕೆಲವು ವರ್ಷಗಳ ಹಿಂದೆ ತಿಳಿದುಬಂದಿತು.

**ಡಿಸೆಂಬರ್ ಖಗೋಳ ದಿನಚರಿ**

- ೩ ಗುರುಗ್ರಹದ ಯುತಿ
- ೫ ಬುಧಗ್ರಹದ ಗರಿಷ್ಠ ಕೋನೋನ್ನತಿ (ಮುಂಜಾವು)
- ೬ ಚಾಂದ್ರಮಾಸದ ಕೊನೆಯ ಪಾದ (ಬಹುಳ ಅಷ್ಟ)
- ೮ ಗುರು ರೋಹಿಣಿ ನಡುವೆ ಕನಿಷ್ಠ ಕೋನ
- ೧೦ ಚಂದ್ರ - ಶನಿ ಜೋಡಿ
- ೧೧ ಶುಕ್ರ - ಚಂದ್ರ ಜೋಡಿ
- ೧೨ ಬುಧ-ಚಂದ್ರ ಜೋಡಿ (ಆಚ್ಛಾದನೆ ಭಾರತಕ್ಕೆ ಕಾಣುವುದಿಲ್ಲ) ಚಂದ್ರ -ಭೂಮಿ ನಡುವೆ ಕನಿಷ್ಠ ದೂರ
- ೧೨ ರಿಂದ ೧೪ ಜೆಮಿನಿಡ್ಸ್ ಉಲ್ಕಾವೃಷ್ಟಿ
- ೧೩ ಅಮಾವಾಸ್ಯೆ ೧೪ : ೧೨ಕ್ಕೆ
- ೧೫ ಮಂಗಳ - ಚಂದ್ರ ಜೋಡಿ
- ೨೦ ಚಾಂದ್ರಮಾಸದ ಮೊದಲ ಪಾದ (ಶುಕ್ಲ ಅಷ್ಟ)
- ೨೧ ಉತ್ತರಾಯಣ ೧೬:೪೨ಕ್ಕೆ
- ೨೩ ಶುಕ್ರ - ಜ್ಯೇಷ್ಠಾ ಜೋಡಿ
- ೨೫ ಚಂದ್ರ - ಭೂಮಿ ನಡುವೆ ಗರಿಷ್ಠ ಅಂತರ
- ೨೬ ಗುರು - ಚಂದ್ರ ಜೋಡಿ (ಆಚ್ಛಾದನೆ ಭಾರತಕ್ಕೆ ಕಾಣುವುದಿಲ್ಲ)
- ೨೮ ಹುಣ್ಣಿಮೆ ೧೫ : ೫೧ಕ್ಕೆ

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

ಡಿಸೆಂಬರ್ ತಿಂಗಳಲ್ಲಿ ನಡೆಯುತ್ತಿರುವ ಈ ಎಲ್ಲಾ ಖಗೋಳ ಘಟನೆಗಳಲ್ಲಿ ವಿಶೇಷವೇನೂ ಇಲ್ಲ; ಪ್ರತಿವರ್ಷವೂ ಡಿಸೆಂಬರ್ ೨೧ರಂದು ಉತ್ತರಾಯಣ ನಡೆಯದಿದ್ದರೆ ಚಳಿಗಾಲ ಮುಗಿಯುವುದೇ ಇಲ್ಲ ಎಂದು ನೆನಪಿಡಿ.

# ಭರವಸೆ ಕಳೆದುಕೊಳ್ಳದ ಕತೆಗಳು

## (ಹೊಸ ಶತಮಾನದಲ್ಲಿ ಹುಟ್ಟಿದ ಕತೆಗಳು)



**ಕ**ನ್ನಡ ಕಥಾಲೋಕ ಎಂದೂ ಬರಡಾದದ್ದಿಲ್ಲ. ಅಂತೆಯೇ ಈ ಶತಮಾನದ ಈ ಹತ್ತು ವರ್ಷಗಳಲ್ಲೂ(೨೦೦೦-೨೦೧೦) ಕತೆಗಳ ಸಮೃದ್ಧಿಯನ್ನು ಕಾಣಬಹುದಾಗಿದೆ. ಹೊಸ ತಲೆಮಾರು ಕಾವ್ಯಕ್ಕೆ ಮತ್ತು ಕತೆಗಳಿಗೆ ತೆರೆದುಕೊಂಡಷ್ಟು ಇನ್ನಾವುದೇ ಪ್ರಕಾರಗಳಿಗೆ ತೆರೆದುಕೊಂಡಿರುವುದು ಕಾಣುವುದಿಲ್ಲ. ಕಥಾ ಪ್ರಕಾರಗಳಂತೂ ಈ ಶತಮಾನದ ಸಾಂಸ್ಕೃತಿಕ ಚರಿತ್ರೆಗಳೋ ಎಂಬಂತೆ ವಿವಿಧ ವಿಚಾರಗಳ ಜೊತೆ ಮುಖಾಮುಖಿಯಾಗುತ್ತಾ ಚಲಿಸುತ್ತಿವೆ.

ಈ ಶತಮಾನದ ಬರಹಗಳ ಕುರಿತಾಗಿ ಈಗಾಗಲೇ ಅಲ್ಲಲ್ಲಿ ಚರ್ಚೆಗಳು ನಡೆಯುತ್ತಿವೆ. ಈ ಚರ್ಚೆಗಳಲ್ಲಿ ಹೆಚ್ಚಿನ ಗಮನಕ್ಕೆ ಒಳಗಾದವರು ಬೆಂಗಳೂರು ಕೇಂದ್ರಿತ ಬರಹಗಾರರು. ಕತೆಗಾರರ ಕುರಿತಂತೆಯೂ ಈ ಮಾತನ್ನು ಹೇಳಬಹುದಾಗಿದೆ. ಈ ರೀತಿ ಒಂದು ಕೇಂದ್ರದ ಬರಹಗಾರರನ್ನೇ ಮುಖ್ಯವಾಗಿ ಗಮನಿಸುವುದರಿಂದಾಗಿ, ಒಟ್ಟು ಕನ್ನಡದ ಕತೆಗಳ ಚಲನೆಯನ್ನು ಸರಿಯಾಗಿ ಗುರುತಿಸಲು ಸಾಧ್ಯವಾಗುವುದಿಲ್ಲ. ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಬರೆಯುತ್ತಿರುವ ಕತೆಗಾರರನ್ನು ಅವಲೋಕಿಸಿದಾಗ ಈ ಶತಮಾನದಲ್ಲಿ ಬರುತ್ತಿರುವ ಕತೆಗಳಿಗೊಂದು ವಿಸ್ತಾರವಾದ ವ್ಯಾಪ್ತಿ ಇರುವುದು ವೇದ್ಯವಾಗುತ್ತದೆ.

ಹೊಸ ಶತಮಾನಕ್ಕೊಂದು ನಿರ್ದಿಷ್ಟ ಲಕ್ಷಣಗಳು ದಾಖಲಾಗಿವೆಯೇ ? ಈ ಶತಮಾನದ ಕತೆಗಳನ್ನು ಗೆರೆ ಹಾಕಿ ಕತ್ತರಿಸಲು ಸಾಧ್ಯವೇ ? ಈ ಪ್ರಶ್ನೆಗಳು ಸಹಜವಾಗಿ ಮೇಲಿನ ಶೀರ್ಷಿಕೆಯ ಹಿನ್ನೆಲೆಯಲ್ಲಿ ಹುಟ್ಟುತ್ತವೆ. ನಿರ್ದಿಷ್ಟ ಲಕ್ಷಣಗಳಲ್ಲದಿದ್ದರೂ ಕೆಲವು ಲಕ್ಷಣಗಳು, ಗೆರೆಯಿಂದ ಹಿಂದಕ್ಕೂ ಚಾಚಿಕೊಳ್ಳುವ ಕತೆಗಳು ನಮ್ಮ ಕಣ್ಣಮುಂದೆ ಬರುತ್ತವೆ. ಈ ಶತಮಾನದ ಕತೆಗಳ ಮುಂದುವರಿದ ಕೊಂಡಿಗಳು ಮತ್ತು ಇವು ಕೊಂಡಿಗಳು ಮಾತ್ರ. ಯಾಕೆಂದರೆ, ಈ ಶತಮಾನದ ಇನ್ನೂ ತೊಂಬತ್ತು ವರ್ಷಗಳು ಈ ಕೊಂಡಿಯ ಮುಂದೆ ಚಾಚಿಕೊಂಡಿವೆ.

**ಡಾ|| ಸಬಿತಾ ಬನ್ನಾಡಿ**

೨೦೦೦ದಿಂದೀಚೆಗೆ ಪ್ರಕಟವಾದ ಕತೆಗಳ ತಾಂತ್ರಿಕ ಮಾನದಂಡವನ್ನಿಟ್ಟುಕೊಂಡು ಈ ವಿಷಯದ ಕುರಿತು ಯೋಚಿಸಹೊರಟಾಗ, ಅನೇಕ ಅಂಶಗಳು ಅನಾವರಣಗೊಳ್ಳುತ್ತವೆ. ಕಳೆದ ಇಪ್ಪತ್ತೈದು-ಮೂವತ್ತು ವರ್ಷಗಳಿಂದ ಬರೆಯುತ್ತಿರುವವರು ಈಗಲೂ ಬರವಣಿಗೆ ಮುಂದುವರಿಸಿದ್ದಾರೆ. ಅವರಲ್ಲಿ ಕೆಲವರ ಬರವಣಿಗೆಯ ಕ್ರಮಗಳು ಬದಲಾಗಿವೆ. ಇನ್ನು ಕೆಲವರು, ಈಗ ಬರವಣಿಗೆ ಆರಂಭಿಸಿರುವವರಿಗೆ ಸ್ಫೂರ್ತಿಯಾಗಿದ್ದಾರೆ.

ಈ ಮೂವತ್ತು ವರ್ಷಗಳಲ್ಲಿ ಕತೆಗಾರರ ಸೈದ್ಧಾಂತಿಕ ನೆಲೆಗಳಲ್ಲಿ ವ್ಯತ್ಯಾಸಗಳಾಗಿವೆ. ದಲಿತ, ಅಲ್ಪಸಂಖ್ಯಾತ ಮತ್ತು ಸ್ತ್ರೀಯರ ಅನುಭವಲೋಕದ ಮೂಲಕ ತೆರೆದುಕೊಂಡ ಕಥಾಲೋಕ ಕಳೆದ ಮೂವತ್ತು ವರ್ಷಗಳ ಕತೆಗಳ ಜೀವದ್ರವ್ಯವಾಗಿದ್ದವು. ಈಗ ಹೆಚ್ಚೂ ಕಡಿಮೆ ಇವು ಪರಿಚಿತ ಲೋಕಗಳಾಗಿವೆ. ಈ ಲೋಕಗಳ ಭಿನ್ನ ಭಿನ್ನಕೋನಗಳ ನಿರೂಪಣೆಗಳೂ ಸಾಕಷ್ಟು ಸಂಖ್ಯೆಯಲ್ಲಿ ಪ್ರಕಟವಾಗಿವೆ. ಈಗ ಇವುಗಳಿಂದಾಚೆಯ ಹರಹಿನೆಡೆಗೆ ಕನ್ನಡ ಕಥಾಲೋಕದ ಪಯಣ ಹೊರಟಂತೆ ಕಾಣುತ್ತಿದೆ. ಅಂದರೆ, ಒಂದರ್ಥದಲ್ಲಿ ಈಗಿನ ಕತೆಗಳು ಕೇವಲ ತಮ್ಮ ಅನನ್ಯ ಅನುಭವ ಲೋಕದಿಂದಷ್ಟೇ ಸಲ್ಲಬಹುದಾದ ಸಾಧ್ಯತೆಗಳು ಕ್ಷೀಣಿಸಿವೆ. ಬದಲಿಗೆ ಕಣ್ಣೆದುರು ಚೆಲ್ಲಿರುವ ಪರಿಚಿತಲೋಕದ್ದೇ ಅಪರಿಚಿತ ಮಜಲುಗಳನ್ನು, ನೆಲೆಗಳನ್ನು ಶೋಧಿಸಹೊರಡುವ ಸವಾಲುಗಳು ಇಂದಿನ ಕತೆಗಳಿಗಿವೆ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ, ಈ ಹತ್ತು ವರ್ಷಗಳಲ್ಲಿ ಪ್ರಕಟಗೊಂಡಿರುವ ಕತೆಗಳು ನಿರಾಶೆಯನ್ನೇನೂ ಮೂಡಿಸುವುದಿಲ್ಲ.

ಬರವಣಿಗೆಯ ವಿಶಿಷ್ಟ ಅಭಿವ್ಯಕ್ತಿ ಶೈಲಿ, ಅತ್ಯಾಧುನಿಕ ಬದುಕಿನ ಕ್ರಮಗಳ ರೋಚಕ ವಿವರಗಳು, ಅವುಗಳ ನಡುವೆ ಕಳೆದುಹೋಗುತ್ತಿರುವ ಮನುಷ್ಯ ಸಂಬಂಧಗಳ ಸೂಕ್ಷ್ಮ ಎಳೆಗಳು ಮುಂತಾದ ವಿಚಾರಗಳನ್ನಿಟ್ಟುಕೊಂಡು

ಈ ಹತ್ತು ವರ್ಷಗಳಲ್ಲಿ ಬಂದ ಕತೆಗಳಲ್ಲಿನ ಮುಖ್ಯ ಹುಡುಕಾಟಗಳನ್ನು ಅಥವಾ ಆದ್ಯತೆಗಳನ್ನು ಪರಿಶೀಲಿಸ ಹೊರಟರೆ ಅವು ಮೂರ್‍ನಾಲ್ಕು ಮಾದರಿಗಳಾಗಿ ಚೆದುರಿಕೊಳ್ಳುತ್ತವೆ. ಒಂದೆಡೆ, ತನ್ನ ಸುತ್ತಲಿನ ಸಮಸ್ಯೆಗಳನ್ನು ಅರ್ಥೈಸಿಕೊಳ್ಳುವ ಪ್ರಯತ್ನ ಕಂಡರೆ, ಇನ್ನೊಂದೆಡೆ, ತಾನು ಇದುವರೆಗೂ ಗ್ರಹಿಸಿದ್ದಕ್ಕಿಂತ ಭಿನ್ನವಾಗಿರುವ ಲೋಕವಾಸ್ತವಗಳನ್ನು ಮಂಡಿಸುವ ಉಮೇದು ಕಾಣಿಸುತ್ತದೆ. ಮತ್ತೊಂದೆಡೆ, ಬದುಕಿನ ಸಂಕಟಕ್ಕಿಂತಲೂ ಬದುಕಿನ ಚಿಕ್ಕ ಪುಟ್ಟ ಖುಷಿ, ನಲಿವುಗಳನ್ನೇ ಹಿಡಿದಿಡುವುದು ಸರಿ ಎಂಬ ನಿಲುವು ಕಾಣಿಸುತ್ತದೆ. ಇವೆಲ್ಲದರ ನಡುವೆ ಗಂಡು – ಹೆಣ್ಣಿನ ಸಂಬಂಧದ ಸೂಕ್ಷ್ಮಾತಿಸೂಕ್ಷ್ಮ ಮಜಲುಗಳನ್ನು ಹಿಡಿದಿಡುವ ಪ್ರಯತ್ನ ನಿರಂತರವಾಗಿ ಸಾಗುತ್ತಿದೆ. ಆದರೆ, ಎಲ್ಲಕ್ಕಿಂತ ಮುಖ್ಯವಾಗಿ ಈ ಹತ್ತು ವರ್ಷಗಳಲ್ಲಿ ಬರೆಯುತ್ತಿರುವವರಲ್ಲಿ ಹೆಚ್ಚಾಗಿ ದಿಗ್ಭ್ರಮೆ ಹುಟ್ಟಿಸಿದ ವಿಚಾರ ಕೋಮುವಾದದ ದಳ್ಳುರಿಯು ಹಬ್ಬಿ ಹರಡಿದ ಬಗೆ. ಈ ನೆಲೆಯಲ್ಲಿ ಹೊರಟ ಅನ್ವೇಷಣೆ ಮತ್ತೆ ಮತ್ತೆ ನೆನಪಿಸಿಕೊಳ್ಳುವುದು ಸಹಬಾಳ್ವೆ ನಡೆಸುತ್ತಿದ್ದ ತನ್ನ ನಾಡಿನ ಪೂರ್ವವನ್ನು.

ಬರೆಯುವ ಒಂದು ಕಥಾವರ್ಗವೇ ಕನ್ನಡದಲ್ಲಿ ಕಾಣಸಿಗುತ್ತದೆ. ಮುಖ್ಯವಾಗಿ ಕಾರ್ಪೊರೇಟ್ ಜಗತ್ತಿನ ಜೊತೆ ವೃತ್ತಿ ಸಂಬಂಧವಿರುವ, ಬೆಂಗಳೂರು ಮೊದಲಾದ ಮೆಟ್ರೊಪಾಲಿಟನ್ ಪರಿಸರದಲ್ಲಿ ಬದುಕುತ್ತಿರುವ ಈ ಕಥಾಗಾರರು ಮತ್ತು ಕತೆಗಳು ಸಾಕಷ್ಟು ಜನಪ್ರಿಯ ಮತ್ತು ಚರ್ಚಿತವಾಗುವುದಕ್ಕೆ ಕತೆಗಳೊಂದಿಗೆ ಅವು ಬಳಸಿಕೊಳ್ಳುತ್ತಿರುವ ಮಾಧ್ಯಮಗಳೂ ಕಾರಣವಾಗಿರುವಂತಿದೆ. ಕತೆ ಬರೆಯುವ ಶೈಲಿಯಲ್ಲಿ ಒಂದು ರೀತಿಯ ಹಿಡಿತ ಸಾಧಿಸಿರುವ ಈ ವರ್ಗ ಜೊತೆ ಜೊತೆಗೇ ಇಲೆಕ್ಟ್ರಾನಿಕ್ ಪತ್ರಿಕೆಗಳ ಜಾಲವನ್ನು ಸಮರ್ಥವಾಗಿ ದುಡಿಸಿಕೊಂಡು ಯುವ ಮನಸ್ಸುಗಳನ್ನು ತಮ್ಮೆಡೆಗೆ ಸೆಳೆಯುತ್ತಿವೆ. ಈ ಕಾರಣದಿಂದ ಮತ್ತು ಮೊದಲಿನಿಂದಲೂ ಸಕ್ರಿಯವಾಗಿರುವ 'ಬೆಂಗಳೂರು ಕೇಂದ್ರ'ದ ಅನುಕೂಲದಿಂದ ಇವರುಗಳು ಬರೆಯುತ್ತಿರುವ ಕಥಾಲೋಕವೇ ನಿಜಲೋಕವೇನೋ ಎಂಬ ಭಾವನೆಯನ್ನು ಇವು ಹುಟ್ಟುಹಾಕಿವೆ. ಆದರೆ, ಈ ಹತ್ತು ವರ್ಷಗಳಲ್ಲಿ ಬಂದ ಕತೆಗಳನ್ನು ಕಲೆಹಾಕಿ ಓದಿದಾಗ, ಕನ್ನಡದ ಸಣ್ಣಕತೆಗಳ ವ್ಯಾಪಕತೆ ಅಚ್ಚರಿ ಹುಟ್ಟಿಸುವಷ್ಟು ವಿಸ್ತಾರವಾಗಿರುವುದು ಕಂಡುಬರುತ್ತದೆ. ಮತ್ತು ಮೇಲಿನ ಭಾವನೆಯು ನೀರುಗುಳ್ಳೆಯಷ್ಟೇ ಎಂಬುದನ್ನೂ ಸಾಬೀತುಪಡಿಸುತ್ತದೆ.




ಈ ಹತ್ತು - ಹದಿನೈದು ವರ್ಷಗಳಲ್ಲಿ ಉಂಟಾಗಿರುವ ಸೈದ್ಧಾಂತಿಕ ಬದಲಾವಣೆಯ ಹಿಂದಿರುವ ಮುಖ್ಯ ಕಾರಣಗಳೇನಿರಬಹುದು ? ಜಾಗತಿಕ ಮಾರುಕಟ್ಟೆಗೆ ತೆರೆದುಕೊಂಡುದರ ಪರಿಣಾಮವಾಗಿ ಉಂಟಾದ ಬದಲಾವಣೆಗಳು ಸಾಹಿತ್ಯಲೋಕವನ್ನು ಪ್ರಭಾವಿಸಿರ ಬಹುದೇ ಎಂಬ ಪ್ರಶ್ನೆಯೊಂದು ಹುಟ್ಟುವುದು ಸಹಜ. ಆದರೆ ಇದು ಇಷ್ಟೇ ಆಗಿರಲಾರದು. ಸೋವಿಯತ್ ದೇಶದ ಪತನ ಮತ್ತು ಸಮತಾವಾದದ ಹಿನ್ನಡೆ ಯೊಂದಿಗೆ ತಾತ್ವಿಕ ರಾಜಕಾರಣ ವಿಶ್ವ ವೇದಿಕೆಯಿಂದ ನಿರ್ಗಮಿಸಿದ್ದನ್ನು ಮತ್ತು ಮಾರುಕಟ್ಟೆ ಹಾಗೂ ಜಾಗತೀಕರಣಗಳ ಗೊಂದಲದಲ್ಲಿ ಜಗತ್ತು ಮುಳುಗಿದ್ದನ್ನು ಹೇಳುತ್ತಾ ತೇಜಸ್ವಿಯವರು 'ಇಸಂ'ಗಳ ಕುರಿತಾಗಿ ಒಂದು ಭಿನ್ನ ನಿಲುವು ಹುಟ್ಟುವುದಕ್ಕೂ ಈ ಬೆಳವಣಿಗೆಗಳಿಗೂ ಒಂದು ಸಂಬಂಧವನ್ನು ಗುರುತಿಸುತ್ತಾರೆ. ಎಲ್ಲಕ್ಕಿಂತ ಹೆಚ್ಚಾಗಿ ಕನ್ನಡದ ಹೊಸ ತಲೆಮಾರಿನ ಬರಹಗಾರರ ಮೇಲೆ ತೇಜಸ್ವಿ ಮತ್ತು ಲಂಕೇಶರ ಪ್ರಭಾವ ಆಗುವುದಕ್ಕೂ ಅವರಿಬ್ಬರ ಬರಹಗಳು ಸೈದ್ಧಾಂತಿಕ ಖಚಿತತೆಯನ್ನು ಅಂತರ್ಯದಲ್ಲಿ ಹುದುಗಿಸಿಕೊಂಡು, ಪರಿಸರದ ಅನುಭವವನ್ನು ಪ್ರಮಾಣವಾಗಿಸಿಕೊಂಡು ರೂಪುಗೊಳ್ಳುವಲ್ಲಿನ ಸಾಚಾತನಕ್ಕೂ ಸಂಬಂಧವಿದೆ. ಆದರೆ ಇದು ಕೆಲವೊಮ್ಮೆ ಕೇವಲ ಅನುಭವವಷ್ಟೇ ಸಾಕು ಸಿದ್ಧಾಂತ ಬೇಕಾಗಿಲ್ಲ ಎಂಬ ಸರಳ ಗ್ರಹಿಕೆಯಾಗಿ ಉಳಿಯುವುದೂ ಇದೆ. ಇತ್ತೀಚೆಗೆ ಬರುತ್ತಿರುವ ವಿಮರ್ಶೆಗಳು 'ಈ ಕೃತಿಯು ಸಿದ್ಧಾಂತದ ಭಾರದಿಂದ ಮುಕ್ತವಾಗಿದೆ' ಎಂಬ ಶರಾದಲ್ಲಿ ಕೊನೆಗೊಳ್ಳುವುದನ್ನು ಗಮನಿಸಬಹುದು. ಸಿದ್ಧಾಂತದ ಭಾರವೇ ಪ್ರಧಾನವಾಗ ಬಾರದು ಎಂಬ ಸರಿಯಾದ ಅರ್ಥವನ್ನು ಬಿಟ್ಟು ಸಿದ್ಧಾಂತವೇ ಬೇಕಾಗಿಲ್ಲ ಎಂಬ ತಪ್ಪು ಅರ್ಥದ ಕಡೆ ಇದು ಹೊರಳುತ್ತಿದೆ. 'ನಾನು ಮೂಡಿಗೆರೆಗೆ ಬಂದನಂತರ ನಾವು ಸೆಮಿನಾರುಗಳಲ್ಲಿ, ಸಾಹಿತ್ಯದಲ್ಲಿ, ಉದ್ದೇಶಿಸುತ್ತಿದ್ದ ಮತ್ತು ಚರ್ಚಿಸುತ್ತಿದ್ದ ಭಾರತಕ್ಕೂ, ಮಂದಣ್ಣ, ಮಾರ, ಪ್ಯಾರ, ಕರಿಯಪ್ಪ, ಎಂಗ್ಟರ ಅವ್ಯಕ್ತ ಭಾರತಕ್ಕೂ ಇದ್ದ ಅಗಾಧ ವ್ಯತ್ಯಾಸ ನನ್ನ ದೃಷ್ಟಿಕೋನವನ್ನೂ ಬರವಣಿಗೆಯನ್ನೂ ಮತ್ತೆ ಬದಲಿಸಲಾಗದಂತೆ ಮಾರ್ಪಾಡು ಮಾಡಿಬಿಟ್ಟಿತು. ಯಾವ ತತ್ವ ಸಿದ್ಧಾಂತಗಳೂ ಎಂದೂ ಪರಿಪೂರ್ಣವಾಗಿ ವಿವರಿಸಲಾಗದಂಥ, ಅನೇಕ ದ್ವಂದ್ವ, ವೈರುಧ್ಯ, ಅಸಾಂಗತ್ಯಗಳ ಈ ಜೀವನವಾಹಿನಿ ನಿಧಾನವಾಗಿ ನನ್ನನ್ನು ಅಸ್ತಿತ್ವವಾದದತ್ತ ತುಯ್ಯತೊಡಗಿತು. ನನ್ನ ಬರವಣಿಗೆಗಳೆಲ್ಲದರಲ್ಲೂ ಕಂಡುಬರುವ ವಿನೋದ ಮತ್ತು ವಿಷಾದಗಳ ವಿಶಿಷ್ಟ ಸಂಶ್ಲೇಷಣೆಗೆ ಇದೇ ಕಾರಣ' (ವಿಮರ್ಶೆಯ ವಿಮರ್ಶೆ; ೨೦೦೯; ಪುಸ್ತಕ ಪ್ರಕಾಶನ; ಪುಟ : ೧೧೭) ಎನ್ನುವ ತೇಜಸ್ವಿ, ಗಾಂಧಿಯವರು ಬೋಧಿಸಿದ 'ದಾರಿ ಮತ್ತು ಗುರಿ ನಿಯಮ' ಎಂಬ ಅತಿ ಸರಳ ಮತ್ತು ಸ್ಪಷ್ಟ ನಿಯಮ, ರಾಜಕಾರಣಕ್ಕೆ ಸೈದ್ಧಾಂತಿಕೆಯ ಅಗತ್ಯವನ್ನೇ ನಿರಾಕರಿಸುತ್ತದೆ (ಅದೇ; ಪುಟ : ೧೪೯) ಎನ್ನುವಾಗ, ಸೈದ್ಧಾಂತಿಕೆಯನ್ನು ಗ್ರಹಿಸಿ ಕೊಳ್ಳಬೇಕಾದ ರೀತಿಯನ್ನು ನಿರ್ದೇಶಿಸುತ್ತಿದ್ದಾರೆ ಎನ್ನುವುದನ್ನು ಮರೆಯುವಂತಿಲ್ಲ. ಲಂಕೇಶರೂ ತಮ್ಮ ಪತ್ರಿಕೆಯ ಮೂಲಕ ಕಂಡುಕೊಂಡ ನಿಜ ಜಗತ್ತು ಅವರ ಚಿಂತನೆಯನ್ನು ಪ್ರಖರಗೊಳಿಸಿತು. ಈ ರೀತಿಯ ಪ್ರಭಾವಗಳು ಹೊಸ ತಲೆಮಾರಿನ ಕತೆಗಾರರಿಗೆ ತಮ್ಮ ಬರವಣಿಗೆಯ ಸ್ವೇಸನ್ನು ಕಂಡುಕೊಳ್ಳಲು ಸಹಾಯ ಮಾಡಿರುವಂತಿದೆ. ಈ ಹಿನ್ನೆಲೆಯಲ್ಲಿ ಮಹಿಳೆಯರಿಗೆ, ಶೂದ್ರರಿಗೆ, ದಲಿತರಿಗೆ, ಅಲ್ಪಸಂಖ್ಯಾತರಿಗೆ, ನವನಗರಿಗರಿಗೆ ತಮ್ಮ ಅನುಭವ ಜಗತ್ತನ್ನು ತಮ್ಮದೇ ಕಣ್ಣಲ್ಲಿ ನೋಡಲು ಕತೆಗಳು ಅವಕಾಶವಾಗಿ ಒದಗಿಬಂದವು. ಈ ಹತ್ತು ವರ್ಷಗಳಲ್ಲಿ ಬಂದ ಕತೆಗಳಲ್ಲಿ ಹಳಬರ ಹೊಸ ಕತೆಗಳೂ ಇವೆ ಮತ್ತು ಅವುಗಳು ಅವರದೇ ಹಿಂದಿನ ಕತೆಗಳಿಗಿಂತ ಭಿನ್ನವಾಗಿರುವುದನ್ನು ಕಾಣಬಹುದು.

**ವಿಪರ್ಯಾಸ !**

ರಸ್ತೆಯ
ತುಂಬಾ
ಹಳ್ಳಗಳೇ...
ಆಡಳಿತದ
ತುಂಬಾ
ಹಗರಣಗಳೇ...
ಹಳ್ಳ
ಮುಚ್ಚುವ
ಬದಲು
ಹಗರಣಗಳ
ಮುಚ್ಚುವರಯ್ಯಾ !

ಪಿ. ಜೆ. ರಾಘವೇಂದ್ರ
ಮೈಸೂರು - ೫೭೦೦೨೩

* * *

ಈ ಹತ್ತು ವರ್ಷಗಳಲ್ಲಿ ಬಂದ ಕತೆಗಳಲ್ಲಿನ ಮುಖ್ಯ ಹುಡುಕಾಟಗಳನ್ನು ಅಥವಾ ಆದ್ಯತೆಗಳನ್ನು ಪರಿಶೀಲಿಸ ಹೊರಟರೆ ಅವು ಮೂರ್‍ನಾಲ್ಕು ಮಾದರಿಗಳಾಗಿ ಚೆದುರಿಕೊಳ್ಳುತ್ತವೆ. ಒಂದೆಡೆ, ತನ್ನ ಸುತ್ತಲಿನ ಸಮಸ್ಯೆಗಳನ್ನು ಅರ್ಥೈಸಿಕೊಳ್ಳುವ ಪ್ರಯತ್ನ ಕಂಡರೆ, ಇನ್ನೊಂದೆಡೆ, ತಾನು ಇದುವರೆಗೂ ಗ್ರಹಿಸಿದ್ದಕ್ಕಿಂತ ಭಿನ್ನವಾಗಿರುವ ಲೋಕವಾಸ್ತವಗಳನ್ನು ಮಂಡಿಸುವ ಉಮೇದು ಕಾಣಿಸುತ್ತದೆ. ಮತ್ತೊಂದೆಡೆ, ಬದುಕಿನ ಸಂಕಟಕ್ಕಿಂತಲೂ ಬದುಕಿನ ಚಿಕ್ಕ ಪುಟ್ಟ ಖುಷಿ, ನಲಿವುಗಳನ್ನೇ ಹಿಡಿದಿಡುವುದು ಸರಿ ಎಂಬ ನಿಲುವು ಕಾಣಿಸುತ್ತದೆ. ಇವೆಲ್ಲದರ ನಡುವೆ ಗಂಡು - ಹೆಣ್ಣಿನ ಸಂಬಂಧದ ಸೂಕ್ಷ್ಮಾತಿಸೂಕ್ಷ್ಮ ಮಜಲುಗಳನ್ನು ಹಿಡಿದಿಡುವ ಪ್ರಯತ್ನ ನಿರಂತರವಾಗಿ ಸಾಗುತ್ತಿದೆ. ಆದರೆ, ಎಲ್ಲಕ್ಕಿಂತ ಮುಖ್ಯವಾಗಿ ಈ ಹತ್ತು ವರ್ಷಗಳಲ್ಲಿ ಬರೆಯುತ್ತಿರುವವರಲ್ಲಿ ಹೆಚ್ಚಾಗಿ ದಿಗ್ಭ್ರಮೆ ಹುಟ್ಟಿಸಿದ ವಿಚಾರ ಕೋಮುವಾದದ ದಳ್ಳುರಿಯು ಹಬ್ಬಿ ಹರಡಿದ ಬಗೆ. ಈ ನೆಲೆಯಲ್ಲಿ ಹೊರಟ ಅನ್ವೇಷಣೆ ಮತ್ತೆ ಮತ್ತೆ ನೆನಪಿಸಿಕೊಳ್ಳುವುದು ಸಹಬಾಳ್ವೆ ನಡೆಸುತ್ತಿದ್ದ ತನ್ನ ನಾಡಿನ ಪೂರ್ವವನ್ನು.

ಹೊಸಬರು, ಹಳಬರನ್ನು ಸೇರಿಸಿದಂತೆ ಹಲವಾರು ಜನ ಈ ಹತ್ತು ವರ್ಷಗಳಲ್ಲಿ ಕಥೆಯ ಕಾಯಕ ನಡೆಸಿದ್ದಾರೆ. ಹನೂರು ಕೃಷ್ಣಮೂರ್ತಿ, ಅಮರೇಶ ನುಗಡೋಣಿ, ಜಯಂತ ಕಾಯ್ಕಿಣಿ, ಮೊಗಳ್ಳಿ ಗಣೇಶ, ವೈದೇಹಿ, ಸಾರಾ ಅಬೂಬಕರ್, ಕೆ. ವಿ. ತಿರುಮಲೇಶ್, ಕೆ. ಸತ್ಯನಾರಾಯಣ, ರಾಘವೇಂದ್ರ ಪಾಟೀಲ, ಕುಂ. ವೀರಭದ್ರಪ್ಪ , ನಾ. ಡಿಸೋಜ, ಎಸ್. ದಿವಾಕರ, ಆರ್ಯ, ಬಾನು ಮುಷ್ತಾಕ್, ಕೇಶವ ಮಳಗಿ, ಎಚ್. ನಾಗವೇಣಿ, ಮಿತ್ರಾ ವೆಂಕಟ್ರಾಜ್, ತುಳಸಿ ವೇಣುಗೋಪಾಲ್, ಎಂ. ಎಸ್. ವೇದಾ, ಎಲ್. ಸಿ. ಸುಮಿತ್ರಾ, ವಸುಧೇಂದ್ರ, ಅಶೋಕ ಹೆಗಡೆ, ಸಂದೀಪ ನಾಯಕ, ವಿವೇಕ ಶಾನುಭಾಗ, ಸಚ್ಚಿದಾನಂದ ಹೆಗಡೆ, ಜೋಗಿ, ಸುಮಂಗಲಾ, ಸರ್ಜಾಶಂಕರ ಹರಳಿಮಠ, ಸಬಿಹಾ ಭೂಮೀಗೌಡ, ಸಿದ್ದು ಯಾಪಲಪರವಿ, ಮಹಾಂತೇಶ ನವಲ್‌ಕಲ್, ಸಿದ್ಧರಾಮ ಹೊನ್ಕಲ್, ಗಂಗಾಧರಯ್ಯ,

ಚಿತ್ರಶೇಖರ ಕಂಠಿ, ವಸುಮತಿ ಉಡುಪ, ವಿನಯಾ, ಮಹಾಬಲಮೂರ್ತಿ ಕೊಡ್ಲೆಕೆರೆ, ಗುರುಪ್ರಸಾದ್ ಕಾಗಿನೆಲೆ, ಕೆ. ಎನ್. ಗಣೇಶಯ್ಯ, ಶ್ರೀಧರ ಬಳಗಾರ, ಕವಿತಾ ರೈ, ಸುನಂದಾ ಕಡಮೆ, ಕೆ. ನೀಲಾ, ಕಂನಾಡಿಗಾ ನಾರಾಯಣಾ... ಈ ಪಟ್ಟಿ ಇನ್ನೂ ಮುಂದುವರಿಯುತ್ತದೆ. ಮತ್ತು ಈ ಪಟ್ಟಿಯಿಂದ ಬಿಟ್ಟುಹೋಗಿರುವವರು, ತಪ್ಪಿಸಿಕೊಂಡಿರುವವರು ಹಲವರಿರಬಹುದು. ಹೀಗೆ ಪಟ್ಟಿ ಕೊಡಲು ಮುಖ್ಯ ಕಾರಣ ಇವರೆಲ್ಲರನ್ನೂ ನಾನು ಈ ಲೇಖನದಲ್ಲಿ ಚರ್ಚಿಸಲು ಸಾಧ್ಯವಿಲ್ಲ ಎಂಬುದನ್ನು ಸೂಚಿಸುವುದೇ ಆಗಿದೆ.



* * *

ಈ ಕಾಲದ ಕತೆಗಾರರ ಪ್ರಾದೇಶಿಕ ನೆಲೆಯನ್ನು ಗಮನಿಸುವುದೂ ಒಂದು ಕುತೂಹಲದ ಸಂಗತಿ. ಚಿತ್ತಾಲರಂತಹ ಕತೆಗಾರರು ಮುಂಬಯಿ ಮತ್ತು ಹನೇಹಳ್ಳಿಯ ಎರಡೂ ನೆಲೆಯನ್ನು ಹೊಂದಿದವರು. ಹಾಗೆಯೇ ಜಯಂತ ಕಾಯ್ಕಿಣಿ ಮುಂಬಯಿ, ಉತ್ತರ ಕನ್ನಡ, ಸುಮಂಗಲಾ ಬಿಜಾಪುರ -ಬೆಂಗಳೂರು, ಸಬಿಹಾ ಮಂಗಳೂರು -ಉತ್ತರ ಕರ್ನಾಟಕ, ವಸುಧೇಂದ್ರ ಸಂಡೂರು -ಬೆಂಗಳೂರು, ಸುನಂದಾ ಕಡಮೆ ಧಾರವಾಡ-ಉತ್ತರ ಕನ್ನಡ, ವಿನಯಾ ಉತ್ತರ ಕನ್ನಡ -ಧಾರವಾಡ, ಗುರು ಪ್ರಸಾದ ಕಾಗಿನೆಲೆ ಅಮೆರಿಕಾ -ಕರ್ನಾಟಕ - ಹೀಗೆ ಇವರ ಕತೆಗಳಲ್ಲಿ ಜೋಕಾಲಿ ಆಡಿದಂತೆ ಈ ನೆಲೆಗಳು ಆ ಕಡೆ ಈ ಕಡೆ ಚಲಿಸುತ್ತವೆ. ಈ ಯಾವ ಕತೆಗಾರರಿಗೂ ಈ ಪ್ರದೇಶಗಳ ಕುರಿತಾಗಿ ಒಂದು ಭಾವುಕ ತೀವ್ರತೆ ಇಲ್ಲ, ಎರಡೂ ಪ್ರದೇಶಗಳನ್ನು ಅವರು ಸಮನಾಗಿಯೇ ಸ್ವೀಕರಿಸಬಲ್ಲರು. ಆದರೆ ಅದರೊಳಗೆ ಮನುಷ್ಯ ಸಂಬಂಧಗಳ ಸಾಚಾತನದ ಹುಡುಕಾಟ ಮಾಡುವುದು ಅವರಿಗೆ ಮುಖ್ಯ. ಜಯಂತ ಕಾಯ್ಕಿಣಿಯವರ 'ನೋ ಪ್ರಸೆಂಟ್ಸ್ ಪ್ಲೀಸ್' ಕತೆಯಲ್ಲಿ ಯಾವುದೇ ಭೂತದ ಬೇರುಗಳಿಲ್ಲದ ನಾಯಕ-ನಾಯಕಿಯರು ತಮ್ಮದೇ ಒಂದು ಹೊಸ ಬದುಕನ್ನು ಕಟ್ಟಿಕೊಳ್ಳಹೊರಡುತ್ತಿರುತ್ತಾರೆ. ಮತ್ತು ಅವರಿಗೆ ಆ ಭೂತದ ನೆನಪಾಗಲೀ, ಬೇರುಗಳಾಗಲೀ ಕಾಪಿಡಬೇಕಾದ ವಿಷಯವಾಗಿರದೇ ಮರೆಯಲೇಬೇಕಾದ ವಿಷಯವಾಗಿರುತ್ತದೆ. ಹೀಗೆ ಹೊಸ ಚಹರೆ ಕಟ್ಟಿಕೊಳ್ಳಲು ಮುಂಬಯಿ ಅವರಿಗೆ ಹೊಸ ತಾಯಿಯಾಗುತ್ತದೆ. ಸುಮಂಗಲಾರ 'ಎದೆಯಲ್ಲೊಂದು ಬಳೆ ಚೂರು' ಕತೆಯ ದಿವಾಕರನೂ ಹೀಗೆ ಭೂತವನ್ನು ಬಿಟ್ಟವನೇ. ಆದರೆ ಆ ಕುರಿತ ವಿಷಾದವಿಲ್ಲ, ಈ ಮಾದರಿಯು ಸ್ವಲ್ಪ ಹಿಂದಿನ ಕತೆಗಳಲ್ಲಿ ಕಾಣುವುದಿಲ್ಲ ಎಂಬುದನ್ನು ಗಮನಿಸಬೇಕು.

ಈ ಕಾಲಘಟ್ಟದಲ್ಲಿ ಹಲವರನ್ನು ಕಾಡಿದ ಸಮಸ್ಯೆ ಕೋಮುವಾದದ ಕುರಿತಾದುದು. ಅಲ್ಲಲ್ಲಿ ಹೊತ್ತಿ ಉರಿಯುತ್ತಿರುವ ಕೋಮುದಳ್ಳುರಿಯು ಯಾವುದೇ ಸೂಕ್ಷ್ಮಮತಿಗಳ ಹೃದಯಕ್ಕೆ ಕೊಳ್ಳಿ ಇಡುವ ವಿದ್ಯಮಾನವೇ. ಈ ಸಂದರ್ಭದಲ್ಲಿ ಹಲವರನ್ನು ಕಾಡಿದ್ದೆಂದರೆ ಈ ಕೋಮುವಾದ ಆಧುನಿಕತೆಯ ಫಲವೇ ಎಂಬ ವಿಚಾರ. ಶಿಕ್ಷಿತರಲ್ಲೇ ಕಾಣುವ ಈ ರೋಗವು ಶಿಕ್ಷಣ, ಆಧುನಿಕತೆ, ಅಭಿವೃದ್ಧಿಗಳಿಂದ ದೂರದಲ್ಲಿರುವವರನ್ನು ತಟ್ಟಿಲ್ಲ, ಹೀಗಾಗಿ, ಆಧುನಿಕ ಶಿಕ್ಷಣದಿಂದ ಬದಲಾಗುವ ಸುಂದರ ಜಗತ್ತಿನ ನಿರೀಕ್ಷೆಯಲ್ಲಿದ್ದ ಒಂದು ತಲೆಮಾರಿಗೆ ಇದು ಇಬ್ಬದಿಯ ತಲ್ಲಣವನ್ನು ಹುಟ್ಟುಹಾಕುತ್ತಿದೆ. ಈ ಕಾರಣದಿಂದ ಅವರ ಮನಸ್ಸುಗಳು ತಮ್ಮ ಅನುಭವ ಲೋಕವನ್ನು ಜನರೆದುರು ತೆರೆದು ತೋರಿ ಯೋಚಿಸುವಂತೆ ಮಾಡಬೇಕೆಂಬ ತುಡಿತಕ್ಕೆ ಒಳಗಾಗುತ್ತವೆ. ಸಬಿಹಾರ ತುಪ್ಪ ಮೆತ್ತಿದ ಕನ್ನಡಿ, ನಮ್ಮೂರು ಚಂದವೋ, ಸರ್ಜಾಶಂಕರ ಹರಳಿಮಠರ ಬಂಡಿಯಾದ ಬುದ್ಧ, ವಿನಯಾರ ಊರ ಒಳಗಣ ಬಯಲು, ಅಮರೇಶರ ದಿಲ್ ಮಾಂಗೇ ಮೋರ್, ಎಚ್. ನಾಗವೇಣಿಯವರ ತಾಯ್ತನ ಮೊದಲಾದ ಕತೆಗಳನ್ನು ನೆನಪಿಸಿಕೊಳ್ಳಬಹುದು.

ಒಂದು ವಿಸ್ತಾರ ವಲಯವು ಇಂದು ಕಥಾಲೋಕದೊಳಗೆ ಪ್ರವೇಶ ಪಡೆಯುತ್ತಿದೆ. ಬಹಳ ಸ್ಪಷ್ಟವಾಗಿ ಬೆಂಗಳೂರು ಕೇಂದ್ರದ ಕತೆಗಳಿಗೂ, ಉತ್ತರ ಕರ್ನಾಟಕದ ಕತೆಗಳಿಗೂ ವ್ಯತ್ಯಾಸ ಗೋಚರಿಸುತ್ತದೆ. ಕೆ. ನೀಲಾ ಅಥವಾ ಗುಲ್ಬರ್ಗಾ ವಿ. ವಿ.ಯಿಂದ ಪ್ರಕಟಗೊಂಡ 'ಚಿನ್ನದ ಕತೆಗಳು' ಸಂಕಲನದ ಕತೆಗಳನ್ನೂ, ಗೋಪಿನಾಥ ರಾವ್ ಅವರು ಬರೆದಿರುವ 'ದಡ್ಡ ಮಗ, ಜಾಣೆ ಮಗಳು ಮತ್ತು ಹನುಮಾನ್ ಚಾಲೀಸ್' (ಒಂದಲ್ಲಾ ಒಂದೂರಿನಲ್ಲಿ - ಪ್ರಾಯೋಗಿಕ ಸಂಚಿಕೆಯಲ್ಲಿ ಪ್ರಕಟಿತ) ಕತೆಯನ್ನೂ ಹೋಲಿಸಿ ನೋಡಿದರೆ ಇದು ತಿಳಿಯುತ್ತದೆ. ನಾಗವೇಣಿಯವರ ಮೀಯುವ ಆಟ ಹೊಸ ಜಗತ್ತೊಂದನ್ನು ಕನ್ನಡ ಕಥಾಲೋಕಕ್ಕೆ ಪರಿಚಯಿಸಿತು. ಅಲಕ್ಷಿತವಾದ ಲೋಕದ ಕಣ್ಣಿನಿಂದ ನೋಡುವ ನಾಗವೇಣಿ ಖಾದ್ರಿ ಬ್ಯಾರಿ, ಚಿನ್ನಮ್ಮ, ಕೊರಗ-ಕೊರತಿ- ಕೇತು, ದಾರು, ಐಸಂಬ್ಯಾರ್ದಿ, ಸಿರಿ, ಸೇವಂತಿ ಹೀಗೆ ದೊಡ್ಡದೊಂದು ಅನುಭವಲೋಕವನ್ನು ಎದುರಿಡುವಾಗ ಇದುವರೆಗೂ ನೋಡಿ ಕೊಂಡು ಬಂದ ಒಪ್ಪಿತ ಜಗತ್ತನ್ನು ಮುರಿದು ಸ್ಥಳೀಯ ಲೋಕದ ಮೂಲಕ ವಿಶ್ವವನ್ನು ನೋಡಬೇಕಾದ ತುರ್ತನ್ನು ಮುಂದಕ್ಕೆ ತರುತ್ತಾರೆ. ಕತೆಯಲ್ಲದಿದ್ದರೂ ಕತೆಯ ಛಾಯೆಯ ವಸುಂಧರೆಯ ಗ್ಯಾನದ ಗಮನವೂ ಈ ಕಡೆಗೇ ಇದೆ.

ಗಂಡು -ಹೆಣ್ಣು, ಮನುಷ್ಯ-ಮನುಷ್ಯ ಸಂಬಂಧಗಳ ಹಲವು ಮಗ್ಗುಲುಗಳ ಒಳ ಸುಳಿಗಳನ್ನು ಈ ಕಾಲಘಟ್ಟದ ಕತೆಗಳು ಹಿಡಿದಿಡುವ ಪ್ರಯತ್ನ ಮಾಡುತ್ತಿವೆ. ವಿಚ್ಛಿದ್ರಗೊಳ್ಳುತ್ತಿರುವ ದಾಂಪತ್ಯದ ಹಲವು ಕತೆಗಳು ವಸ್ತಾರೆ ಕತೆಗಳಲ್ಲಿ ಮುಂಚೂಣಿಗೆ ಬಂದರೆ, ಹೊಸ ಬಂಧವೊಂದನ್ನು ಕಟ್ಟಿಕೊಳ್ಳಬಹುದಾದ ಸಾಧ್ಯತೆಯ ಕನಸನ್ನು ಬಿಂಬಿಸುವ ಕತೆಯಾಗಿ ಸುಮಂಗಲಾರ 'ಚಿಗುರು' ಮೂಡುತ್ತದೆ. ಅತ್ಯಾಧುನಿಕ ಕುಟುಂಬದೊಳಗಣ ಗಂಡ ಹೆಂಡಿರ ಒತ್ತಡಗಳೊಂದಿಗೇ ನಲುಗುತ್ತಿರುವ ಇನ್ನಿಬ್ಬರು ಪ್ರಧಾನ ವ್ಯಕ್ತಿಗಳೆಂದರೆ ಮಕ್ಕಳು ಮತ್ತು ವೃದ್ಧರು. ಈ ಮಕ್ಕಳಿಗೆ ತಂದೆ ತಾಯಿಯರು ಸಿಗುತ್ತಿಲ್ಲ, ವೃದ್ಧ ತಂದೆ ತಾಯಿಯರಿಗೆ ಮಕ್ಕಳು ಸಿಗುತ್ತಿಲ್ಲ, ಈ ಎಲ್ಲರನ್ನೂ ನಿಭಾಯಿಸಲು ಗಂಡ ಹೆಂಡತಿಯರಿಗೆ (ನಡುವಯಸ್ಸಿನವರಿಗೆ) ಸಾಧ್ಯ ವಾಗುತ್ತಿಲ್ಲ, ಇಲ್ಲಿ ಯಾರನ್ನಾದರೂ ದೂಷಿಸುವುದರಲ್ಲಿ, ಕಪ್ಪು-ಬಿಳುಪು ಚಿತ್ರ ಮಾಡುವುದರಲ್ಲಿ ಅರ್ಥವಿಲ್ಲ, ಅಂಥಲ್ಲಿ ಇದಕ್ಕೂ ಒಂದು ದಾರಿ ಇದ್ದೀತೇ ಎಂಬ, ದಾರಿ ಕಂಡುಕೊಳ್ಳುವ ಕತೆಯಾಗಿ ಚಿಗುರು ಈ ಕಾಲದ ಬಿಕ್ಕಟ್ಟನ್ನು ಒಳಗೊಳ್ಳುವ ಕತೆಯಾಗುತ್ತದೆ.

ಒಟ್ಟಿನಲ್ಲಿ ಇದೊಂದು ಹಲವು ಸಂಕರಗಳನ್ನು ಗರ್ಭೀಕರಿಸಿಕೊಂಡ ಕಾಲ. ಇದರ ನೆರಳು ಈ ಕಾಲದ ಕತೆಗಳ ಮೇಲೂ ಇದೆ. ಒಂದು ಕಾಲಕ್ಕೆ ಅಪ್ಪಟ ನವ್ಯ ಕತೆ ಬರೆಯುತ್ತಿದ್ದ ಆರ್ಯ, ಈಚೆಗೆ ಬರೆದ 'ಹೈಬ್ರಿಡ್ ಕತೆ'ಗಳಲ್ಲಿ ಪೂರ್ತಿ ಬದಲಾಗಿದ್ದಾರೆ. ಇಡೀ ಸಂಕಲನ ಹಲವು ಸಂಕರರೂಪೀ ಬದುಕಿನ ಕತೆಗಳನ್ನು ಹೇಳುತ್ತದೆ ಮತ್ತು ಬದುಕಿನೆಡೆಗೆ ಆಶಾವಾದಿಯಾಗಿದೆ. ಹಾಗೆಯೇ ಈ ಕಾಲಘಟ್ಟದ ಕತೆಗಳು ಬದುಕಿನೆಡೆಗೆ ಭರವಸೆ ಕಳೆದುಕೊಳ್ಳದೆ ಭಿನ್ನ, ಭಿನ್ನ ಜೀವನ ದ್ರವ್ಯಗಳನ್ನು ಸೋಸಿಕೊಡುವ ಹುಡುಕಾಟದಲ್ಲಿ ತಲ್ಲೀನವಾಗಿವೆ. ಎಲ್ಲ ರೀತಿಯ ಸಂಕರಗಳೂ ಸಹಬಾಳ್ವೆ ನಡೆಸಬಹುದಾದ ಸಾಧ್ಯತೆಯೆಡೆಗೊಂದು ಹಂಬಲವನ್ನು ಹೊತ್ತಿವೆ.


**ಡಾ|| ಸಬಿತಾ ಬನ್ನಾಡಿ**
ಸಹ ಪ್ರಾಧ್ಯಾಪಕರು
ಸ್ನಾತಕೋತ್ತರ ಕನ್ನಡ ಅಧ್ಯಯನ ವಿಭಾಗ
ಸರ್ ಎಂ. ವಿ.ಸರ್ಕಾರಿ ಕಲಾ ಮತ್ತು ವಾಣಿಜ್ಯ ಕಾಲೇಜು, ಭದ್ರಾವತಿ


ನನ್ನ ಮನದೊಳಗಿನ
ಪ್ರೀತಿಯ
ಆಳದ ಮುಂದೆ
ನನ್ನೆದುರು ನಿಂತ
ನಿಜದ ಸಮುದ್ರದ ಆಳ
ಯಾವ ಲೆಕ್ಕ.


**ವಿ. ಹರಿನಾಥ ಬಾಬು**
ಸಿರಗುಪ್ಪ



# ಇದ್ದು ನಾಶಗೈವ ಇರದೆ ಚಿಂತೆಯ ತರುವ ಚಿನ್ನ ಚೆನ್ನವೆ ?

ನೀವು ಜ್ಯೋತಿಷ ತಿಳಿಯದೆ, ವಿಜ್ಞಾನಿಗಳು ಊಹೆ ಮಾಡುವ ಭವಿಷ್ಯಶಾಸ್ತ್ರ ತಿಳಿಯದೆ - ಒಂದು ಮುನ್ಸೂಚನೆ ನೀಡಬಹುದು. ಚಿನ್ನ ಮುಂದೆಯೂ ದುಬಾರಿಯಾಗಲಿದೆ. ಪ್ರಳಯದ ಭಯಾನಕತೆ ಕುರಿತು ಚರ್ಚೆ ಮಾಡುವ ಸಾರ್ವಜನಿಕರು, ಈ ಬಗ್ಗೆ ಚಿಂತಿಸುತ್ತಲೇ ಇಲ್ಲ ಎಂದು ಹೇಳಲು ಬರುವುದಿಲ್ಲ. ಆದರೆ ಚಿಂತೆಯೆಲ್ಲವೂ ಚಿನ್ನದ ಬೆಲೆ ಏರಿಕೆಯ ವೈಯಕ್ತಿಕ ಪರಿಣಾಮ ಕುರಿತದ್ದು.

ಚಿನ್ನವನ್ನು ಸದ್ಯಕ್ಕೆ ಕೊಳ್ಳುವಂತಿಲ್ಲ ಎಂದು ನಿಟ್ಟುಸಿರಿಡುವವರು, ಮುಂದೆ ಬೆಲೆ ಕಡಿಮೆ ಆದೀತೆಂದು ನಂಬುವ ಆಶಾವಾದಿಗಳು, ಚಿನ್ನವನ್ನು ಕೊಳ್ಳದಿದ್ದರಾಯಿತು ಎಂಬ ಸಂತೃಪ್ತರು, ''ಒಳ್ಳೆಯದೇ ಆಯಿತು. ನಮ್ಮ ಬಳಿ ಇರುವ ಚಿನ್ನದ ಬೆಲೆ ಬಹಳವಾಯಿತು'' ಎಂದು ಕುಳಿತೇ ಲಾಭ ಬಯಸುವ 'ಜಾಣರು' ಎಲ್ಲರೂ ಉಂಟು.



ಗಮನಿಸಿ, ಬ್ಯಾಂಕಿನಲ್ಲಿ ಇರಿಸಿದ ಹಣಕ್ಕೆ ಬಡ್ಡಿ ನೀಡುತ್ತಾರೆ. ಆದರೆ ಬ್ಯಾಂಕಿನಲ್ಲಿ ಇರಿಸಿದ ಒಡವೆಗಳ ಸುರಕ್ಷತೆಗೆ ಠೇವಣಿದಾರರೇ ಹಣ ನೀಡಬೇಕು! ಅಂದರೆ ಚಿನ್ನಕ್ಕೆ ಋಣ ಬಡ್ಡಿ. ಹೂಡಿದ ಠೇವಣಿ ಹಣಕ್ಕೂ ಋಣ ಬಡ್ಡಿಯನ್ನು, ಅಂದರೆ ಜೋಪಾನ ಮಾಡಿದ್ದಕ್ಕೆ ಕೂಲಿಯನ್ನು ಗ್ರಾಹಕರಿಂದಲೇ ವಸೂಲು ಮಾಡುವ ಯೋಜನೆಯನ್ನು ಕೆಲವು ದೇಶಗಳು ಜಾರಿಗೊಳಿಸುವ ಸನ್ನಾಹದಲ್ಲಿವೆ! ನಗದು, ಹಾಗೂ ನಗನಾಣ್ಯಗಳು – ಎಲ್ಲವೂ ಋಣ ಬಡ್ಡಿಯವೇ ಆಗುತ್ತಿವೆ!

ತರಕಾರಿಯವರ ಬಳಿ ಚೌಕಾಸಿ ಮಾಡುವ ಮಧ್ಯಮ ವರ್ಗದವರಿಗೆ ಚಿನ್ನದ ವ್ಯಾಪಾರಿಗಳ ಬಳಿ ಚೌಕಾಸಿ ಮಾಡಲು ಭಯ. ಮಾರಾಟಗಾರರು ಕೋಪಿಸಿಕೊಂಡರೆ, ಮೋಸ ಮಾಡಿದರೆ, ಎಂಬ ಭಯ ಅವರನ್ನು ಬಾಧಿಸುತ್ತದೆ.

'ಚಿನ್ನ ಯಾವಾಗಲೂ ಚೆನ್ನ' ಎಂಬ ಭಾವನೆ ಮೀರಿದವರು ವಿರಳ; ಇಲ್ಲವೆಂದಲ್ಲ!

ಆಳ್ವಾರ್ ಅವರು ತಂದ ಭಿಕ್ಷೆಯ ಧಾನ್ಯವನ್ನು ಚೊಕ್ಕಮಾಡುವಾಗ ಚಿಕ್ಕ ಚಿನ್ನದ ಚೂರು ಹೊಳೆಯುತ್ತಾ ಕಂಡುಬಂದಿದ್ದನ್ನು ಅವರ ಪತ್ನಿ ತಮ್ಮ ಪತಿಗೆ ತಂದು ತೋರಿಸಿದರು. ಆಗ ಆಳ್ವಾರ್ ಅವರು, ''ಇದು ಅಪಾಯಕಾರಿ ಹುಳ; ಅನೇಕರ ತಲೆ ಹೊಕ್ಕು ಮನೆ ಮಠ ರಾಜ್ಯ ದೇಶಗಳು ಹಾಳಾಗಿವೆ. ಮೊದಲು ಆಚೆಗೆ ಬಿಸಾಡು'' ಎಂದರಂತೆ. ಅವರ ಪತ್ನಿ ಆ ಚೂರನ್ನು ಬಿಸಾಡಿದರೆಂದು ಪ್ರತೀತಿ!

ಲೋಹವೆಂದರೆ ಚಿನ್ನ ಮಾತ್ರ ಎಂಬ ನಂಬಿಕೆ ಇದ್ದ ಕಾಲವೊಂದಿತ್ತು. ಬೇರೆ ಲೋಹಗಳು (ಈಗಿನ ಮೆಟಲ್ ಎಂಬ ಅರ್ಥದಲ್ಲಿ) ಕಲಬೆರಕೆ ಆದ ಕಾರಣ ಚಿನ್ನದಷ್ಟು ಆಕರ್ಷಕವಾಗಿಲ್ಲ. ಬೇರೆ ಲೋಹಗಳೆಂಬ ಕೊಳೆ ಕಳೆದು ಚಿನ್ನ ಮಾಡಬಹುದೆಂಬ ಪ್ರಯತ್ನವೇ ರಸಸಿದ್ಧರದು! ತಾಮ್ರ, ಕಬ್ಬಿಣ, ಸತು, ಪಾದರಸದ ಕೊಳೆ ಕಳೆದು ಚಿನ್ನ ಮಾಡಬಹುದೆಂಬ ಢೋಂಗಿ ಉಲ್ಲೇಖಗಳಿವೆ! ಕಬ್ಬಿಣದಿಂದ ತಾಮ್ರ ತಯಾರಿಸಬಹುದೆಂದೇ ಖ್ಯಾತ ಭೌತ ವಿಜ್ಞಾನಿ ಸರ್ ಐಸಾಕ್ ನ್ಯೂಟನ್ ಕೂಡ ನಂಬಿದ್ದುದು, ಆತ ರಸ ವಿದ್ಯೆಯನ್ನು ಗುಟ್ಟಾಗಿ ಅಭ್ಯಾಸ ಮಾಡುತ್ತಿದ್ದುದು ಈಗ ಇತಿಹಾಸ!

ಭಾರತೀಯರ ಚಿನ್ನದ ವ್ಯಾಮೋಹ ಐತಿಹಾಸಿಕವೇನೂ ಅಲ್ಲ (ಪ್ರಾಯಃ ಆ ವ್ಯಾಮೋಹ ದೇವರಿಗೆ ಇದ್ದಿರಬೇಕು; ಏಕೆಂದರೆ ದೇಗುಲಗಳಲ್ಲಿ ಹೇರಳ ಚಿನ್ನ ಲಭ್ಯವಿರುವುದನ್ನು ಕಂಡರೆ ಹಾಗೆನ್ನಿಸುತ್ತದೆ). ವಿಜಯನಗರ ಸಂಸ್ಥಾನಕ್ಕೆ ಭೇಟಿ ನೀಡಿದ ರಾಯಭಾರಿಯೊಬ್ಬಾತ, ''ಭಾರತೀಯರು ಸಮೃದ್ಧವಾಗಿ ಲಭ್ಯವಿದ್ದರೂ ಚಿನ್ನದ ಆಭರಣಕ್ಕೆ ಹಂಬಲಿಸರು. ಗಂಡಸರು ಹಾಗೂ

ಪ್ರೊ|| ಎಮ್. ಆರ್. ನಾಗರಾಜು

ಸರಗಳ್ಳತನದ ಬಗ್ಗೆ ಎಚ್ಚರವಿರಲಿ ಎಂದು ನನ್ನ ಪರಿಚಯಸ್ಥ ಮಹಿಳೆಗೆ ಬೀಟ್ ಪೊಲೀಸರು ಹೇಳಿದ್ದುಂಟು. ಅಲ್ಲಿಯವರೆಗೂ ಎಗ್ಗಿಲ್ಲದೆ ನಡೆದಿದ್ದ ಚಿನ್ನದ ಪ್ರದರ್ಶನಕ್ಕೆ ಮಂಗಳ ಹಾಡಿ ನಕಲಿ ಆಭರಣಗಳನ್ನು ಕೊಂಡದ್ದೂ ಆಯಿತು. ಪ್ರದರ್ಶನವಂತೂ ಹಾಗೆಯೆ ಮುಂದುವರಿಯಿತು. ಹೇಗೂ ನಕಲಿ ಮಾಲು, ಹೋದರೂ ಅಡ್ಡಿಯಿಲ್ಲ ಎಂಬ ಲೆಕ್ಕಾಚಾರ. ಸರಗಳ್ಳನೊಬ್ಬ ಬೈಕಿನಲ್ಲಿ ಬಂದು ಈ ಮಹಿಳೆಯ ಬಳಿಯಿದ್ದ ಸರವನ್ನು ಕಿತ್ತೊಯ್ದ. ತಮ್ಮ ಬುದ್ಧಿವಂತಿಕೆಯನ್ನು, ಸರಗಳ್ಳನ ಪೆದ್ದುತನವನ್ನು ಅಕ್ಕ-ಪಕ್ಕದವರಿಗೆಲ್ಲಾ ಹೇಳಿದ್ದೂ ಆಯಿತು. ಮರುದಿನ ಮತ್ತೆ ವಾಕಿಂಗ್ ಹೊರಟಾಗ, ಸರಗಳ್ಳ ಪುನಃ ಹಾಜರ್. ಕಿತ್ತುಕೊಂಡು ಹೋಗಿದ್ದ ಸರವನ್ನು ಮುಖದ ಮೇಲೆ ಬಿಸಾಡಿ, ಕಪಾಳಕ್ಕೊಂದು ಬಲವಾಗಿ ಕೊಟ್ಟು, ಬಾಯ್ತುಂಬ ಬೈದು ಪರಾರಿಯಾಗಿದ್ದು ಇತ್ತೀಚೆಗೆ ನಡೆದ ಘಟನೆ. ಇಲ್ಲಿ ಮೋಸ ಹೋದವರು ಯಾರು ?

ಹೆಂಗಸರು ಹೂ ಮುಡಿಯದೇ ಹೊರಬರುವುದೇ ಇಲ್ಲ'' ಎಂದು ದಾಖಲಿಸಿರುವುದು ಗಮನಿಸಬೇಕಾದ ಅಂಶ. ಈಚೆಗೆ, ದಿಢೀರನೆ ಬಡತನದಿಂದ ಹೊರಬಂದವರು ಚಿನ್ನದ ಸಂಗ್ರಹ ಪ್ರದರ್ಶನದಲ್ಲಿ ಮೋಜು ಕಂಡಿರಬೇಕು. ಚೀನಾದ ಮಂದಿ ಭಾರತೀಯರ ಚಿನ್ನದ ಆಭರಣಗಳ ಮೋಹದ ಬಗ್ಗೆ ನಗೆಯಾಡಿದ್ದು ವರದಿಯಾಗಿದೆ.

ಒಡವೆಗಳ ವ್ಯಾಮೋಹ ಹೆಚ್ಚಿಸುವುದರಲ್ಲಿ ಪುರಾಣಾಧಾರಿತ ಚಲನಚಿತ್ರಗಳ/ಧಾರಾವಾಹಿಗಳ ಪಾತ್ರ ಹಿರಿದು. ಈ ಮೊದಲು ಪ್ರಸಾರವಾಗುತ್ತಿದ್ದ **ರಾಮಾಯಣ** ಧಾರಾವಾಹಿಯನ್ನು ನೋಡಿದ ವಿದೇಶಿ ಮಹಿಳೆ ನ್ಯಾನ್‌ಟಪ್ ನನ್ನನ್ನು ಹೀಗೆ ಕೇಳಿದಳು: ''ಈ ಧಾರಾವಾಹಿಯಲ್ಲಿ ಬಳಕೆಯಾಗುವ ವಸ್ತ್ರ ಆಭರಣಾದಿಗಳು ಆ ಕಾಲದಲ್ಲಿ ಅಷ್ಟು ಅಧಿಕ ಪ್ರಮಾಣದಲ್ಲಿ ಲಭ್ಯವಿರಲು ಸಾಧ್ಯವೇ ?''

ಪಾತ್ರ, ರೀತಿ, ನೀತಿಯಲ್ಲಿ ತಲ್ಲೀನರಾಗಿರುವ ನಮಗೆ, ಈ ಬಗೆಯ ಯಥಾರ್ಥ ಕುರಿತು ಸಂದೇಹ ಬರುವುದೇ ಇಲ್ಲ, ಅದೆಷ್ಟು ಸೋಜಿಗ !

ಚಿನ್ನದ ಬೆಲೆಯಾದರೂ ಏಕೆ ದುಬಾರಿ? ಇದು ಅಷ್ಟು ಸರಳ ಪ್ರಶ್ನೆಯಲ್ಲ. ಚಿನ್ನದ ಬೆಲೆಯನ್ನು ಇತರ ಗ್ರಾಹಕ ಸಾಮಗ್ರಿಗಳ ಹಾಗೆ ಕೇವಲ ಬೇಡಿಕೆ ಮತ್ತು ಪೂರೈಕೆಗಳಿಂದ ನಿರ್ಧರಿಸಲಾಗುವುದಿಲ್ಲ. ಬೆಳ್ಳಿಯ ನಿಕ್ಷೇಪ ಭೂಮಿಯಲ್ಲಿ ಮುಗಿದೇ ಹೋಗುತ್ತಿದೆ. ತಾಮ್ರವೂ ಇದಕ್ಕಿಂತ ಭಿನ್ನವಲ್ಲ. ಆಗ ಬೆಲೆ ಏನಾಗಬೇಕು ? ಇದ್ದಕ್ಕಿದ್ದಂತೆ ಚಿನ್ನ ನಿಕ್ಷೇಪ ಪತ್ತೆಯಾದರೆ ಅದರ ಬೆಲೆ ತಗ್ಗುವುದೂ ಇಲ್ಲ. ಲಭ್ಯತೆ ಮುಗಿಯುವ ಸೂಚನೆ ತಿಳಿಯುವ ಮೊದಲೇ ಏರಿಕೆ ಆಗುತ್ತಲೂ ಇದೆ.

ಕೈಗಾರಿಕೀಕರಣದ ಸಂದರ್ಭದಲ್ಲಿ ಹಣ ಹೂಡುವ ಪರಿಣಾಮವಾಗಿ ಅತೀವ ಲಾಭ ಬರುತ್ತಿತ್ತು. ಆಗ ಚಿನ್ನದಲ್ಲಿ ಹಣ ಹೂಡಿ ನಿಷ್ಕ್ರಿಯಗೊಳಿಸುವುದಕ್ಕಿಂತ ಲಾಭಗಳಿಕೆ ಆಕರ್ಷಕವಾಗಿ ಕಂಡುಬಂದಿರುವುದು ಸಹಜ. ಬಂಡವಾಳವಾಗಿಸುವುದು ಆಗ ರೂಢಿಯಾಯಿತು. ಹಣದ ಹೊಳೆಗೆ ಹೂಡಿಕೆಯ ಅಣೆಕಟ್ಟು ಕಟ್ಟುವುದು ಸರಿ. ಆಪದ್ಧನವಾಗಿಯೇ, ಪ್ರದರ್ಶನದ ಸಲುವಾಗಿಯೇ, ಚಿನ್ನದ ಖರೀದಿಗಿಂತ ಹಣ ಹೂಡುವುದೇ ಉಪಯುಕ್ತವೆನಿಸಿರಬೇಕು.

ಈಚಿನ ದಿನಗಳಲ್ಲಿ ಆಪದ್ಧನವಾದ ಚಿನ್ನವನ್ನು ಪ್ರದರ್ಶನಕ್ಕೆಂದು ಒಡವೆಗಳಾಗಿಸಿಕೊಂಡು ಧರಿಸಿದರೆ ಆ ಚಿನ್ನವೇ ಆಪತ್ಕಾರಕ ಧನವಾಗಿಬಿಡುತ್ತದೆ! ಹೀಗಾಗಿ ಚಿನ್ನದ ಬೇಡಿಕೆ ಭಾಗಶಃ ಕುಂಠಿತವಾಯಿತು. ಮೆರೆದಾಡಲು ಬಳಕೆಯಾಗುತ್ತಿದ್ದ ಚಿನ್ನ ಮರೆಸಿಡಲೂ ಬಳಕೆಯಾಯಿತು. ಹೀಗಾಗಿಯೇ ಅದಕ್ಕೆ ಋಣ ಬಡ್ಡಿ!

ಚಿನ್ನದ ಪ್ರದರ್ಶನಕ್ಕೆ ಪರ್ಯಾಯವಾಗಿ ಚಿನ್ನದ ಹಾಗೆಯೇ ಹೊಳಪಾದ, ಆದರೆ ಚಿನ್ನದ ಹಾಗೆ ಸಾಂದ್ರವಾಗಿರದ, ಬಹಳ ಕಾಲದವರೆಗೆ ಹೊಳಪನ್ನು ಉಳಿಸಿಕೊಳ್ಳಬಲ್ಲ ವಸ್ತುಗಳನ್ನು, ಒಡವೆಗಳನ್ನು ರಸಾಯನಶಾಸ್ತ್ರ ರೂಪಿಸಿದೆ. ಅದು ಜನಪ್ರಿಯವಾಗಿ ಸ್ತ್ರೀ-ಪುರುಷರ ಭೇದವಿಲ್ಲದೆ, ಬಡವ-ಬಲ್ಲಿದರೆಂಬ ಅಂತರವಿಲ್ಲದೆ ಇಡೀ ಸಮುದಾಯವೇ ಸಹಭಾಗಿಯಾಗಿ ಬಳಕೆಮಾಡುತ್ತಿದೆ. ಹೀಗಾಗಿ ಚಿನ್ನದ ಆಭರಣಗಳು ಈಚಿನ ದಿನಗಳಲ್ಲಿ ಪ್ಯಾಷನ್/ಫ್ಯಾಷನ್ ತಣಿಸದ 'ವೇಸ್ಟ್ ಬಾಡಿಗಳು'!

ಸರಗಳ್ಳತನದ ಬಗ್ಗೆ ಎಚ್ಚರವಿರಲಿ ಎಂದು ನನ್ನ ಪರಿಚಯಸ್ಥ ಮಹಿಳೆಗೆ ಬೀಟ್ ಪೊಲೀಸರು ಹೇಳಿದ್ದುಂಟು. ಅಲ್ಲಿಯವರೆಗೂ ಎಗ್ಗಿಲ್ಲದೆ ನಡೆದಿದ್ದ ಚಿನ್ನದ ಪ್ರದರ್ಶನಕ್ಕೆ ಮಂಗಳ ಹಾಡಿ ನಕಲಿ ಆಭರಣಗಳನ್ನು ಕೊಂಡದ್ದೂ ಆಯಿತು. ಪ್ರದರ್ಶನವಂತೂ ಹಾಗೆಯೆ ಮುಂದುವರಿಯಿತು. ಹೇಗೂ ನಕಲಿ ಮಾಲು, ಹೋದರೂ ಅಡ್ಡಿಯಿಲ್ಲ ಎಂಬ ಲೆಕ್ಕಾಚಾರ. ಸರಗಳ್ಳನೊಬ್ಬ ಬೈಕಿನಲ್ಲಿ ಬಂದು ಈ ಮಹಿಳೆಯ ಬಳಿಯಿದ್ದ ಸರವನ್ನು ಕಿತ್ತೊಯ್ದು, ತಮ್ಮ ಬುದ್ಧಿವಂತಿಕೆಯನ್ನು, ಸರಗಳ್ಳನ ಪೆದ್ದುತನವನ್ನು ಅಕ್ಕ-ಪಕ್ಕದವರಿಗೆಲ್ಲಾ ಹೇಳಿದ್ದೂ ಆಯಿತು. ಮರುದಿನ ಮತ್ತೆ ವಾಕಿಂಗ್ ಹೊರಟಾಗ, ಸರಗಳ್ಳ ಪುನಃ ಹಾಜರ್, ಕಿತ್ತುಕೊಂಡು ಹೋಗಿದ್ದ ಸರವನ್ನು ಮುಖದ ಮೇಲೆ ಬಿಸಾಡಿ, ಕಪಾಳಕ್ಕೊಂದು ಬಲವಾಗಿ ಕೊಟ್ಟು, ಬಾಯ್ತುಂಬ ಬೈದು ಪರಾರಿಯಾಗಿದ್ದು ಇತ್ತೀಚೆಗೆ ನಡೆದ ಘಟನೆ. ಇಲ್ಲಿ ಮೋಸ ಹೋದವರು ಯಾರು ?

ಈ ಎಲ್ಲ ಹಿನ್ನೆಲೆಯಲ್ಲಿಯೂ ನಿರಂತರ ಏರಿಕೆ ಆಗುತ್ತಿರುವ ಚಿನ್ನದ ಬೆಲೆ ಏರಿಕೆಯ ತೀವ್ರತೆಯನ್ನು ಗಮನಿಸಬೇಕಾಗಿದೆ. ಆದರೆ ಇದರ ಕಾರಣ - ಪರಿಣಾಮಗಳಲ್ಲಿ ಗಂಭೀರ ವಿಷಯಗಳಿವೆ. ಆಧುನಿಕ ದೇವರಾಗಿರುವ ನಾಯಕರು/ಉದ್ದಿಮೆದಾರರು/ನಟರು ದೇವರ ಹಾಗೆ ಮುಗುಳುನಗುತ್ತಾ ಅಭಯ ಹಸ್ತ ತೋರುತ್ತಾ ಚಿನ್ನವನ್ನು ಸಂಗ್ರಹಿಸಿದರೆ ಏನಾಗಬೇಡ !

ಲಾಭದಾಯಕ ವಹಿವಾಟಿನಲ್ಲಿ ಹಣ ಹೂಡುತ್ತಿದ್ದರೂ ಈಗ ಚಿನ್ನದ ಖರೀದಿಗೆ ತೊಡಗುವತ್ತ ಕೊಂಚ ವಾಲಿದ್ದರಿಂದ ಚಿನ್ನದ ಬೆಲೆ ವಿಶ್ವ ಮಾರುಕಟ್ಟೆಯಲ್ಲಿ ಏರಿಕೆ ಕಂಡಿದೆ. ಕೈಗಾರಿಕೆಗಳ ಮೂಲಕ ಪ್ರಗತಿ ಸಾಧಿಸ ಬಹುದೆಂಬ ನಂಬಿಕೆ ಶ್ರೀಸಾಮಾನ್ಯರಲ್ಲಿ ನಿಚ್ಚಳ ವಾಗಿರುವುದಕ್ಕೆ ಎಂಜಿನಿಯರಿಂಗ್ ವಿದ್ಯಾಭ್ಯಾಸಕ್ಕೆ ಏರುತ್ತಲೇ ಇರುವ ಬೇಡಿಕೆಗಿಂತ ಸಾಕ್ಷಿ ಬೇಕೆ ?

ಮಧ್ಯಮವರ್ಗದ ಈ ವಿಶ್ವಾಸ ಹಣ ಹೂಡಿಕೆದಾರರಲ್ಲಿ ಕುಂಠಿತವಾಗುತ್ತಿರುವುದು ವಿಪರ್ಯಾಸ. ಯಾವುದೇ ವಿದ್ಯಮಾನದ ತುದಿ ಸಹಜವಾಗಿಯೇ ವಿಪರ್ಯಾಸವಾಗಿರುತ್ತದೆ.

ಆರ್ಥಿಕತೆಯ ವಾಸ್ತವಿಕತೆಯ ಬಗ್ಗೆ ಗಂಭೀರವಾಗಿ ಚಿಂತಿಸದೆ 'ಪ್ರಳಯ'ದಂತಹ ಹುಚ್ಚು ಊಹೆಗಳನ್ನು ಬಿತ್ತುವ ಪ್ರಳಯಾಂತಕರ ಮಾತು ಸುಳ್ಳೆ? ನಿಜವೆ? ಎಂದು ಚರ್ಚೆ ಮಾಡುವವರನ್ನು ಕಂಡರೆ ಕಟು ವಾಸ್ತವವೊಂದು ಸ್ಪಷ್ಟ. ನಮ್ಮ ವಿಚಾರವಂತಿಕೆಗೂ ರಂಜನೀಯ ಮಗ್ಗುಲು ಇರಬೇಕು! ಗಂಭೀರ ವಿಷಯ ಗಳಿಗೆ ಪಾರ್ಕಲಾಂ ಸೂತ್ರದ (ನೋಡಿಕೊಂಡರಾಯಿತು) ಶೀತಲ ಸಂಗ್ರಹವೇ ನೆಲೆ.

ನಮ್ಮನ್ನು ಆಳುತ್ತಿರುವುದು ಆವೇಶವೊ ? ಆಲೋಚನೆಯೊ ?

ಚಿನ್ನದ ಬೆಲೆ ಇಳಿಯುವುದಿಲ್ಲ, ಬೇರೆ ವಸ್ತುಗಳೂ ತಮ್ಮ ಬೆಲೆಯನ್ನು ಏರಿಸಿಕೊಂಡು ಚಿನ್ನವನ್ನು ಸಮೀಪಿಸಲು ಯತ್ನಿಸುತ್ತವೆ. ಇದರ ಪರಿಣಾಮವೇನು ? ಯಾರ ಮೇಲೆ ಎಷ್ಟು? ಕಂಪ್ಯೂಟರ್ ಕೂಡ ಈ ಲೆಕ್ಕಾಚಾರದಲ್ಲಿ ಸೋತೀತು !

ಅನೇಕ ಕಾರಣಗಳಿಂದಾಗಿ ಉದ್ದಿಮೆಗಳೂ ಗಂಡಾಂತರಕ್ಕೊಳಗಾಗಿವೆ. ಅವುಗಳನ್ನು ವಿಸ್ತಾರಗೊಳಿಸದೆ ಪ್ರಮುಖವಾದ ಕೆಲವನ್ನು ಇಲ್ಲಿ ನೀಡಲಾಗಿದೆ :

* ನೈಸರ್ಗಿಕ ಸಂಪನ್ಮೂಲಗಳು ಬರಿದು/ದುಬಾರಿ
* ಹೆಚ್ಚಿದ ಮಾಲಿನ್ಯ/ದುಬಾರಿಯಾದ ಮಾಲಿನ್ಯ ನಿರ್ವಹಣೆ
* ಸರಕಾರದ ಸಹಕಾರ ಪಡೆವಲ್ಲಿ ಚಾರಿತ್ರ್ಯಹೀನ ಅಧಿಕಾರಿಗಳ/ಜನನಾಯಕರ ಭ್ರಷ್ಟಾಚಾರದ ಹೆಚ್ಚಳ
* ಜನರ ಕೊಳ್ಳುವ ಸಾಮರ್ಥ್ಯಕ್ಕೆ ಮೀರಿದ ಉತ್ಪನ್ನದ ದಾಸ್ತಾನು
* ಪಾರದರ್ಶಕತೆಯ ಕೊರತೆಯಿಂದಾಗಿ ಉದ್ಯೋಗಿಗಳು

## ಮನೆ–ರಾಮಾಯಣ

ಬೆಳಗಾಗುತ್ತಲೆ
ಸುದ್ದಿಯೋ ಸುದ್ದಿ

(1)

ಪಕ್ಕದ ಮನೆ ರಘು
ಎದುರು ಮನೆ ಜಾನಕಿ
–ಯ ಕದ್ದೊಯ್ದನೆಂದು
ಯಾರೋ ಹೇಳಿದರು ?
ಕದ್ದೊಯ್ಯಲಿಲ್ಲ
ಅವನು
ಹನ್ನೊಂದು ಮುವ್ವತ್ತರ
ಐರಾವತವ ಹತ್ತೊಯ್ದನೆಂದು !

(2)

ಅಮ್ಮ ಹಲುಬಿ ಅತ್ತಳು
ಅಪ್ಪನ ಮುಂದೆ
ವಯಸ್ಸಿಗೆ ಬಂದ ಮಗನ
ಮುಂದೆ ವಾಲ್ಮೀಕಿ
ಕಾವ್ಯ ಓದಬೇಡಿರೆಂದು.

(3)

ಅಪ್ಪ ನಸು ನಕ್ಕು
ಹೇಳಿದ
ಅವನು ನನ್ನ ಮಗ ಕಣೆ
ಅವಳ ಮನಸ್ಸು ಗೆದ್ದೊಯ್ದ (ಕದ್ದೊಯ್ದಿಲ್ಲ).
ಆದರೆ
ರಾವಣನಲ್ಲ

**ಆರ್. ಬಿ. ದಿವಾಕರ್**
ರಾಮಸಾಗರ – ೫೮೩೨೧೨
ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ



## ಶ್ರೇಷ್ಠ ವಿಜ್ಞಾನಿ ಪ್ರಶಸ್ತಿ

# ಡಾ|| ಎಚ್. ಗೋಕುಲ್

ಬೆಂಗಳೂರು ನ್ಯಾಷನಲ್ ಕಾಲೇಜಿನಲ್ಲಿ ಸಸ್ಯಶಾಸ್ತ್ರ ಪ್ರಾಧ್ಯಾಪಕರಾದ ಡಾ|| ಎಚ್. ಗೋಕುಲ್ ಅವರಿಗೆ ಭಾರತೀಯ ವಿಜ್ಞಾನ ಅಕಾಡೆಮಿಯು ದೇಶದ ಶ್ರೇಷ್ಠ ವಿಜ್ಞಾನಿಯೆಂದು ೨೦೧೨ರ ರಾಷ್ಟ್ರ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ನವದೆಹಲಿಯಲ್ಲಿ ಅಂತರರಾಷ್ಟ್ರೀಯ ವಿಜ್ಞಾನಿಗಳ ಸಮ್ಮೇಳನವೊಂದು ಜರುಗಿ, ಶ್ರೀಯುತರಿಗೆ ಅಲ್ಲಿನ ಸಮಾರಂಭದಲ್ಲಿ ಪ್ರಶಸ್ತಿಯನ್ನು ನೀಡಲಾಯಿತು. ಅವರಿಗೆ ಅತ್ಯಂತ ಹರ್ಷದಿಂದ 'ಹೊಸತು' ಅಭಿನಂದನೆ ಸಲ್ಲಿಸುತ್ತದೆ. ವಿಜ್ಞಾನಿಗಳನ್ನು ಸಂದರ್ಶಿಸುವಾಗೆಲ್ಲ ಡಾ|| ಗೋಕುಲ್ 'ಹೊಸತು'ಗೆ ತಮ್ಮ ಸಲಹೆ ಮತ್ತು ಸಹಕಾರ ನೀಡುತ್ತಾ ಬಂದಿರುವುದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದು. —ಸಂ.

ಉದ್ಯೋಗದಾತರ ನಡುವೆ ಪೂರಕವಲ್ಲದ ಬಾಂಧವ್ಯ

* ಸಾಗಾಣಿಕೆ ವೆಚ್ಚ ದುಬಾರಿ
* ಜಾಗತೀಕರಣದ ಹೆಸರಿನಲ್ಲಿ ಮಾರುಕಟ್ಟೆ ವಿಸ್ತರಣೆಗೆ ಪ್ರಯತ್ನ, ಆದರೆ ಉತ್ಪಾದನಾ ಕೌಶಲಗಳ ಖಾಸಗೀಕರಣ
* ನಿಸರ್ಗದ ಚಕ್ರೀಯತೆಯ ಏರುಪೇರು

ಮುಂದುವರಿದ ರಾಷ್ಟ್ರಗಳು ಮುಂದುವರಿಯುತ್ತಿರುವ ರಾಷ್ಟ್ರಗಳ ಮಾರುಕಟ್ಟೆಯ ಮೇಲೆ ಕಣ್ಣಿಟ್ಟರೂ ಹಿಂದುಳಿದ ರಾಷ್ಟ್ರಗಳ ಆಕ್ರಂದನ, ಮುಂದುವರಿಯುತ್ತಿರುವ ರಾಷ್ಟ್ರಗಳಲ್ಲಿನ ಸಿರಿತನದ ಅಸಮರ್ಪಕ ವಿತರಣೆ – ಇವುಗಳೂ ಸಮಸ್ಯೆಯನ್ನು ಗೋಜಲಾಗಿಸಿವೆ. ಅನೇಕ ಜನರ ಷೇರು ಪಾಲುದಾರಿಕೆಯಲ್ಲಿ ಅವ್ಯವಹಾರಗಳಿಂದ ಕಂಗಾಲಾದ ಜನರು, ಮೋಸಗಳಿಗೆ ಬಲಿಯಾದ ಪ್ರಸಂಗಗಳಿಂದ ಬೇಸತ್ತು ಹಣ ಹೂಡಿ ಕಾಯುವ ಸಮಾಧಾನ ಕಳೆದುಕೊಂಡಿದ್ದಾರೆ.

ಇದರ ಬದಲು ಚಿನ್ನದ ಮೇಲೆ ಹಣ ಹೂಡಿ ಸುಮ್ಮನಿದ್ದರೂ ಬೆಲೆ ಹೆಚ್ಚಳವಾಗಿ ಗಂಡಾಂತರವಿಲ್ಲದ (ರಿಸ್ಕ್ ಫ್ರೀ) ನಿಷ್ಕರ್ಮ ಲಾಭವಾಗುತ್ತದೆ ಎಂಬ ಆಲೋಚನೆ ಹಣ ಹೂಡುವ ಜನಗಳದ್ದು. ಇದರಿಂದಾಗಿ ಚಿನ್ನದ ಬೆಲೆ ಹೆಚ್ಚಳವಾಗುತ್ತಿದೆ ಎಂದು ಹೇಳಲಾಗುತ್ತದೆ.

ಈ ವಿಷಯ ಭಾಗಶಃ ಸತ್ಯ. ಆದರೂ ಈ ವಾದದಂತೆ, ಹಣವನ್ನು ಉದ್ದಿಮೆಯಲ್ಲಿ ಹೂಡದೆ ಚಿನ್ನದಲ್ಲಿ ತೊಡಗಿಸಿದರೆ ಆಗುವ ಪರಿಣಾಮವೇನು ? ಉದ್ದಿಮೆಯಲ್ಲಿ ಹೂಡಿದ ಹಣ ಉದ್ಯೋಗಾವಕಾಶವನ್ನು, ಗ್ರಾಹಕ ವಸ್ತುವನ್ನು ಉತ್ಪಾದಿಸುತ್ತದೆ. ಹಣದ ಚಲಾವಣೆ ನಿರಂತರವಾಗಿರುತ್ತದೆ. ಚಿನ್ನವನ್ನು ಕೊಂಡಿಟ್ಟು ಕೊಂಡರೆ ಬಂಡವಾಳವಾಗಬಹುದಾಗಿದ್ದ ನಗದು ಬಂಡವಾಳವಾಗದು. ನಮ್ಮ ದೇಹದಲ್ಲಿ ಪರಿಚಲನೆ ಆಗಬೇಕಾದ ರಕ್ತ ಹೆಪ್ಪುಗಟ್ಟಿ ಕ್ಲಾಟ್/ಗರಣಿ ಆದ ಹಾಗೆ ! ಆ ಗರಣೆಯೇನಾದರೂ ಪ್ರಜೀವಕಾಂಗಗಳಿಗೆ ರಕ್ತ ಹರಿಯದಂತೆ ತಡೆದರೆ ವ್ಯಕ್ತಿ ಸಾಯುತ್ತಾನೆ. ಹಾಗೆಯೇ ಹಣವನ್ನು ಚಿನ್ನದ ಗರಣೆಯಾಗಿಸಿದ್ದು ಆರ್ಥಿಕ ವಹಿವಾಟಿನ ಮಿದುಳಿಗೆ ರಕ್ತ ಪರಿಚಲನೆ ನಿಲ್ಲಿಸಿದರೆ ವ್ಯಾಪಾರ ವಹಿವಾಟಿಗೆ ಪಾರ್ಶ್ವವಾಯು ಬಡಿದ ಹಾಗೆಯೇ !

ಉದ್ದಿಮೆ/ಉತ್ಪಾದನೆಯ ಮೇಲೆ ಭರವಸೆ ಕಳೆದುಕೊಂಡ ಸಿರಿವಂತರು ಹಣವನ್ನು ಬಂಡವಾಳವಾಗಿಸದೆ ಚಿನ್ನದ ರೂಪದಲ್ಲಿ ಸೆರೆ ಹಾಕಿದರೆ ವಾಹನ ದಟ್ಟಣೆಯ ಭರಾಟೆಯಲ್ಲಿ ತನಗೆ ದಾರಿಯಿಲ್ಲದೆ ಪರದಾಡುವ ಪಾದಚಾರಿಯಂತಾಗುವ ಬಡವರೂ ರೂಪುಗೊಳ್ಳುತ್ತಾರೆ. ವಾಹನವಿಲ್ಲದೆ ಪಾದಚಾರಿಗಳು ಅಪ್ರಸಕ್ತ ಹೊರೆ ಎಂದು ವಾಹನ ಚಾಲಕರಿಗೆ ಅನಿಸಿದಂತೆ ಬಡತನ ನಿವಾರಿಸುವ ಘೋಷಣೆಯ ಮರೆಯಲ್ಲಿಯೇ ಬಡವರನ್ನೇ ನಿವಾರಿಸುವ ದಿಕ್ಕಿನಲ್ಲಿ ನಾವು ಸಾಗುತ್ತಿದ್ದೇವೆ.

ದೇವರ ಮೇಲೆ ಭಾರ ಹಾಕಿ ಕಷ್ಟಕ್ಕೆ ಸಿಲುಕಿದ ಹಾಗೆಯೇ ಉತ್ಪಾದನೆಯನ್ನು ನಂಬಿ ಮುಗ್ಗಟ್ಟಿಗೆ ಸಿಲುಕುವ ಸ್ಥಿತಿಗೆ ತಲುಪುತ್ತಿರುವ ಸೂಚನೆಗಳು ಈಗಾಗಲೇ ಕಂಡುಬರುತ್ತಿವೆ. ಪ್ರಳಯ ಕೇವಲ ಊಹೆ; ಆದರೆ ಪ್ರಗತಿ ವಿಗತಿಯಾದರೆ ನಿರ್ಗತಿಕರ ಪರಿಸ್ಥಿತಿ ಏನು ?

ವೈಯಕ್ತಿಕ ಭಯದಿಂದ ಅಭಯ ಪಡೆಯಹೋಗಿ, ದುಡಿಯದೆ ಗಂಡಾಂತರ ಪಡೆಯದೆ 'ನಿಷ್ಕರ್ಮಕಾಮ'ದ ಲಾಭ ಗಳಿಸಿ ವ್ಯಕ್ತಿಗಳು/ಸಂಸ್ಥೆಗಳು/ಉದ್ದಿಮೆಗಳು ಹೊನ್ನಿಗೆ ಮರುಳಾಗುವುದು ಬಡವರ ಅನ್ನಕ್ಕೆ ಕುತ್ತು; ಸಿರಿವಂತರ ಕೊರಳಿಗೆ ಉರುಳು !

ಚಿನ್ನದ ಲಭ್ಯತೆ ನಿಗದಿತ ದರದಲ್ಲಿದ್ದಾಗ ಚಿನ್ನದ ಬೇಡಿಕೆ ನಿರಂತರವಾಗಿ ಹೆಚ್ಚಿದರೆ, ಬೇಡಿಕೆ - ಪೂರೈಕೆಗಳ ಅಂತರದಿಂದಾಗಿ ಅದರ ಬೆಲೆಯು ಏರುತ್ತಲೇ ಹೋಗುತ್ತದೆ. ತನ್ನ ಹಣಕಾಸಿನ ಬಂಡವಾಳವನ್ನು ಚಿನ್ನದಲ್ಲಿ ಹೂಡಿದ ವ್ಯಕ್ತಿಗೆ ಯಾವುದೇ ಬಡ್ಡಿ ವಾಪಸ್ ಬರುವುದಿಲ್ಲ. ಅದರ ಸಂರಕ್ಷಣೆಗೆ ಹಣ ತೆರಬೇಕಾಗುತ್ತದೆ. ಹೀಗಾಗಿ ಶಾಸ್ತ್ರೀಯ ಅರ್ಥಶಾಸ್ತ್ರ ಪರಿವ್ಯಾಪ್ತಿಯಲ್ಲಿ ಅದು ಅನುತ್ಪಾದಕ ಹೂಡಿಕೆ. ಚಿನ್ನವನ್ನು ಮತ್ತೆ ಮಾರಿ ಪುನಃ ಹಣವಾಗಿಸಿಕೊಳ್ಳುವುದೇನೋ ಸಾಧ್ಯ. ಆದರೆ, ಅದೇ ಹಣದಿಂದ ಮತ್ತಷ್ಟು ಚಿನ್ನವನ್ನು ಕೊಳ್ಳಲು ಸಾಧ್ಯವಿಲ್ಲ. ಅಂದರೆ ಚಿನ್ನದಲ್ಲಿ ಹೂಡಿಕೆ ಮಾಡಿದವನು ಚಿನ್ನದ ಮೂಲದ ಗಳಿಕೆಯಿಂದಲೇ ಇನ್ನಷ್ಟು ಚಿನ್ನವನ್ನು ಕೊಂಡುಕೊಳ್ಳಲಾರ. ಉದಾಹರಣೆಗೆ, ಇಂದು ಒಂದು ಲಕ್ಷ ರೂಗಳನ್ನು ಬಳಸಿ ಚಿನ್ನ ತೆಗೆದಿಟ್ಟರೆ, ಒಂದು ವರ್ಷದ ಬಳಿಕ ನೀವು ಅದನ್ನೇ ಮಾರಿ ೧ ಲಕ್ಷ ೨೦ ಸಾವಿರ ಗಳಿಸಿದರೆ, ಮರುದಿನವೇ ಒಂದು ಲಕ್ಷ ರೂಗಳಿಗೆ ಪಡೆದ ಚಿನ್ನದ ಪ್ರಮಾಣವನ್ನೇ ೧ ಲಕ್ಷ ೨೦ ಸಾವಿರ ರೂಗಳಿಗೆ ಕೊಳ್ಳಲಾರಿರಿ. ಅಂದರೆ ನಿಮ್ಮ ಬಂಡವಾಳ ನಿಮ್ಮಲ್ಲಿಯೇ ಇದೆ, ಆದರೆ ಅದನ್ನು ಅನುತ್ಪಾದಕವಾಗಿ ಹೂಡಿ, ಗಳಿಸಬಹುದಾದ ಬಡ್ಡಿಯನ್ನು ನಷ್ಟಮಾಡಿಕೊಂಡಿರಿ ಎಂಬುದೇ ಇದರ ಅರ್ಥ.

ಹೋಗಲಿ, ನೀವು ೨೦ ಸಾವಿರವನ್ನು ನಿಮ್ಮಲ್ಲಿಟ್ಟುಕೊಂಡು, ಅದನ್ನು ಲಾಭವೆಂದು ಪರಿಗಣಿಸಿ, ೧ ಲಕ್ಷವನ್ನು ಹೂಡಿದರೆ, ಇನ್ನೂ ಕಡಿಮೆ ಪ್ರಮಾಣದ ಚಿನ್ನವನ್ನಷ್ಟೇ ನೀವು ಕೊಳ್ಳಬಹುದು. ಇದರ ಅರ್ಥವಿಷ್ಟೆ. ಚಿನ್ನದ ಬೆಲೆ ಏರಲು ನೀವೇ ಸೃಷ್ಟಿಸಿದ ಬೇಡಿಕೆ ಕಾರಣ. ಅದನ್ನೇ ಬಳಸಿ ನೀವೇ ಲಾಭ ಮಾಡಿಕೊಳ್ಳಲಾರಿರಿ. ನೀವು ಈಗ ಚಿನ್ನವನ್ನು ಕೊಳ್ಳುವಾಗ, ಈ ಮೊದಲು ಹೂಡಿದ ವ್ಯಕ್ತಿಯ ಗಳಿಕೆಯನ್ನಷ್ಟೇ ಖಚಿತಗೊಳಿಸುವಿರಿ, ಮತ್ತು ನೀವು ಅದನ್ನು ಮಾರಿದಾಗ ನಿಮ್ಮಿಂದ ಚಿನ್ನವನ್ನು ಕೊಂಡವರು ನಿಮ್ಮ ಬಂಡವಾಳವನ್ನು ಹಿಂದಿರುಗಿಸುತ್ತಾರೆ. ಅಂದರೆ ನಿಮ್ಮಲ್ಲೇ ಬಂಡವಾಳವನ್ನಿಟ್ಟುಕೊಂಡು ಸಾಲ ಮಾಡಿದ ಹಾಗೆ. ಇಲ್ಲಿ ಬಂಡವಾಳವು ತನ್ನ ಕೊಳ್ಳುವ ಸಾಮರ್ಥ್ಯವನ್ನು (ಇದನ್ನು ಸವಕಳಿ ಎಂದು ಹೇಳುತ್ತಾರೆ) ಕಳೆದುಕೊಂಡಿರುವುದು ಅರಿವಿಗೆ ಬರುತ್ತದೆ. ಹೀಗಾಗಿ ಅದು ಅನುತ್ಪಾದಕ ಹೂಡಿಕೆ.

ಹೂಡಿಕೆಯೆಂದು ಹೇಳಿಯೇ ಕೊಂಡಿಟ್ಟ ಚಿನ್ನವನ್ನು ಮಾರಲು ಪ್ರಯತ್ನಿಸಿ. ಅದರ ಏರುತ್ತಿರುವ ಬೆಲೆಯೇ ನಿಮ್ಮನ್ನು ಇನ್ನೊಂದಿಷ್ಟು ದಿನ ವಿಳಂಬ ಮಾಡಲು ಒತ್ತಾಯಿಸುತ್ತದೆ. ಅದರರ್ಥ ಒಮ್ಮೆ ಹಣವನ್ನು ಚಿನ್ನವಾಗಿಸಿದರೆ, ಅದನ್ನು ಮಾರಿ ಕೈತೊಳೆದುಕೊಳ್ಳುವುದು ಅಷ್ಟು ಸುಲಭವಲ್ಲ. ಹಾಗೊಮ್ಮೆ ಪರಿಸ್ಥಿತಿ ಅನಿವಾರ್ಯವಾದಾಗ ಚಿನ್ನವನ್ನು ಅಡಮಾನವಿಟ್ಟು ಸಾಲ ಪಡೆದಾದರೂ ಬಡ್ಡಿ ಕಟ್ಟಿ ಚಿನ್ನವನ್ನು ನಿಮ್ಮ ಒಡೆತನದಲ್ಲಿಟ್ಟುಕೊಳ್ಳುವಂತೆ ನಿಮ್ಮ ಮನಸ್ಸು ಅಪಾರ ಒತ್ತಡ ಹೇರುತ್ತದೆ. ಹಾಗಾದರೆ ಚಿನ್ನವನ್ನು ಹೂಡಿಕೆಯೆಂದು ಪರಿಗಣಿಸುವುದು ಎಷ್ಟು ಸರಿ ?

ಜನಸಾಮಾನ್ಯರಿಗೆ ಚಿನ್ನದ ಉಪಯುಕ್ತತೆ ಏನಿದ್ದರೂ ಅದರಿಂದ ಒಡವೆ ಮಾಡಿಸಿಕೊಂಡು, ಅದನ್ನು ಪ್ರದರ್ಶಿಸಿ ಸಂಭ್ರಮಿಸಿದಾಗಲೇ ! ಅದನ್ನು ಗಟ್ಟಿ ಮಾಡಿಟ್ಟರೆ ಯಾರಿಗೆ ತೋರಿಸಿ ಸಂಭ್ರಮಿಸುವಿರಿ ? ಕಷ್ಟ ಬಂದಾಗ ಚಿನ್ನವನ್ನು ಇಟ್ಟುಕೊಳ್ಳಲು ಆಗದು, ಮಾರಿ ಕೈ ತೊಳೆದುಕೊಳ್ಳಲೂ ಮನಸ್ಸು ಒಪ್ಪದು !

**ಪ್ರೊ|| ಎಮ್. ಆರ್. ನಾಗರಾಜು**
ಎಫ್-೩, ಎಸ್.ಎಫ್.ಎಸ್. ನಿವಾಸಗಳು
೭ನೇ 'ಬಿ', ಅಡ್ಡರಸ್ತೆ, ಯಲಹಂಕ ಉಪನಗರ
ಬೆಂಗಳೂರು - ೫೬೦ ೦೬೪









# ಗ್ರಾಮೀಣ ಕಲೆಗಾರರು

ಪಿತೃಪಕ್ಷದ ಮಾರನೆಯ ದಿನ, ಹಾಗೆನ್ನುವುದಾದರೆ ಯಾವುದೇ ಹಬ್ಬದ ಮಾರನೆಯ ದಿನ ಬೆಳಗ್ಗೆ ಏಳುತ್ತಿದ್ದಂತೆ ಗ್ರಾಮೀಣ ಕಲೆಗಾರರು ಹಾಡುತ್ತ ಮನೆಗಳ ಮುಂದೆ ಹಾಜರಾಗುತ್ತಾರೆ. ದೊಂಬಿದಾಸರು, ಬುಡಬುಡುಕಿಯವರು, ಗೊಂಬೆರಾಮರು, ಕಂಸಾಳೆಯವರು, ಮಂಟೆಸ್ವಾಮಿ ಭಕ್ತರು – ಹೀಗೆ.

ಇಬ್ಬರು ಮೂವರ ವೃಂದ, ಗಂಡಸರು-ಹೆಂಗಸರು ಒಟ್ಟಾಗಿ, ಒಂಟಿಯಾಗಿ ಬರುವವರೂ ಉಂಟು. ಶ್ರುತಿಪೆಟ್ಟಿಗೆ, ತಂಬೂರಿ, ಹಾರ್ಮೋನಿಯಂ ಹೀಗೆ ಹಲವು ಬಗೆಯ ವಾದ್ಯಗಳು. ಇವರು ನೆಲೆನಿಂತ ಅಲೆಮಾರಿಗಳು. ತಮ್ಮ ವೃತ್ತಿಯನ್ನೇ ಮುಂದುವರಿಸಿರುವವರು.

ಭಾಷಾ ಶುದ್ಧತೆ, ಶ್ರುತಿ ಶುದ್ಧತೆ ಇತ್ಯಾದಿ ಅಳತೆಗೋಲನ್ನು ಅನ್ವಯಿಸಲಾಗದ ಕರುಳಿನ ದನಿಗಳು ಅವು. ದಾಸರ ಪದಗಳು, ತತ್ವಪದಗಳು, ಸಿನಿಮಾ ಹಾಡುಗಳು, 'ಕೋರಣ್ಣ ನೀಡಮ್ಮ ಕೋಡುಗಲ್ಲಿನ ಮೇಲೆ' – ಈ ಮಧ್ಯೆ ಅವರಿಗೆ ಮುಂದಿನ ಮನೆಗೆ ಹೋಗುವ ಅವಸರ. 'ಅಮ್ಮಾ ತಾಯೀ... ಬಿಕ್ಸೆ ನೀಡ್ರವ್ವ...' – ಎಂದು ಒಮ್ಮೆ ಮನೆಯವರಿಗೆ ನೆನಪು ಮಾಡಿ ಮತ್ತೆ ಒಂದೆರಡು ಸಾಲು ಹಾಡು.

ಮನೆಯವರು ರಾಗಿ, ಅಕ್ಕಿ, ಹಬ್ಬಕ್ಕೆ ಮಾಡಿದ ತಿಂಡಿಗಳು, ಹಣ್ಣು ಇತ್ಯಾದಿ ನೀಡಿದನಂತರ, 'ಅವ್ವ ಖಾರಾ ಪುಡಿ (ಮಸಾಲೆ ಪುಡಿ) ಕೊಡ್ರವ್ವಾ !' – ಎಂಬ ಮತ್ತೊಂದು ಬೇಡಿಕೆ. ಫೋಟೋ ತೆಗೆದುಕೊಂಡದ್ದಕ್ಕಾಗಿ ಹಣ ನೀಡಿದರಂತೂ ಒಂದು ಬಗೆಯ ಅನಿರೀಕ್ಷಿತ ಆಘಾತ ಅನುಭವಿಸಿದರೂ ಮುಖದಲ್ಲಿ ಕೃತಜ್ಞತೆಯ ನಗು. 'ಫೋಟೋ ಕೊಡ್ತೀರಾ ಸ್ವಾಮಿ' – ಎಂಬ ಬೇಡಿಕೆ.

ಈ ಮಧ್ಯೆ ಅವರ ಬಗ್ಗೆ ಕಿರು ಪರಿಚಯ. ಈಗಿನ ಮಕ್ಕಳು ತಮ್ಮ ಹಳೆಯ ವೃತ್ತಿಯನ್ನು ಇಷ್ಟಪಡುತ್ತಿಲ್ಲವೆಂಬ ದೂರು. ಗಂಡುಮಕ್ಕಳು ರೈತರ ಹೊಲಗಳಿಗೆ ಕೂಲಿಗೆ ಹೋಗುವ ಬಗ್ಗೆ ಮಾಹಿತಿ.

ಸವಿತ ಹಾಡಿದ ಎರಡು ಸಾಲು ಹಾಡನ್ನು ಬರೆದುಕೊಳ್ಳಲೂ ಸಾಧ್ಯವಾಯಿತು. ಗಂಡ ರಮೇಶ ಕಲಿಸಿಕೊಟ್ಟದ್ದು.

ಮರದ ಹಣ್ಣು ಮಾಯವಾಯ್ತು
ಕೊಳದ ನೀರು ಬತ್ತೆ ಹೋಯ್ತು
ಅರಮನೆಯಲ್ಲಿ ಆಡಿದ ಆಟ
ಕಾಡಿನಲ್ಲಿ ಅಳಿಯುವ ಆಟ.

**– ಕೆ. ಪಿ. ಸ್ವಾಮಿ** , ನಂ. ೧೦, ೧ನೇ ಮಹಡಿ
ಶ್ರೀರಾಮ ದೇವಾಲಯ ರಸ್ತೆ, ಶ್ರೀರಾಮ ದೇವಾಲಯದ ಎದುರು,
ಈಜಿಪುರ, ವಿವೇಕನಗರ ಅಂಚೆ, ಬೆಂಗಳೂರು - ೫೬೦ ೦೪೭

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

**HOSATHU** Kannada Monthly / DECEMBER 2012 / Rs. 12
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)